ಮಾಧ್ಯಮಿಕ ಶಾಲೆಗಳ ೮ ನೆಯ ಇಯತ್ತೆಯ ಸಲುವಾಗಿ

# ಅಭಿನವ ಸಾಹಿತ್ಯ ಪ್ರವೇಶ

## ಭಾಗ : ೧



ಸಂಪಾದಕರು :

ಶ್ರೀ. ಶಂ. ಬಾ. ಜೋಶಿ

ಪ್ರೊ. ವ್ಹಿ. ಎಂ. ಇನಾಮದಾರ, ಎಂ. ಎ.

ಶ್ರೀ. ವ್ಹಿ. ಕೆ. ಹೋಳೀಕಟ್ಟಿ, ಬಿ. ಎ., ಎಸ್. ಟಿ. ಸಿ.

ಪ್ರಕಾಶಕರು :

ರಾ. ಗೋ. ಹುಕ್ಕೇರಿ,

ಮಾರ್ಕೆಟ್ ಬೀದಿ :: ಧಾರವಾಡ

೧೯೫೫

ಮುದ್ರಕರು :
ಬಿ. ಎನ್. ಹುದ್ದಾರ
ಭಾರತ ಮುದ್ರಣಾಲಯ,
ಧಾರವಾಡ.

## ಕೃತಜ್ಞತೆ

ನಮ್ಮ ಅಭಿನವ ಸಾಹಿತ್ಯ ಪ್ರವೇಶವನ್ನು ಅಣಿಗೊಳಿಸಲು ಸಹಕರಿಸಿದ ಹಿರಿ–ಕಿರಿಯ ಎಲ್ಲ ಸಾಹಿತ್ಯಿಕರಿಗೆ, ಅವಶ್ಯವಿದ್ದ ಸಂದರ್ಭ ಗ್ರಂಥಗಳನ್ನು ಒದಗಿಸಿದ ಕರ್ನಾಟಕ ಪ್ರಾದೇಶಿಕ ಗ್ರಂಥಾಲಯದ ಚಾಲಕರಿಗೆ, ಅಂದವಾದ ಚಿತ್ರಗಳನ್ನು ಬರೆದು ಕೊಟ್ಟ ಕಲಾವಿದರಿಗೆ, ಒಳ್ಳೆಯ ಪಡಿಯಚ್ಚುಗಳನ್ನು ಸಿದ್ಧಪಡಿಸಿಕೊಟ್ಟ ಪಡಿಯಚ್ಚುಗಾರರಿಗೆ, ಸಕಾಲಕ್ಕೆ ಮುದ್ರಿಸಿಕೊಟ್ಟ ಮುದ್ರಕರಿಗೆ ನಾವು ಕೃತಜ್ಞರಾಗಿದ್ದೇವೆ.

— ಪ್ರಕಾಶಕ.

ಪ್ರಕಾಶಕರು:
ಶಾ. ಗೋ. ಹುಕ್ಕೇರಿ
ಮಾರ್ಕೆಟ ಬೀದಿ,
ಧಾರವಾಡ.

# ಅರಿಕೆ



ಈ ' ಅಭಿನವ ಸಾಹಿತ್ಯ ಪ್ರವೇಶ ' ವನ್ನು ೧೩ ರಿಂದ ೧೫ನೆಯ ವಯಸ್ಸಿನ ವಿದ್ಯಾರ್ಥಿಗಳನ್ನು ಕಣ್ಣೆದುರಿಗೆ ಇಟ್ಟುಕೊಂಡು ರಚಿಸಲಾಗಿದೆ. ಸರಕಾರದವರು ಮಾಧ್ಯಮಿಕ ಶಾಲೆಗಳ ವಿದ್ಯಾರ್ಥಿಗಳ ಸಲುವಾಗಿ ಗೊತ್ತುಪಡಿಸಿರುವ ಅಭ್ಯಾಸ ಪತ್ರಿಕೆಯನ್ನು ಅನುಸರಿಸಿ ಇದನ್ನು ಅಣಿಗೊಳಿಸಿದ್ದೇವೆ. ಕೇಂದ್ರ ಮಂತ್ರಿ ಸರ್ ಚಿಂತಾಮಣಿ ದೇಶಮುಖ ಅವರು, ನಮ್ಮ ದೇಶದ ಮಾಧ್ಯಮಿಕ ಶಾಲೆಗಳ ಅಭ್ಯಾಸದ ಮಟ್ಟವು, ಕೆಂಬ್ರಿಜ್ಜಿನ ಪ್ರೌಢ ಪರೀಕ್ಷೆಗಿಂತ ಕೆಳಗೆ ಇರಕೂಡದು, ಎಂದು ತಮ್ಮ ನಿಶ್ಚಿತ ಅಭಿಪ್ರಾಯವನ್ನು ಸಾರಿದ್ದಾರೆ. ಜಾಗತಿಕ ರಂಗದಲ್ಲಿ ಭಾರತವು ಇನ್ನಾವ ರಾಷ್ಟ್ರಕ್ಕಿಂತಲೂ ಹಿಂದುಳಿಯಬಾರದಾಗಿದ್ದರೆ ಸರ್ ಚಿಂತಾಮಣಿಯವರು ಕೊಟ್ಟ ಎಚ್ಚರಿಕೆಯನ್ನು ಕಡೆಗಣಿಸಲಿಕ್ಕಾಗುವದಿಲ್ಲ. ನಮ್ಮ ವಿದ್ಯಾರ್ಥಿಗಳ ಭಾವನೆ, ವಿಚಾರಗಳ ಕ್ಷೇತ್ರವು ವಿಸ್ತಾರವಾಗಬೇಕು; ಅವರ ಅರಿವಿನ ಆಳವು ಹೆಚ್ಚಬೇಕೆಂಬ ದೃಷ್ಟಿಯಿಂದ ಇದರೊಳಗಿನ ಪ್ರತಿಯೊಂದು ಪಾಠವನ್ನು ಆಯ್ದುಕೊಳ್ಳಲಾಗಿದೆ.

ಇದೀಗ ಜಾಗತಿಕ ಸಂಕ್ರಮಣ ಕಾಲವು ಒದಗಿದೆ. ಇಂತಹ ಅದಲು ಬದಲಾಟದ ಸಮಯದಲ್ಲಿ ಒಳಿತು ಯಾವುದು, ಕೆಡಕು ಯಾವುದು ಎಂಬುದನ್ನು ನಿರ್ಧರಿಸುವದಕ್ಕೆ ತಿಳಿಯದೆ ಸಮಾಜದಲ್ಲಿ ಶೈಥಿಲ್ಯವು ತಲೆಯೆತ್ತುತ್ತದೆ. ಬಾಹ್ಯ ನಿರ್ಬಂಧಗಳಿಗಿಂತಲೂ ಅಂತರಂಗದ ಸದಭಿರುಚಿಯ ಮೂಲಕ ನಡೆವಳಿಯಲ್ಲಿ ಕಾಣಿಸಿಕೊಂಡ ಸಂಯಮವು ಹೆಚ್ಚು ಬೆಲೆಯುಳ್ಳದ್ದಾಗಿದೆ. ಈ ವಿಶ್ವದೊಳಗಿನ ದಿವ್ಯವಾದ, ಭವ್ಯವಾದ, ಪವಿತ್ರವಾದ, ಉದಾತ್ತವಾದ ಸುಂದರವಾದ ಅಂಶಗಳ ನಿಜವಾದ ಅನುಭವದಿಂದ ಉಂಟಾಗುವ ಸದಭಿರುಚಿಯು ಆ ಮನುಷ್ಯನನ್ನು ಕೀಳು ಮಟ್ಟಕ್ಕೆ ಇಳಿಯಗೊಡುವದಿಲ್ಲ. ಶ್ರೇಷ್ಠ ಕಲೆ ಮತ್ತು ಸಾಹಿತ್ಯವು ಈ ಬಗೆಯ ಅಭಿರುಚಿಯನ್ನು ಉಂಟುಮಾಡಬಲ್ಲದಾಗಿದೆ. ಈ ಬಗೆಯ ಸಾಹಿತ್ಯದ ಸ್ವಲ್ಪ ಪರಿಚಯ ಮಾಡಿಕೊಡುವದು 'ಅಭಿನವ ಸಾಹಿತ್ಯ ಪ್ರವೇಶ'ದ ಮುಖ್ಯ ಗುರಿಯಾಗಿದೆ.

ಈ ಸಂಗ್ರಹದಲ್ಲಿ ಕಥೆಯ ವಿವಿಧ ಪ್ರಕಾರಗಳಿವೆ. ಕಾದಂಬರಿಯ ಸಾರವಿದೆ. ಕಥೆಕಾದಂಬರಿಗಳ ಅಂತರಂಗವನ್ನು ಬಿಡಿಸಿ ತೋರಿಸಿದ್ದಾಗಿದೆ. ಅಭಿನಯಕ್ಕೆ ಅನುಕೂಲವಾದ ನಾಟಕ, ನಾಟಕದ ಭಾಗಗಳಿವೆ. ಬಗೆ ಬಗೆಯ ವಿನೋದದ ಮಾದರಿಗಳಿವೆ; ಗಂಭೀರ ಹಾಗು ಲಘು ಪ್ರಬಂಧಗಳ ಪ್ರಕಾರಗಳಿವೆ. ನಮ್ಮ ಮತ್ತು

ಇತರ ಜನಾಂಗಗಳ ರೀತಿ ಸಂಸ್ಕೃತಿಗಳ ತಿಳುವಳಿಕೆಯನ್ನು ಮಾಡಿಕೊಡುವ ಲೇಖನಗಳಿವೆ. ಇಂತೀ ಬಗೆಯಲ್ಲಿ ಜೀವನದ ವಿವಿಧಾಂಗಗಳ ಪರಿಚಯ ಮಾಡಿ ಕೊಡುವ ಸಾಹಿತ್ಯ ಲೇಖನಗಳಿಂದ ಕೂಡಿದ ಈ ಪುಸ್ತಕಕ್ಕೆ 'ಅಭಿನವ ಸಾಹಿತ್ಯ ಪ್ರವೇಶ'ವೆಂಬ ಹೆಸರು ಉಚಿತವಾಗಿದೆಯೆಂದು ಹೇಳಬಹುದು.

ಸಾಹಿತ್ಯಾನಂದವು ದೊರೆತು ತಿಳಿಗನ್ನಡದಲ್ಲಿ ಚೆನ್ನಾಗಿ ಮಾತನಾಡುವ ಹಾಗು ಬರೆಯುವ ಸಾಮರ್ಥ್ಯವು ಉಂಟಾಗುವಂತೆ ಇದರ ಪಾಠಗಳ ರಚನೆಯಿದೆ. ಪ್ರಾಚೀನ ಮತ್ತು ಅರ್ವಾಚೀನ ಗದ್ಯ-ಪದ್ಯಗಳೊಳಗಿಂದ ಒಳ್ಳೊಳ್ಳೆಯ ಭಾಗ ಗಳನ್ನು ಸಂಗ್ರಹಿಸಿಕೊಡಲಾಗಿದೆ. ಪ್ರತಿಯೊಂದು ಪಾಠದ ಕೊನೆಗೆ ಭಾಷಾ ಭ್ಯಾಸ, ಶಬ್ದವಿಚಾರ, ವಾಕ್-ಶಿಕ್ಷಣ, ಚರ್ಚೆ ಮತ್ತು ಬರೆಹಗಳೆಂಬ ವಿಭಾಗ ಗಳಲ್ಲಿ ವಿದ್ಯಾರ್ಥಿಗಳ ವಿಮರ್ಶೆ, ವಿಚಾರ ಮತ್ತು ವಿವೇಚನಾ ಸಾಮರ್ಥ್ಯವು ಬೆಳೆಯುವಂತೆ ಪ್ರಶ್ನೆಗಳನ್ನು ಕೊಡಲಾಗಿದೆ. ಭಾಷಾಭ್ಯಾಸದಲ್ಲಿ ಭಾಷೆ, ಶೈಲಿ ಮತ್ತು ವಿಚಾರಸ್ಪಷ್ಟೀಕರಣದಂತಹ ವಿಷಯವು ಅಡಕವಾಗಿದೆ. ಶಬ್ದವಿಚಾರದಲ್ಲಿ ವಿಚಾರದ ಸೂಕ್ಷ್ಮತೆಗೆ ಅಗತ್ಯವಾದ ಶಬ್ದಗಳ ಸೂಕ್ಷ್ಮ ಅರ್ಥಭೇದಾದಿ ಸಂಗತಿ ಗಳಿಗೆ ಗಮನಕೊಡಲಾಗಿದೆ. ವಾಕ್-ಶಿಕ್ಷಣದಲ್ಲಿ ಹುಡುಗರಿಗೆ ಶ್ರೇಷ್ಠ ಸುಂದರ ಭಾಗಗಳನ್ನು ಪಾಠಮಾಡಲು ಪ್ರೋತ್ಸಾಹಿಸಿದ್ದಾಗಿದೆ. ಕಥಾಸ್ಪರ್ಧೆ ಅಭಿನಯಾದಿ ಗಳ ಮೂಲಕ ವಾಕ್-ಶಿಕ್ಷಣದಿಂದ ಮಕ್ಕಳ ಭಾವನೆಗಳಿಗೆ ಸುಸಂಸ್ಕಾರವು ದೊರೆಯುವದು. ಚರ್ಚೆಯ ವಿಭಾಗದ ಮಹತ್ತ್ವವಂತೂ ಅಷ್ಟಿಷ್ಟಲ್ಲ. 'ವಾದೇ ವಾದೇ ಜಾಯತೇ ತತ್ತ್ವಬೋಧಃ'. ವಿವಾದ ಚರ್ಚೆಗಳನ್ನು ಸಮರ್ಪಕವಾಗಿ ನಡಿಸಲರಿಯದವರು ಪ್ರಜಾರಾಜ್ಯದಲ್ಲಿ ಹಿಂದುಳಿದವರಾಗುವಲ್ಲಿ ಸಂದೇಹವಿಲ್ಲ. ಈ ದೃಷ್ಟಿಯಿಂದ ವಿದ್ಯಾರ್ಥಿಗಳಲ್ಲಿ ಚರ್ಚೆಗಳನ್ನು ನಡೆಸುವ ಯೋಗ್ಯ ಶಿಕ್ಷಣವು ದೊರೆಯಬೇಕೆಂದು ಪ್ರತಿ ಪಾಠದಲ್ಲಿ ಅಂತಹ ಒಂದೆರಡು ವಿಷಯಗಳನ್ನಾದರೂ ಸೂಚಿಸಿದೆ. ಪ್ರತಿಯೊಂದು ಸಂಗತಿಯನ್ನು ಅನುಕೂಲ ಪ್ರತಿಕೂಲ ಎರಡೂ ನಿಟ್ಟಿನಿಂದಲೂ ಚೆನ್ನಾಗಿ ವಿಮರ್ಶಿಸಿ ಅರಿತುಕೊಂಬ ರೂಢಿಯು ಮೈಯುಂಡರೆ ಏಕಾಂಗಿ ದೃಷ್ಟಿಯ ಎಗ್ಗರು ಆಗುವ ಹೆದರಿಕೆಯಿಲ್ಲ. ಕೊನೆಗೆ ಬರೆಹ—ಪ್ರಬಂಧ, ಪತ್ರವ್ಯವಹಾರ, ಆತ್ಮಚರಿತ್ರೆ, ಕಥೆ ಮೊದಲಾದ ಒಂದಿಲ್ಲೊಂದು ರೂಪದ ಬರೆಹಕ್ಕಾಗಿ ಅವಕಾಶವನ್ನು ಕಲ್ಪಿಸಿ ಕೊಡಲಾಗಿದೆ.

ಪ್ರತಿಪಾಠದ ಕೊನೆಗೂ ಇಷ್ಟು ವಿವರವಾದ ಅಭ್ಯಾಸದ ಯೋಜನೆಯನ್ನು ಮಾಡಿರುವದರಿಂದ ವಿದ್ಯಾರ್ಥಿಗಳ ತಿಳುವಳಿಕೆಯ ಮಟ್ಟವು ಹೆಚ್ಚದೆ ಇರಲಾರ ದೆಂದು ಹಾರಯಿಸಿದ್ದೇವೆ.

—ಸಂಪಾದಕರು.

# ಪರಿವಿಡಿ

## ಗದ್ಯವಿಭಾಗ

# ೧. ಪ್ರಾರ್ಥನೆಯ ಮಹಿಮೆ.

[ಪ್ರಾರ್ಥನೆಯ ಹದ ತಿಳಿಯದವರಿಗೆ ಬಾಳಿನಲ್ಲಿ ಶಾಂತಿ ದೊರೆಯಲಾರದು. ಪ್ರಾರ್ಥನೆಯ ಅವಶ್ಯಕತೆಯೇ ಎನಿಸದ ಮಾನವನೇ ಇಲ್ಲ. ಆದರೆ, ಯುಕ್ತ ಪ್ರಾರ್ಥನೆಯ ಮನೋಭಾವವನ್ನು ಅನುದಿನವೂ ಉಳಿಸಿಕೊಳ್ಳುವ ಸಾಧನ ಮಾಡಿದವರು ಮಾತ್ರ ವಿರಳ. ಇಂತಹ ವಿರಳರಲ್ಲಿ ಒಬ್ಬರಾದ ಮಹಾತ್ಮಾಜಿಯವರು ಪ್ರಾರ್ಥನೆಯ ಮರ್ಮವನ್ನು ಕೆಳಗೆ ವಿವರಿಸಿದ್ದಾರೆ.

ಶ್ರೀ. ಹೋಳೀಕಟ್ಟಿಯವರು ಸಂಗ್ರಹಿಸಿದ 'ಪ್ರಾರ್ಥನೆ' ಎಂಬ ಪುಸ್ತಕದಿಂದ ಈ ಭಾಗವನ್ನು ಆಯ್ದುಕೊಳ್ಳಲಾಗಿದೆ.]

ಪ್ರಾರ್ಥನೆಯೇ ನನ್ನ ಆಪದ್ಬಂಧುವು. ಇದರ ನೆರವಿಲ್ಲದಿದ್ದರೆ ನನಗೆ ಹುಚ್ಚು ಹಿಡಿದು ಬಹು ದಿನವಾಗುತ್ತಿತ್ತು. ಸ್ವಂತ ಮತ್ತು ಸಾರ್ವಜನಿಕ ಜೀವನದಲ್ಲಿ ಅನೇಕ ಗಂಡಾಂತರಗಳು ಬಂದಿವೆಯೆಂಬುದು ನನ್ನ ಆತ್ಮಚರಿತ್ರೆಯನ್ನೋದಿದವರಿಗೆ ಗೊತ್ತಿರಲು ಸಾಕು. ಇಂತಹ ಗಂಡಾಂತರಗಳು ನನ್ನನ್ನು ಕ್ಷಣಿಕ ದುಃಖದಲ್ಲಿ ನೂಕುವುವು. ಇವುಗಳನ್ನು ಮೆಟ್ಟಿ ನಾನು ನಿಂತಿದ್ದರೆ ನನ್ನ ಶಕ್ತಿಬಲದಿಂದಲ್ಲ; ಆದರೆ ಪ್ರಾರ್ಥನೆಯ ಪ್ರಭಾವದಿಂದ. ಒಂದು ಕಾಲಕ್ಕೆ ಸತ್ಯಶೋಧನೆಯಷ್ಟು ಪ್ರಾರ್ಥನೆಯು ನನ್ನ ಜೀವನದ ಮುಖ್ಯ ಅಂಗವಾಗಿರಲಿಲ್ಲ. ನಾನು ಗಂಡಾಂತರ ಗಳ ಮಡುವಿನಲ್ಲಿ ಸಿಲುಕಿದಾಗ ಪ್ರಾರ್ಥನೆಯ ನೆರವಿಲ್ಲದೆ ಶಾಂತಿಯನ್ನು ಪಡೆಯ ಲಾರೆ ಎಂಬ ಭಾವನೆಯು ಉದಯಿಸಿತು. ಇದರ ಒತ್ತಾಯದಿಂದಲೇ ನಾನು ಪ್ರಾರ್ಥನೆಯ ದಾಸನಾದುದು. ದೇವನಲ್ಲಿ ನನ್ನ ನಂಬುಗೆಯು ಹೆಚ್ಚಾದಂತೆ ಪ್ರಾರ್ಥನೆಯ ಹಂಬಲವೂ ಬೆಳೆಯತೊಡಗಿತು.

ದೇವನಲ್ಲಿ ಮತ್ತು ಪ್ರಾರ್ಥನೆಯಲ್ಲಿ ವಿಶ್ವಾಸವಿಲ್ಲದೆಯೇ ನಾನು ನನ್ನ ಜೀವನ ವನ್ನು ಆರಂಭಿಸಿದೆನು. ಆದರೆ ನನ್ನ ಬಾಳಿನಲ್ಲಿ ಏನೋ ಒಂದು ಬಗೆಯ ಬಣ ಬಣ ಅನಿಸಹತ್ತಿತು. ಆ ಸಮಯದಲ್ಲಿ ದೇಹಕ್ಕೆ ಅನ್ನವು ಅವಶ್ಯವಿದ್ದಂತೆ ಆತ್ಮಕ್ಕೆ ಪ್ರಾರ್ಥನೆಯು ಅವಶ್ಯವೆಂದು ಹೊಳೆಯಿತು. ಆತ್ಮಕ್ಕೆ ಪ್ರಾರ್ಥನೆಯು ಅವಶ್ಯ ವಿದ್ದಷ್ಟು ದೇಹಕ್ಕೆ ಅನ್ನದ ಅವಶ್ಯವಿಲ್ಲವೆಂದೇ ಹೇಳಬಹುದು. ಆರೋಗ್ಯಕ್ಕಾಗಿ ಉಪವಾಸವು ಅತ್ಯವಶ್ಯವಾದುದು. ಆದರೆ ಪ್ರಾರ್ಥನೆಗೆ ಉಪವಾಸವೆಂಬುದಿಲ್ಲ. ಪ್ರಾರ್ಥನೆಯ ಸವಿಯೂಟವು ಜಡವಾಗಲಾರದು. ಜಗದ್ಗುರುಗಳಾದ ಬುದ್ಧ, ಕ್ರಿಸ್ತ, ಮಹಮ್ಮದ ಮೊದಲಾದವರು ಪ್ರಾರ್ಥನೆಯಿಂದಲೇ ಬೆಳಕು ಕಂಡರು. ಈ ಪ್ರಾರ್ಥನೆಯ ನೆರವಿಲ್ಲದಿದ್ದರೆ, ಅವರು ಬಾಳುವದೇ ಅಸಾಧ್ಯವಿತ್ತೆಂದು ಅವರ ಕೃತಿಗಳೇ ಒಡನುಡಿಯುವವು. ಇಂದಿಗೂ ಸಹಸ್ರಾರು ಜನ ಕ್ರಿಸ್ತರು, ಹಿಂದು-ಗಳು, ಮುಸಲ್ಮಾನರು ಪ್ರಾರ್ಥನೆಯಿಂದಲೇ ಶಾಂತಿಯನ್ನು ದೊರಕಿಸಿರುವರು.

ನಮಗೆ ದೇವನಲ್ಲಿ ಅಚಲ ಶ್ರದ್ಧೆಯಿದ್ದುದಾದರೆ, ಪ್ರಾರ್ಥನಾಪರ ಹೃದಯ ವಿದ್ದುದಾದರೆ, ನಾವು ದೇವರನ್ನು (ದಕ್ಷಿಣೆ ದಾನಗಳಿಂದ) ಮರುಳುಗೊಳಿಸುವದು ಅವಶ್ಯವಿಲ್ಲ. ಮತ್ತು ಕೆಲ ಇಷ್ಟಕಾಮನಾ ಪೂರ್ತಿಯಾದರೆ ಅಥವಾ ಆಗಬೇಕೆಂದು ಅವನ ಸೇವೆಯನ್ನು ಕೈಕೊಳ್ಳುವದು ತಪ್ಪು. ಸರ್ವ ಸಮರ್ಪಣ ಭಾವದಿಂದ ಜಗದೀಶನಿಗೆ ಶರಣು ಹೋಗಬೇಕು. ಅಹಂಕಾರದ ಉಚ್ಚಾಟನೆಯಾದ ಹೊರತು ನಮ್ಮಲ್ಲಿರುವ ದುಷ್ಟ ವಿಚಾರಗಳನ್ನು ನಾವು ಜಯಿಸಲಾರೆವು. ಸಂಪೂರ್ಣ ಭಗವದಧೀನರಾಗದೆ ಆತ್ಮ ಸ್ವಾತಂತ್ರ್ಯವು ದೊರಕಲಾರದು. ನಿಜವಾದ ಭಕ್ತನು ಸರ್ವಭೂತಹಿತದ ಕಾರ್ಯದಲ್ಲಿ ಮಗ್ನನಾಗುವನು. ಈ ಸೇವೆಯೇ ಅವನ ದಿವ್ಯಾನಂದದ ಉಗಮಸ್ಥಾನವಾಗುವದು. ಅವನು ಹೊಸ ಮನುಷ್ಯನಾಗಿ ಚೈತನ್ಯದಿಂದ ಕುಣಿಯುವನು. ಜನತಾ ಜನಾರ್ದನ ಸೇವೆಯಲ್ಲಿ ಅವನೆಷ್ಟು ದುಡಿದರೂ ದಣಿವಿಕೆಯು ಅವನನ್ನು ಸೋಂಕಲಾರದು.

ಪ್ರಾರ್ಥನೆ ಪೂಜೆಗಳನ್ನು ಸಲ್ಲಿಸುವ ವೇಳೆಯ ಬಗೆಗೆ ನಾನು ನಿಶ್ಚಿತ ನಿಯಮ-ಗಳನ್ನು ಹೇಳಲಾರೆ. ಪ್ರತಿಯೊಬ್ಬನ ಮನ-ಒಲವಿನ ಮೇಲೆಯೇ ಅದು ಅವಲಂಬಿಸಿರುವದು. ಇವುಗಳಲ್ಲಿ ತೊಡಗಿಸುವ ಪ್ರತಿಯೊಂದು 'ನಿಮಿಷವೂ ಮಾನವನ ಜೀವನದಲ್ಲಿ ಅತ್ಯಂತ ಸ್ಫೂರ್ತಿದಾಯಕ ಮೃದುಮಧುರ ನಿಮಿಷವು ಆಗುವದು. ನಮ್ಮನ್ನು ವಿನಯಶಾಲಿಗಳಾಗಿ ಮಾರ್ಪಡಿಸಿ ಸಾತ್ವಿಕ ಜೀವನದಲ್ಲಿ ಹೆಜ್ಜೆಯಿಡಲು ಪ್ರೇರಿಸುವದೇ ಪ್ರಾರ್ಥನೆಯ ಕುರುಹು.

ಈ ಸಮಯದಲ್ಲಿ ಮಾನವನು ಅಂತರ್ಮುಖಿಯಾಗಿ ತನ್ನನ್ನು ತಾನು ಅರಿಯುವನು. ತಾನು ದಿನದಿನವೂ ಮಾಡಿದ ಕೃತಿಗಳ ಯುಕ್ತಾಯುಕ್ತತೆಯನ್ನು ತೂಗಿನೋಡುವನು. (ತನ್ನಲ್ಲೇಳುವ ಪಾಪ ವಿಚಾರಗಳ ಜ್ವಾಲಾಮುಖಿಯನ್ನು ನಂದಿಸಲು ಸಮರ್ಥನಾಗದೆ ತಳಮಳಗೊಂಡು) ತನ್ನ ದೌರ್ಬಲ್ಯವನ್ನು ದೇವ-ನಿದುರು ಒಪ್ಪಿಕೊಳ್ಳುವನು; ತಾನು ಮಾಡಿದ ಅಪರಾಧಕ್ಕೆ ಕ್ಷಮೆ ಬೇಡುವನು. ಇಂದ್ರಿಯ ನಿಗ್ರಹಕ್ಕಾಗಿ ಬೇಕಾಗುವ ಮನೋಬಲದ ಭಿಕ್ಷೆ ಬೇಡುವನು. ಇಷ್ಟೆಲ್ಲ-ವನ್ನೂ ಮಾಡಲು, ಕೆಲವರಿಗೆ ಒಂದೇ ಒಂದು ನಿಮಿಷ ಸಾಕಾಗಬಹುದು. ಕೆಲವರಿಗೆ ಇಪ್ಪತ್ತುನಾಲ್ಕು ತಾಸುಗಳೂ ಅತ್ಯಲ್ಪವೆಂದೆನಿಸಬಹುದು. ಸರ್ವದಾ ದೇವರ ಸಾಕ್ಷಾತ್ಕಾರವನ್ನು ಅನುಭವಿಸುವವನಿಗೆ ಪರೋಪಕಾರದಲ್ಲಿ ನಿರತನಾಗುವುದೇ ಪ್ರಾರ್ಥನೆಯಾಗಿ ಪರಿಣಮಿಸುತ್ತದೆ. ಇಂತಹರಿಗೆ ಜೀವನವೆಂದರೆ ಪ್ರಾರ್ಥನೆಯಿದ್ದಂತೆ, ಇಲ್ಲವೆ ಎಡೆಬಿಡದೆ ನಡೆಯುವ ದೇವತಾರ್ಚನೆ ಇದ್ದಂತೆ.

ನನ್ನ ಅನುಭವವನ್ನು ನಿಮ್ಮೆದಿರು ಇಟ್ಟಿದ್ದೇನೆ. ಪ್ರತಿಯೊಬ್ಬನು ಪ್ರಾರ್ಥನೆಯ ಅಮೃತ ಬಿಂದುವನ್ನು ಸೇವಿಸಲಿ ! ಇದರ ಫಲವಾಗಿ, ದಿನದಿನವೂ ತನ್ನ ಜೀವನದಲ್ಲಿ

ಶಬ್ದಾತೀತ ಅನುಪಮ ನಾವೀನ್ಯವನ್ನು ಪಡೆಯಲಿ ! ಅನುದಿನವೂ ತನ್ನ ಜೀವನ ಗ್ರಂಥಕ್ಕೆ ಚಿರನೂತನ ರಸನಿಮಿಷಗಳ ಹೊಸ ಪುಟಗಳನ್ನು ಜೋಡಿಸಲಿ !

—ಗಾಂಧೀಜಿ

( ಸಂಗ್ರಾಹಕರು:– ವೆಂ. ಕೃ. ಹೋಳೀಕಟ್ಟಿ )

## ಅಭ್ಯಸನಗಳು

**ಪ್ರಶ್ನೆಗಳು :—**

(೧) ಗಾಂಧೀಜಿಯವರ ಮನಸ್ಸು ಪ್ರಾರ್ಥನೆಯ ಕಡೆಗೆ ಏಕೆ ಒಲಿಯಿತು ?

(೨) ಪ್ರಾರ್ಥನಾ ಪರ ಜೀವಿಯು ಆನಂದವನ್ನು ಏತರಲ್ಲಿ ಪಡೆಯುವನು ?

(೩) ಪ್ರಾರ್ಥನೆಯ ಕುರುಹು ಯಾವುದು ?

(೪) ಪ್ರಾರ್ಥನಾ ಸಮಯದಲ್ಲಿ ಭಕ್ತನ ಮನಸ್ಥಿತಿಯು ಹೇಗಿರುವದು ?

(೫) ಪ್ರಾರ್ಥನೆಯ ಸಫಲತೆಯ ಲಕ್ಷಣಗಳೇನು ?

**ಭಾಷಾಭ್ಯಾಸ :—**

(೧) [೧] ಪ್ರಾರ್ಥನೆಯಂತಹ ಗಹನ ವಿಚಾರವನ್ನು ತಿಳಿಯಾಗಿ ವಿವರಿಸುವ ರೀತಿಯು ಬಹು ಮಾರ್ಮಿಕವಾಗಿದೆ. ನಿಮ್ಮ ಪುಸ್ತಕದಲ್ಲಿ ಬಂದ 'ಬಾಳುವ ಹದ' ಎಂಬ ಪಾಠದಲ್ಲಿಯೂ ಇದೇ ಬಗೆಯ ಶೈಲಿಯನ್ನು ನೀವು ನೋಡಬೇಕು.

[೨] ಕೆಳಗಿನ ವಾಕ್ಯಗಳಲ್ಲಿಯ ವಿಚಾರಗಳನ್ನು ಸ್ಪಷ್ಟವಾಗಿ ಬರೆಯಿರಿ.

(೧) ಪ್ರಾರ್ಥನೆಯ ಸನಿಯೂಟವು ಜಡವಾಗಲಾರದು.

(೨) ನಿಜವಾದ ಭಕ್ತನು ಸರ್ವಭೂತಹಿತದ ಕಾರ್ಯದಲ್ಲಿ ಮಗ್ನನಾಗುವನು.

(೩) ಇಂತಹರಿಗೆ ಜೀವನವೆಂದರೆ ಪ್ರಾರ್ಥನೆಯಿದ್ದಂತೆ.

**ಶಬ್ದವಿಚಾರ :—**

(೧) ನಂಬಿಕೆ, ನಂಬುಗೆ, ನಡಿಗೆ — ಈ ನಾಮಗಳು, ನಂಬು, ನಡಿ, ಎಂಬ ಧಾತುಗಳಿಂದ ಬಂದಿವೆ. ಇದರಂತೆ ಕೊಡು, ಮಾಡು, ತೋರು, ಕಾಣು — ಇವುಗಳಿಂದ ಉಂಟಾದ ನಾಮಗಳನ್ನು ಹೇಳಿರಿ.

(೨) ಮೆಟ್ಟಿನಿಲ್ಲು, ತೂಗಿನೋಡು, ಒಡನುಡಿ, ಬೆಳಕುಕಾಣು, ದಾಸನಾಗು — ಇವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.

(೩) ಶಬ್ದಾತೀತ, ರಸನಿಮಿಷ, ಅಂತರ್ಮುಖಿಯಾಗು — ಇವುಗಳ ಅರ್ಥವನ್ನು ಹೇಳಿರಿ.

**ವಾಕ್‌ಶಿಕ್ಷಣ :—**

ಕಣ್ಮಲರಳ್ಕರಿಂದೊಸರೆ ನಿಮ್ಮನೆ ನೋಡುತುಮಂತರಂಗದೊಳ್ ।
ಪೊಣ್ಮೆ ವಿಶುದ್ಧಿ ಭಾವಿಸುತೆ ನಾಲಿಗೆ ರಾಗಿಸೆ ಪಾಡುತಂಗದೊಳ್ ॥
ಉಣ್ಮಿರೆ ರೋಮ ಜಾಲವೆರಗುತ್ತನು-ಕಂಪನ-ವೆತ್ತ ಕೈಗಳಿಂ ।
ದಣ್ಮಿ ತವಾಂಘ್ರಿಗಳ್ಗಲರನರ್ಚಿಪೆನೆಂದಪರಾಜಿತೇಶ್ವರಾ ! ॥೧॥

(೧) ಈ ಪದ್ಯವನ್ನು ಪಾಠಮಾಡಿರಿ. ಪ್ರಾರ್ಥನೆಯ ಕಾಲದ ತನ್ಮಯತೆಯನ್ನು ಇಲ್ಲಿ ಬಣ್ಣಿಸಲಾಗಿದೆ. ಇಂತಹ ಅನುಭವವನ್ನು ನೀವು ಇಂಪಾದ ಸಂಗೀತವನ್ನು ಕೇಳಿದಾಗ, ಸುಂದರ ನೋಟ ಕಣ್ಣಿಗೆ ಬಿದ್ದಾಗ, ಸ್ಫೂರ್ತಿದಾಯಕ ವ್ಯಾಖ್ಯಾನವನ್ನು ಕೇಳಿದಾಗ ಅನುಭವಿಸಿರುವಿರಾ ?

(೨) ಎರಡನೆಯ ವಾಕ್ಯ ವೃಂದವನ್ನು ಓದಿರಿ. ಇದನ್ನು ಸಂಭಾಷಣೆಯ ರೂಪದಲ್ಲಿ ಬರೆಯಿರಿ. ಉದಾ :—

ಸಂದರ್ಶಕ :— ಮಹಾತ್ಮಾಜಿ, ಪ್ರಾರ್ಥನೆಯಲ್ಲಿ ನಿಮಗೆ ಮೊದಲಿನಿಂದಲೂ ವಿಶ್ವಾಸವಿದ್ದಿತೇ ?

ಗಾಂಧೀಜಿ :— ಇಲ್ಲ, ಪ್ರಾರ್ಥನೆಯಲ್ಲಿ ವಿಶ್ವಾಸವಿಲ್ಲದೆಯೇ ನನ್ನ ಜೀವನವನ್ನು ಆರಂಭಿಸಿದೆ.

ಸಂ :— ....................

ಚರ್ಚೆ :—

(೧) ಫಲಾಶೆಯಿಂದ ಭಜಿಸುವದು ಪ್ರಾರ್ಥನೆಯಲ್ಲ, ಭಿಕ್ಷೆ.

(೨) ಮನಸ್ಸಿನ ಪವಿತ್ರಭಾವನೆಯೇ ಮಡಿ.

ಬರೆಹ :—

ಮನಸ್ಸಿನ ಗಡಿಬಿಡಿ ಮತ್ತು ವ್ಯಥೆ ಇವನ್ನು ಕಳೆದುಕೊಳ್ಳಲು ನೀವು ಎಷ್ಟು ಬಗೆಯಿಂದ ಪ್ರಯತ್ನಿಸಬಹುದೆಂಬುದನ್ನು ಬರೆಯಿರಿ.

# ೨. ಕನ್ನಡ ಭಾಗ್ಯಶ್ರೀ ಬಸವನಾಳರು

[ ನಮ್ಮ ಪ್ರಾಂತದ ಪುನರುಜ್ಜೀವನಕ್ಕಾಗಿ ತಮ್ಮ ಜೀವನವನ್ನು ಮುಡುಪಿಟ್ಟ ಮಹನೀಯರೆಂದು ಶ್ರೀ. ಬಸವನಾಳರು ಸರ್ವವಂದ್ಯರಾಗಿದ್ದಾರೆ. ಆ ಪೂಜ್ಯವ್ಯಕ್ತಿಗಳಲ್ಲಿರುವ ಆದರ, ಪ್ರೀತಿಗಳು ಪ್ರೊ. ಮಾಳವಾಡರ ಈ ಲೇಖನ ಶೈಲಿಯಲ್ಲಿ ಉಕ್ಕಿ ಒಡಮೂಡಿ ನಿಂತುದನ್ನು ಮನಗಾಣಬಹುದು.]

ಶರಣರಂತೆ ಬಾಳಿದ ಪ್ರೊ. ಶಿ. ಶಿ. ಬಸವನಾಳರ ಮರಣವೂ ಕೂಡ ಅವರು ಶರಣರೆಂಬುದನ್ನು ತೋರಿಸಿಕೊಟ್ಟಿತು. ೨೨-೧-ಜಾನೆಯ ದಿನ ಮಧ್ಯಾಹ್ನ ಮೂರು ಗಂಟೆಗೆ ಕರ್ನಾಟಕ ವಿಶ್ವವಿದ್ಯಾಲಯದ ಸಭೆ. ಎಂದಿನಂತೆ ಪ್ರೊ. ಬಸವನಾಳರು ಪ್ರಸನ್ನವದನರಾಗಿ ನಮ್ಮೊಂದಿಗೆ ಕುಳಿತಿದ್ದರು. ಚರ್ಚೆಯ ಕಾಲಕ್ಕೆ ಎಂದಿನಂತೆ ಗಾಂಭೀರ್ಯದಿಂದ ತುಂಬಿದ ಸಮತೂಕದ ಮಾತನ್ನೇ ಮೆಲುದನಿಯಲ್ಲಿ ಮಿತವಾಗಿ ಹೇಳಿದರು. ಮುಕ್ಕಾಲು ಗಂಟೆ ಸಭೆಯಲ್ಲಿ ಭಾಗವಹಿಸಿದ ನಂತರ ಅನೇಕರ ಗಮನಕ್ಕೆ ಬರದ ರೀತಿಯಲ್ಲಿ ಹೊರಗೆ ಹೋದರು. ಮುಂದೆ ಚರ್ಚೆಗೆ ಕಾವೇರಿದಾಗ ಸಭೆಯಲ್ಲಿಯ ಹಿರಿಯರು 'ಬಸವನಾಳರು ಎಲ್ಲಿ ಹೋದರು ? ಹೊರಗಿರಬಹುದು ಕರೆಯಿರಿ' ಎಂದರು. ಮುಂದೆ ಮುಕ್ಕಾಲು ಗಂಟೆಯ ನಂತರ ನಾವೆಲ್ಲ ಭೀಷಣವಾದ ಸುದ್ದಿಯನ್ನು ಕೇಳಬೇಕಾಯಿತು. ಸಭೆಯನ್ನು ಹಾಗೆಯೇ

ನಿಲ್ಲಿಸಿ ಅವರ ಮನೆಗೆ ತೆರಳಿದೆವು. ಹಾಸಿಗೆಯಲ್ಲಿ ನಿದ್ದೆ ಹೋದಂತಿದ್ದ ಬಸವನಾಳರ ಮೃತದೇಹವನ್ನು ಕಂಡು ತಲ್ಲಣಿಸಿದೆವು.



ಶ್ರೀ. ಶಿ. ಶಿ. ಬಸವನಾಳರು.

ಸಭೆಯ ಸಕ್ಕೆ ವ್ಯತ್ಯಯ ಬರಬಾರದೆಂದು ಬಸವನಾಳರು ಹೊರಗೆ ಹೋಗಿ ಕಾರು ತೆಗೆದುಕೊಂಡು ಡಾಕ್ಟರರ ಮನೆಗೆ ಹೋದರು. ಎದೆಯ ವೇದನೆಗಾಗಿ ಚುಚ್ಚುಮದ್ದು ತೆಗೆದುಕೊಂಡು ಮನೆಗೆ ಮರಳಿದರು. ಹಾಸಿಗೆಯಲ್ಲಿ ಒರಗಿದರು. ಕಾಫಿ ತರಲು ಹೇಳಿದರು. ಅದು ಬರುವದರೊಳಗಾಗಿ ಅವರ ಪ್ರಾಣಪಕ್ಷಿ ಹಾರಿಹೋಗಿತ್ತು. ಕೆಲವು ದಿನಗಳಿಂದ ಅವರ ಪತ್ನಿ ಭೀಕರವಾದ ಎದೆನೋವಿನಿಂದ ನರಳುತ್ತಿದ್ದರು. ಮನೆಗೆ ಮರಳಿದ ಕೂಡಲೇ ಬಸವನಾಳರು ತಮ್ಮ ಪತ್ನಿಗೆ ನಗು-ಮೊಗದಿಂದಲೇ ಹೇಳಿದರಂತೆ: 'ನಿನ್ನ ನೋವನ್ನು ನಾನು ತೆಗೆದುಕೊಂಡು ಬಂದಿದ್ದೇನೆ' ಎಂದು. ನಿಜ, ಅವರ ಪತ್ನಿ ಈಗ ಗುಣಮುಖವಾಗಹತ್ತಿದ್ದಾರೆ. ಬಸವನಾಳರು ಮಾತ್ರ ಹೋದರು. ಇದೂ ಒಂದು ಶರಣರ ಲೀಲೆಯಲ್ಲವೇ?

೨೩—೧—೫೧ನೆಯ ದಿನ ಶವಸಂಸ್ಕಾರ ನಡೆಯಿತು. ನಿತ್ಯವೂ ಅವರು ಸಂಜೆಗೆ ತಿರುಗಾಡಲು ಹೊರಡುವ ಹೊತ್ತಿಗೆ, ಅದೇ ದಾರಿಯಲ್ಲಿ ಮೆರವಣಿಗೆ

ಹೊರಟಿತು. ನಿತ್ಯವೂ ಅವರು ಕೂಡುತ್ತಿದ್ದ ತಾಣದ ನೆರೆಯಲ್ಲಿ—ಲಿಂಗಾಯತ ನಗರಭವನದ ಉದ್ಯಾನದಲ್ಲಿ–ಅವರ ದೇಹವನ್ನು ಭೂದೇವಿಯ ಮಡಿಲಿಗೆ ಹಾಕಿದು-ದಾಯಿತು. ಮಿಂಚಿನ ವೇಗದಿಂದ ಹಬ್ಬಿದ ಸುದ್ದಿ, ಪತ್ರಿಕಾ ಪ್ರಕಟನೆಗಳಿಂದಾಗಿ ಅಸಂಖ್ಯ ಜನರು ಅಲ್ಲಿ ನೆರೆದಿದ್ದರು. ವಿಶ್ವವಿದ್ಯಾಲಯದ ಉಪಕುಲಗುರುಗಳು, ವಿದ್ಯಾಖಾತೆಯ ಡಾಯರೆಕ್ಟರರು, ವಿಶ್ವವಿದ್ಯಾಲಯದ ಸದಸ್ಯರು, ಕಚೇರಿಯ ಸಿಬ್ಬಂದಿ, ನಗರದ ಹಿರಿಯರು, ಕಿರಿಯರು, ಅಧ್ಯಾಪಕರು, ವಿದ್ಯಾರ್ಥಿಗಳು, ಸಂಘ ಸಂಸ್ಥೆಗಳ ಸಂಚಾಲಕರು, ವರ್ತಕರು, ಆಪ್ತರು, ಇಷ್ಟರು, ಸ್ನೇಹಿತರು, ಸ್ವಾಮಿಗಳು ಇವರೆಲ್ಲ ಸೇರಿ ಮೃತರಿಗೆ ಕೊನೆಯ ಗೌರವ ಸಲ್ಲಿಸಿದರು. ಅಂದು ಧಾರವಾಡದಲ್ಲಿ ನಡೆದ ಆ ಸಮಾಧಿಯ ಕಾರ್ಯ ಧಾರವಾಡದ ಇತಿಹಾಸದಲ್ಲಿಯೇ ಅಭೂತಪೂರ್ವವಾದುದು. ಎಂತೆಂತಹ ಸಂಯಮಿಗಳೂ ಕಣ್ಣೀರು ಸುರಿಸದೆ ಇರಲಿಲ್ಲ. ನಗರದ ಸಾರ್ವಜನಿಕ ಸಭೆ ಸೇರಿ ನಾಗರಿಕ ಸನ್ಮಾನ ಸಲ್ಲಿಸುವಂತಿತ್ತು, ಅಂದಿನ ದಶ್ಯ. ಲಿಂಗೈಕ್ಯ ಬಸವನಾಳರನ್ನು ಕಳೆದುಕೊಂಡು ರಾತ್ರಿ ೮ ಗಂಟೆಗೆ ಮರಳಿದೆವು. ಹಿಂದಿನ ದಿನ ಸಭೆಯಲ್ಲಿ ಸೇರಿದ್ದ ನಾವು ಬಸವನಾಳರನ್ನು ಕಳಿಸಿಬಂದೆವು.

ಶ್ರೀ ಬಸವನಾಳರು ಒಂದು ವ್ಯಕ್ತಿಯಾಗಿರಲಿಲ್ಲ; ನಮ್ಮ ನಾಡಿನ ಶಕ್ತಿಯಾಗಿದ್ದರು. ಅವರು ಮಾನವರಾಗಿರಲಿಲ್ಲ; ಮಹಂತರಾಗಿದ್ದರು. ಸಂಸಾರದ ಮಧ್ಯದಲ್ಲಿದ್ದೂ ಕೆಸರು ಸೋಂಕದ ಪಂಕಜದಂತಿದ್ದರು. ಅವರನ್ನು ಏನೆಂದು ವರ್ಣಿಸಬೇಕು ? ವಿದ್ವಾಂಸರೆಂದೇ, ಸಾಹಿತಿಗಳೆಂದೇ, ಸಂಘಟಕರೆಂದೇ, ಸಮಾಜನಿಷ್ಠರೆಂದೇ, ಧರ್ಮನಿಷ್ಠರೆಂದೇ, ಕುಟುಂಬನಿಷ್ಠರೆಂದೇ, ಹಿರಿಯರೆಂದೇ, ಗೆಳೆಯರೆಂದೇ ಸವಿಯನ್ನು ಹೊತ್ತುನಿಂತ ಮೂರ್ತಿಯೆಂದೇ, ಕಹಿಯನ್ನು ನುಂಗಿ ನಿಂತ ನಂಜುಂಡನೆಂದೇ, ಜೀವನದಲ್ಲಿ ಸಮನ್ವಯವನ್ನು ರೂಢಿಸಿಕೊಂಡವರೆಂದೇ, ಜೀವನದ ಆಳವಾದ ಅನುಭವ ಪಡೆದವರೆಂದೇ, ಶಿವಾನುಭವಿಗಳೆಂದೇ, ಪತ್ರಿಕಾಕರ್ತರೆಂದೇ, ಸಹಕಾರಿಗಳೆಂದೇ, ವಿದ್ಯಾದಾಯಕರೆಂದೇ, ವಿದ್ಯಾರ್ಥಿಗಳೆಂದೇ, ಕಾರ್ಯಕರ್ತರೆಂದೇ, ತ್ಯಾಗಿಗಳೆಂದೇ, ರಸಿಕರೆಂದೇ, ಸ್ಫೂರ್ತಿದಾಯಕರೆಂದೇ—ಏನೆಲ್ಲವೂ ಅವರಾಗಿದ್ದರು. ಅವರ ಬಹುಮುಖ ವ್ಯಕ್ತಿತ್ವವನ್ನು ಒಂದು ಕಿರಿಯ ಲೇಖನದಲ್ಲಿ ಅಳವಡಿಸುವದು ಹೇಗೆ ತಾನೇ ಸಾಧ್ಯವಾದೀತು ?

ಪ್ರೊಫೆಸರ ಶಿವಲಿಂಗಪ್ಪ ಶಿವಯೋಗಪ್ಪ ಬಸವನಾಳರು ೧೯೧೬ರಲ್ಲಿ ಈ ಭಾಗದ ತಮ್ಮ ಸಮಾಜದವರಲ್ಲಿ ಮೊದಲಿಗರಾಗಿ ಎಂ. ಎ. ಪರೀಕ್ಷೆಯಲ್ಲಿ ಉತ್ತೀರ್ಣರಾದರು. ಕೈತುಂಬ ಸಂಬಳ ಪಡೆಯುವ ಸರಕಾರಿ ನೌಕರಿಯನ್ನು ಕಡೆಗಣಿಸಿ 'ಸೇವೆ, ತ್ಯಾಗ, ವಿದ್ಯಾದಾನ'ದಂತಹ ಮಹೋನ್ನತ ಉದ್ದೇಶಗಳಿಗಾಗಿ ಶಿಕ್ಷಣ ಸಂಸ್ಥೆಯನ್ನು ಕಟ್ಟಲು ನಿರತರಾದರು. ವಿದ್ಯಾದಾನದ ಘನವಾದ ಕಾರ್ಯವನ್ನು ಕೈಕೊಂಡು, ಕೊನೆಯ ಉಸಿರು ಇರುವವರೆಗೂ ಆ ಕಾರ್ಯ ಗೈದ್ದರು. ಅವ್ಯಾಹತವಾಗಿ ೨೮ ವರುಷಗಳ ವರೆಗೆ ಹಾಯಸ್ಕೂಲಿನ ಶಿಕ್ಷಕರಾಗಿ, ಮುಖ್ಯಾಧ್ಯಾಪಕ

ರಾಗಿ, ಕಾಲೇಜಿನ ಪ್ರೊಫೆಸರರಾಗಿ, ವ್ಹಾಯಿಸ ಪ್ರಿನ್ಸಿಪಾಲರಾಗಿ ಸೇವೆ ಸಲ್ಲಿಸಿದರು. ಎಂಟು ವರುಷಗಳವರೆಗೆ ಗ್ರಂಥಪರಿಷ್ಕರಣ ಮಾಡಿ, ಪತ್ರಿಕೋದ್ಯೋಗಿಗಳಾಗಿ ವಿದ್ಯಾದಾನ ಗೆಯ್ದರು. ಕೊನೆಯ ಗಳಿಗೆಯವರೆಗೆ ವಿದ್ಯಾರ್ಥಿಗಳಾಗಿ ಉಳಿದು ಜ್ಞಾನಸಂಗ್ರಹ ಮಾಡಿಕೊಂಡರು. ಶ್ರೇಷ್ಠ ಮೇಧಾವಿಗಳೂ ದೀರ್ಘವಾದ ವಾಚನ ದಲ್ಲಿ ಮಗ್ನರಾದವರೂ ಆದ ಇವರ ಜ್ಞಾನಸಂಗ್ರಹ ಹಿರಿದಾದುದು. ಸಂಸ್ಕೃತ, ಕನ್ನಡ, ಇಂಗ್ಲಿಷ ಭಾಷೆಗಳ ಪ್ರಭುತ್ವದೊಂದಿಗೆ ನೆರೆಯ ಭಾಷೆಗಳ ಪರಿಚಯವನ್ನು ಪಡೆದು ಕೊಂಡು ಈಚೆಗೆ ಪರದೇಶದ ಭಾಷೆಗಳ ಅಭ್ಯಾಸಕ್ಕೆ ಕೈಯಿಕ್ಕಿದ್ದರು. ಅವರ ಮನೆ ಯಲ್ಲಿಯ ಗ್ರಂಥರಾಶಿ —ಉದಾರ ದಾನದ ನಂತರವೂ– ಬಹು ದೊಡ್ಡದಾಗಿ ಉಳಿದಿದೆ. ಜ್ಞಾನಕ್ಷೇತ್ರದಲ್ಲಿ ಯಾವ ರಂಗದ ವಿಷಯವನ್ನೆತ್ತಿದರೂ ಅದನ್ನು ಆಳವಾಗಿ ಅಭ್ಯಾ ಸಿಸಿದ ಇವರ ಧೀಶಕ್ತಿ ನಮಗೆಲ್ಲ ಅಚ್ಚರಿಯನ್ನುಂಟುಮಾಡುತ್ತಿತ್ತು.

ವಿದ್ಯಾದಾನದ ಕಾರ್ಯ ಕೈಕೊಂಡಾಗಲೇ ಇವರು ಸಮಾಜ ಸಂಘಟನೆಯ ಕಾರ್ಯಕ್ಕೂ ಕೈಹಾಕಿದ್ದರು. ಭದ್ರವಾದ ಆರ್ಥಿಕ ತಳಹದಿಯು ಸಮಾಜೋದ್ಧಾರದ ಹಾದಿಯಲ್ಲಿ ಮಹತ್ತ್ವದ ಅಂಗವೆಂಬುದನ್ನು ಅರಿತ ಇವರು ಬ್ಯಾಂಕಿನ ಮ್ಯಾನೇಜಿಂಗ ಡಾಯರೆಕ್ಟರರಾಗಿ ಕಾರ್ಯಮಾಡಿದರು. ಸಹಕಾರೀ ಕ್ಷೇತ್ರದಲ್ಲಿ ವಿಪುಲವಾಗಿ ಜ್ಞಾನಸಂಗ್ರಹಮಾಡಿ ಅನುಭವ ಪಡೆದ ಇವರು ಶ್ರೇಷ್ಠ ಸಹಕಾರಿಗಳೆಂದು ಗಣಿಸಲ್ಪಟ್ಟಿದ್ದರು.

ನಮ್ಮ ನಾಡಿನ ಗುರುಗಳ ಹಿರಿಯರ ವಾತ್ಸಲ್ಯಕ್ಕೆ ಪಾತ್ರರಾದವರಲ್ಲಿ ಬಸವ ನಾಳರು ಮುಖ್ಯರಾಗಿದ್ದರು. ಅವರ ಧಾರ್ಮಿಕ ಜೀವನವು ಅದಕ್ಕೆ ಒಂದು ಮಹತ್ತರ ಕಾರಣವಾಗಿದ್ದಿತು. ಈ ಭಾಗದ ಸಂಘ ಸಂಸ್ಥೆಗಳಿಗೆಲ್ಲ ಅವರು ಆಧಾರ ಸ್ತಂಭರಾಗಿದ್ದರು. ಆದರೆ ಮನೆತುಂಬ ಮಕ್ಕಳಿಂದೊಡಗೂಡಿ ಕುಟುಂಬವತ್ಸಲರೂ ಆಗಿದ್ದರು. ಕರ್ಣಾಟಕ ವಿದ್ಯಾವರ್ಧಕ ಸಂಘಕ್ಕೆ ಶಕ್ತಿಯನ್ನು ತಂದುಕೊಟ್ಟರು. ಕೆ. ಎಲ್. ಈ. ಸೊಸಾಯಿಟಿಯನ್ನು ಕಟ್ಟಿದರು. ಸಾಹಿತ್ಯ ಸಮಿತಿಯನ್ನು ನಿರ್ಮಿಸಿದರು. ಹರಿಹರ ಗ್ರಂಥಮಾಲೆಗೆ ಸ್ಫೂರ್ತಿಯನ್ನಿತ್ತರು. ಅಖಿಲ ಭಾರತ ಶಿವಾನುಭವಗೋಷ್ಠಿಗೆ ನೆರವನ್ನಿತ್ತರು. ಅಖಿಲ ಭಾರತ ವೀರಶೈವ ಮಹಾಸಭೆಗೆ ಅಧ್ಯಕ್ಷರಾದರು. ಕರ್ಣಾಟಕ ವಿಶ್ವವಿದ್ಯಾಲಯವನ್ನು ಅಸ್ತಿತ್ವಕ್ಕೆ ತಂದರು. ಕರ್ಣಾಟಕ ಪ್ರಾದೇಶಿಕ ಗ್ರಂಥಾಲಯದ ನಿರ್ಮಾಣಕ್ಕೆ ಕಾರಣರಾದರು. ಕನ್ನಡ ಸಾಹಿತ್ಯ ಪರಿಷತ್ತಿಗೆ ಘನವಾದ ಸಹಕಾರ ನೀಡಿದರು. ಅಖಿಲ ಭಾರತೀಯ ಪಿ. ಇ. ಎನ್. ಸಂಸ್ಥೆಯ ಈ ಭಾಗದ ಸಂಘಟಕರೂ ಆಗಿದ್ದರು. ಈ ಭಾಗದ ಆವುದೊಂದು ಶೈಕ್ಷಣಿಕ, ಸಾಹಿತ್ಯಿಕ, ಸಾಂಸ್ಕೃತಿಕ, ಆರ್ಥಿಕ, ಸಾಮಾಜಿಕ, ಸ್ವಧರ್ಮದ ಸಂಸ್ಥೆಗಳಲ್ಲಿ ಬಸವನಾಳರ ಮಾರ್ಗದರ್ಶನವಿಲ್ಲದೆ ಯಾವ ಮಹತ್ತ್ವದ ಘಟನೆಯೂ ನಡೆಯುತ್ತಿರಲಿಲ್ಲ. ಹೀಗಿದ್ದರೂ ಅವರ ದೀರ್ಘವಾಚನ ಹಾಗೆಯೇ

ಸಾಗಿತ್ತು. ಅಲ್ಲದೆ ಮಕ್ಕಳ ಮಧ್ಯದಲ್ಲಿ ಚಿಕ್ಕೆಗಳ ಚಂದ್ರಮನಾಗಿ ಅವರು ನಲಿಯುತ್ತಿದ್ದುದನ್ನು ಯಾವಾಗಲೂ ನೋಡಬಹುದಾಗಿತ್ತು.

ಎಂ. ಎ. ಪರೀಕ್ಷೆಗೆ ಅವರ ಐಚ್ಛಿಕ ವಿಷಯ ಇತಿಹಾಸವಾಗಿತ್ತು. ಅಂತೆಯೇ ಅವರು ಲಿಂಗರಾಜ ಕಾಲೇಜಿನಲ್ಲಿ ಇತಿಹಾಸದ ಪ್ರೊಫೆಸರರಾಗಿದ್ದರು. ಆದರೆ ಕೀ. ಶೇ. ಬಿ. ಎಂ. ಶ್ರೀಕಂಠಯ್ಯನವರಂತೆ ಇವರೂ ಕನ್ನಡದ ಗೌರವ ಪ್ರೊಫೆಸರ-ರಾಗಿ ಕಾರ್ಯಮಾಡಿದರು. ಕನ್ನಡ ಭಾಷೆ, ಸಾಹಿತ್ಯಗಳ ಆಳವಾದ ವ್ಯಾಸಂಗದಲ್ಲಿ ಇವರು ಶ್ರೀಕಂಠಯ್ಯನವರ ಹೆಸರನ್ನು ನೆನಪಿಗೆ ತರುತ್ತಿದ್ದರು. ಇವರು ಪ್ರಾಚೀನ ಕಾವ್ಯಗಳ ಕೂಲಂಕಷ ಅಭ್ಯಾಸ ಮಾಡಿದ್ದರು. ವ್ಯಾಕರಣ, ಅಲಂಕಾರ, ಛಂದಸ್ಸುಗಳನ್ನು ಪದರು-ಪದರುಗಳಾಗಿ ಅರಿತುಕೊಂಡಿದ್ದರು. ಆಂಗ್ಲ ಸಾಹಿತ್ಯಾಭ್ಯಾಸದ ಉಚಿತ ಪ್ರಯೋಜನ ಪಡೆದ ಇವರ ವಿಮರ್ಶಕ ದೃಷ್ಟಿಯು ಸೂಕ್ಷ್ಮವೂ ಶುಚಿಯೂ ಆಗಿತ್ತು. ಹೀಗೆ ಪ್ರಾಚೀನ ಹಾಗೂ ಆಧುನಿಕ ವ್ಯಾಸಂಗ ಪದ್ಧತಿಗಳನ್ನು ಸಮನ್ವಯಿಸಿಕೊಂಡ ಇವರ ವಿದ್ವತ್ತು ಶ್ರೇಷ್ಠಮಾದರಿಯನ್ನು ಒದಗಿಸುತ್ತಿತ್ತು. ಅವರು ಕೈಕೊಂಡ ಗ್ರಂಥಪರಿಷ್ಕರಣದಲ್ಲಿ, ಅವರ ಲೇಖನ ಭಾಷಣಗಳಲ್ಲಿ ನಾವು ಇದನ್ನು ಗುರುತಿಸಬಲ್ಲೆವು. ಅವರು ಲಿಂಗರಾಜ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿರುವಾಗಲೇ 'ಮ್ಯೂಸಿಂಗ್ಸ ಆಫ್ ಬಸವ' ಎಂಬ ಇಂಗ್ಲಿಷ ಗ್ರಂಥದ ಸಹಕರ್ತೃಗಳಾದರು. ಸೇವಾನಿವೃತ್ತರಾದ ಮೇಲೆ ಶ್ರೀ. ಮಾಸ್ತಿ ವೆಂಕಟೇಶ ಅಯ್ಯಂಗಾರರಂತೆ ಪತ್ರಿಕೋದ್ಯೋಗ ಕೈಕೊಂಡರು. ಜೊತೆಗೆ ಪ್ರಾಚೀನ ಗ್ರಂಥ ಪ್ರಕಟನೆಯ ಕಾರ್ಯರಂಗಕ್ಕೂ ಇಳಿದರು. ಇವರು ಪರಿಷ್ಕರಿಸಿದ ಗ್ರಂಥಗಳು ಇವರ ಶ್ರೇಷ್ಠಪ್ರತಿಯ ಪಾಂಡಿತ್ಯದ ಪ್ರತೀಕಗಳಾಗಿ ಉಳಿದಿವೆ. (೧) ನಾಗವರ್ಮನ ಕಾವ್ಯಾವಲೋಕನ, (೨) ಭಟ್ಟಾ-ಕಳಂಕನ ಕರ್ಣಾಟಕ ಶಬ್ದಾನುಶಾಸನ, (೩) ಚಾಮರಸನ ಪ್ರಭುಲಿಂಗಲೀಲೆ, (೪) ಷಡಕ್ಷರ ದೇವನ ಶಬರಶಂಕರ ವಿಲಾಸ, (೫) ಹರಿಹರನ ಪಂಪಾಶತಕ ರಕ್ಷಾಶತಕಗಳು, (೬) ಬಸವಣ್ಣನವರ ವಚನಗಳು ಇವುಗಳಲ್ಲದೆ ಶಿವಾನುಭವಕ್ಕೆ ಸಂಬಂಧಪಟ್ಟ ಕೈವಲ್ಯದರ್ಪಣ, ಕಲ್ಪವಲ್ಲರಿ ಇತ್ಯಾದಿ ಕೃತಿಗಳನ್ನು ಇವರು ಪರಿಷ್ಕರಿಸಿದ್ದಾರೆ ಇವರ ಸ್ಫೂರ್ತಿಯಿಂದಲೇ ಚೆನ್ನಬಸವಪುರಾಣ, ಗಿರಿಜಾಕಲ್ಯಾಣ, ವೀರಶೈವ ತತ್ತ್ವಪ್ರಕಾಶ, ಹರಿಹರನ ರಗಳೆಗಳು, 'ಹ್ಯಾಂಡ್ ಬುಕ್ ಆಫ್ ವೀರಶೈವಿಜಮ್', 'ಎ ಕೇಸ್ ಫಾರ ಕರ್ಣಾಟಕ ಯುನಿವರ್ಸಿಟಿ' ಇವುಗಳು ಪ್ರಕಟವಾಗಿವೆ. ಈ ಮೇಲ್ಕಂಡ ಸಂಸ್ಕರಣಗಳನ್ನು ಸಿದ್ಧಗೊಳಿಸುವಲ್ಲಿ, ಪ್ರಸ್ತಾವನೆ ಟೀಕೆ ಟಿಪ್ಪಣಿಗಳನ್ನು ಬರೆಯುವಲ್ಲಿ, ಸಂಸ್ಕರಣಗಳಿಗೆ ಮಾರ್ಗದರ್ಶನ ಮಾಡುವಲ್ಲಿ, ಪಾಂಡಿತ್ಯಪೂರ್ಣ ಭಾಷಣಗಳನ್ನು ತಯಾರಿಸುವಲ್ಲಿ ಕಂಡುಬರುವ ಇವರ ಬಹುಶ್ರುತತ್ವ, ಸಮತೂಕದ ಭಾವ, ಸೂಕ್ಷ್ಮ ಮತಿ ಇವುಗಳನ್ನು ನಾವು ಅನ್ಯತ್ರ ಅಪ್ಪೊಂದು ಕಾಣಲಾರೆವು.

ವ್ಯಾಸಂಗ ಬಲ, ಭಾಷಾಪ್ರಭುತ್ವ, ಅನುಭವದ ಆಳ, ರಸಿಕ ದೃಷ್ಟಿಗಳುಳ್ಳ ಪ್ರೊ. ಬಸವನಾಳರು ನಮ್ಮ ನಾಡಿನ ಶ್ರೇಷ್ಠ ಸಾಹಿತಿಗಳೂ ಆಗಿದ್ದರು. ಅವರ ಮಾತು ಬರೆಹಗಳು ರಸವತ್ತಾಗಿದ್ದವು. ರಸವಂತಿಕೆಯೇ ಸಾಹಿತ್ಯದ ಸೂತ್ರ. ಮುತ್ತಿನ ಹಾರದಂತೆ ನುಡಿದುದು, ಬರೆದುದು ಸಾಹಿತ್ಯವಲ್ಲದೆ ಇನ್ನೇನು ? ಕನ್ನಡ ಪದಗಳನ್ನು ಬರೆಹದಲ್ಲಿ ಅವರು ಪವಣಿಸುವ ಸೊಗಸನ್ನು ನಾನು ಯಾವಾಗಲೂ ಮೆಚ್ಚಿಕೊಂಡಿದ್ದೇನೆ. ಪ್ರಾಚೀನ ಸಾಹಿತ್ಯದ ಅಭ್ಯಾಸ, ನವೀನ ಸಾಹಿತ್ಯ ಸೃಷ್ಟಿಯ ಉಚಿತದೃಷ್ಟಿ ಅವರಿಗಿದ್ದವು. ಕರ್ಣಾಟಕ ವಿದ್ಯಾವರ್ಧಕ ಸಂಘದ ಪ್ರಮುಖ ಕಾರ್ಯಕರ್ತರಾದ ಇವರು ಧಾರವಾಡದ ಕಡೆಯ ಸಾಹಿತ್ಯದ ಚಟುವಟಿಕೆಗಳಲ್ಲಿ ಮುಖ್ಯರಾಗಿ ಕಾಣುತ್ತಿದ್ದರು. ಇಲ್ಲಿಯ ಸಾಹಿತ್ಯ ಸಮ್ಮೇಲನದ ಸ್ವಾಗತಾಧ್ಯಕ್ಷರು, ರಬಕವಿಯಲ್ಲಿ ಸೇರಿದ ಕರ್ಣಾಟಕ ಸಾಹಿತ್ಯ ಸಮ್ಮೇಲನದ ಅಧ್ಯಕ್ಷರು. ಇಂತಹ ಗೌರವದ ಸ್ಥಾನಗಳನ್ನು ಅವರು ಅಲಂಕರಿಸಿದ್ದರು. 'ಜಯಕರ್ನಾಟಕ' ಪತ್ರಿಕೆಯ ಮೂಲಕ ಅವರ ಸಾಹಿತ್ಯವಾಹಿನಿ ಹರಿದುಬಂದಿದೆ. ಅವರು 'ಸಾಹಿತ್ಯ ಸಮಿತಿಯ' ಪತ್ರಿಕೆಯ ಸಂಪಾದಕರೂ ಆಗಿದ್ದರು. ಅನೇಕ ವರುಷಗಳ ಹಿಂದೆಯೇ ಅವರು ಬೆಳಗಾವಿಯಲ್ಲಿ 'ಪ್ರಬೋಧ' ಪತ್ರಿಕೆಯನ್ನು ಹೊರಡಿಸಿ ಕನ್ನಡ ಸಾಹಿತ್ಯಕ್ಕೆ ಸೇವೆ ಸಲ್ಲಿಸಿದರು. ಕೊನೆಕೊನೆಗಂತೂ 'ಜಯಕರ್ನಾಟಕ' ಮಾಸ ಹಾಗೂ ವಾರಪತ್ರಿಕೆಗಳ ಸಂಪಾದನೆಯ ಕಾರ್ಯದಲ್ಲಿ ತಮ್ಮ ಹೆಚ್ಚಿನ ಅವಕಾಶವನ್ನು ವಿನಿಯೋಗಿಸಿದರು. ಆ ಮೂಲಕ ಅವರು 'ಜಯಕರ್ನಾಟಕ' ಸಾಹಿತ್ಯ ಮಂಡಳವನ್ನೇ ನಿರ್ಮಿಸಿದರೆನ್ನ-ಬಹುದು. ಸುಪ್ತಶಕ್ತಿಗಳನ್ನು ಗುರುತಿಸಿ ಅವನ್ನು ಸ್ಫುಟಗೊಳಿಸುವ ಕಾರ್ಯದಲ್ಲಿ 'ಜಯಕರ್ನಾಟಕ' ಅವರಿಗೆ ಅನುಕೂಲಸಾಧನವಾಗಿ ಪರಿಣಮಿಸಿತು. ತರುಣ ಬರೆಹಗಾರರನ್ನು ಹುರಿದುಂಬಿಸುವಲ್ಲಿ, ಶಕ್ತ ಬರೆಹಗಾರರನ್ನು ಉಚಿತ ರೀತಿಯಲ್ಲಿ ವಿಮರ್ಶಿಸುವಲ್ಲಿ ಅವರ ಜಾಣ್ಮೆ ಎದ್ದುಕಾಣುತ್ತಿತ್ತು. ಪ್ರಾಥಮಿಕ, ಮಾಧ್ಯಮಿಕ, ಉಚ್ಚ ವಿದ್ಯಾರಂಗಗಳ ಸಂಪರ್ಕವನ್ನು ಇವರು ಪಡೆದಿದ್ದರೆಂಬುದೂ ಗಮನಿಸ ಬೇಕಾದ ಅಂಶವಾಗಿದೆ.

ಸ್ವಮತದ ಬಗೆಗೆ ಆಸ್ಥೆ, ಕರ್ಣಾಟಕದ ಬಗೆಗೆ ವ್ಯಾಪಕವಾದ ಕಲ್ಪನೆ ಈ ದಿಸೆಯಲ್ಲಿ ಇವರನ್ನು ಶ್ರೀ. ಆಲೂರ ವೆಂಕಟರಾಯರಿಗೆ ಹೋಲಿಸಬಹುದು. ಶಿವಾನುಭವ ಸಮ್ಮೇಲನ, ಸರ್ವಧರ್ಮ ಸಮ್ಮೇಲನಗಳ ಯೋಜಕರಾದ ನವಿಲುಗುಂದದ ಶ್ರೀಗಳ ಬಲಗೈಯಂತಿದ್ದರು ಬಸವನಾಳರು. ಧಾರವಾಡದ ಮೃತ್ಯುಂಜಯ ಸ್ವಾಮಿಗಳು ಬಸವನಾಳರ ಸಲಹೆ ಪಡೆಯದೆ ಆವ ಯೋಜನೆಯನ್ನೂ ಹಮ್ಮುತ್ತಿ-ದ್ದಿಲ್ಲ. ಚಿತ್ರದುರ್ಗದ ಜಗದ್ಗುರುಗಳ ವಿಶೇಷ ಪ್ರೇಮಕ್ಕೂ ಅವರು ಪಾತ್ರರಾಗಿದ್ದರು. ವಿದ್ವತ್ತಿನಲ್ಲಿ ಗೌರೀಶಂಕರದ ಹಿರಿಮೆಯನ್ನು ನೆನಪಿಗೆ ತಂದುಕೊಡುವ ಮೈಸೂರಿನ ಗವಿಮಠಾಧೀಶರು ಬಸವನಾಳರ ವಿದ್ವತ್ತನ್ನು ಮೆಚ್ಚಿಕೊಂಡಿದ್ದರು. ನಮ್ಮ ನಾಡಿನ ಸುವಿಖ್ಯಾತ ವಿದ್ವಾಂಸರಾದ ಡಾ. ನಂದೀಮಠರು ಬಸವನಾಳರನ್ನು ಗುರುಸ್ಥಾನದಲ್ಲಿಟ್ಟು

ಕೊಂಡಿದ್ದರು. ಸ್ವಭಾವದ ಸವಿಯಲ್ಲಿ ಅವರು ಕಿ. ಶೇ. ವೆಂಕಣ್ಣಯ್ಯನವರನ್ನು ಹೋಲುತ್ತಿದ್ದರೆನ್ನಬಹುದು. ಮಧುರವಾದ ಬಾಂಧವ್ಯವನ್ನು ಬೆಳಸಿಕೊಳ್ಳುವಲ್ಲಿ ಮಾಸ್ತಿಯವರಂತೆ ಎಂದು ಹೇಳಬಹುದು.

ವಿವಿಧ ವಯಸ್ಸಿನ, ಪ್ರಕೃತಿಯ, ಅಭಿರುಚಿಯ, ಮತದ ಜನಗಳಿಗೆಲ್ಲ ಬಸವನಾಳರು ಅಚ್ಚುಮೆಚ್ಚಿನವರಾಗಿದ್ದರು. ವೃದ್ಧರೊಂದಿಗೆ, ತರುಣರೊಂದಿಗೆ, ಬಾಲಕರೊಂದಿಗೆ ಸಮರಸವಾಗಿ ಅವರು ಬೆರೆಯುತ್ತಿದ್ದರು. ಸಮರಸವು ಬಸವನಾಳರ ಜೀವನದ ಸೂತ್ರವಾಗಿತ್ತು. ಸಮನ್ವಯವು ಇವರ ಜೀವನದ ಶಕ್ತಿಯಾಗಿತ್ತು. ಸೌಜನ್ಯ-ವಿನಯ-ಶಾಂತ ಸ್ವಭಾವಗಳು ಇವರ ಜೀವನದ ಹಿರಿಯ ಆಸ್ತಿಗಳಾಗಿದ್ದವು.

ಅಚ್ಚುಕಟ್ಟುತನ, ಶುಚಿಯಾದ ಅಭಿರುಚಿ ಇವುಗಳು ಪ್ರೊ. ಬಸವನಾಳರ ವ್ಯಕ್ತಿತ್ವದ ಸ್ಪಷ್ಟವಾದ ಗುರುತುಗಳಾಗಿದ್ದವು. ಅವರ ನಿತ್ಯದ ಬಾಳಿನಲ್ಲಿ ಇವು ಹೊಂದಿಕೊಂಡಿದ್ದವು. ಅವರ ಸರಳವಾದ ವೇಷದಲ್ಲಿ, ಹಿತಮಿತ ವಚನದಲ್ಲಿ ಈ ಗುಣಗಳನ್ನು ನಾವು ಗುರುತಿಸಬಹುದಾಗಿತ್ತು. ಅವರು ತಾಳ್ಮೆಯ ಮೂರ್ತಿಮಂತ ಸ್ವರೂಪರಾಗಿದ್ದರು. ಎಂತಹ ವಿಷಮ ಸನ್ನಿವೇಶದಲ್ಲಿಯೂ ಅವರು ತೋರುತ್ತಿದ್ದ ತಾಳ್ಮೆ ಸಂಯಮಗಳು ಈ ಭಾಗದ ಜನರ ಮನೆಮಾತಾಗಿದೆ. ಎಂತಹ ಶೀಘ್ರಕೋಪಿಗಳೂ ಅವರೆದುರಿಗೆ ತಣ್ಣಗಾಗುತ್ತಿದ್ದರು, ವಾಚಾಳಿಗಳು ಮಾತನ್ನು ಹಿಡಿತಕ್ಕೆ ತಂದುಕೊಳ್ಳುತ್ತಿದ್ದರು. ಘರ್ಷಣೆ ಹೋರಾಟಗಳಿದ್ದಲ್ಲಿ ಬಸವನಾಳರು ಬಂದರೆ, ಮಾತನಾಡಿದರೆ ಇಡಿಯ ವಾತಾವರಣವೇ ಬದಲಾಗುತ್ತಿತ್ತು. ಈ ಭಾಗದ ಸಾರ್ವಜನಿಕ ಜೀವನದಲ್ಲಿ ಅವರಷ್ಟು ಜನಪ್ರಿಯರಾದ ವ್ಯಕ್ತಿಗಳನ್ನು ಕಂಡಿಲ್ಲ. ಇಡಿಯ ಕರ್ಣಾಟಕದಲ್ಲಿ ಇವರಷ್ಟು ಜನಪ್ರಿಯ ಪ್ರಭಾವಶಾಲಿ ವ್ಯಕ್ತಿಗಳು ಅಪರೂಪವೆಂದೇ ಹೇಳಬೇಕು. ಎದ್ದುತೋರುವ ಪರಿಣಾಮವನ್ನುಂಟುಮಾಡುವ ಸುಲಭ ಜನಪ್ರಿಯ ಸಾಧನಗಳನ್ನು ಬಳಸುವ ಚಟವನ್ನು ಅವರು ಎಂದೂ ಇಟ್ಟುಕೊಳ್ಳಲಿಲ್ಲ. ಗ್ರಂಥವಾಚನದ ಹೊರತು ಬೇರಾವ ಚಟವೂ ಅವರಿಗಿರಲಿಲ್ಲ. ಎಲ್ಲ ವಿಷಯಗಳ ಬಗೆಗೆ ಅವರಿಗೆ ಸಾಕಷ್ಟು ಜ್ಞಾನ ಇತ್ತು. ಆದರೆ ಬಣ್ಣದುಂಬುವ ಮನೋವೃತ್ತಿ ಅವರಿಗೆ ಇದ್ದಿಲ್ಲವಾಗಿ ಅವರ ಎಲ್ಲ ಗುಣಗಳಿಗೆ ಸಾಕಷ್ಟು ಪ್ರಚಾರ ದೊರೆಯಲಿಲ್ಲವೆಂಬುದೂ ನಿಜ. ಯಾರು ಯಾವ ಅಭಿಪ್ರಾಯವನ್ನಿಟ್ಟುಕೊಂಡು ಅವರಲ್ಲಿಗೆ ಹೋದರೂ ಅವರವರಿಗೆ ಸಮರ್ಪಕ ಮಾರ್ಗದರ್ಶನ ಬಸವನಾಳರಿಂದ ದೊರೆಯುತ್ತಿತ್ತು. ಮುಗುಡ–ಮುನಿಸು–ಗೊಣಗಾಟಗಳನ್ನು ಅವರು ಎಂದೂ ಪ್ರದರ್ಶಿಸಲಿಲ್ಲ. ಆದರೆ ಅವಕ್ಕೆ ಅವಕಾಶವನ್ನೊದಗಿಸುವ ಅನೇಕ ಸನ್ನಿವೇಶಗಳನ್ನು ಅವರು ಎದುರಿಸಬೇಕಾಗುತ್ತಿತ್ತು. ಅವರ ನಗುಮೊಗ, ಶಾಂತಗುಣ, ಗಾಂಭೀರ್ಯಗಳನ್ನು ಕಂಡವರು ಯಾರೇ ಆಗಲಿ, ಪ್ರಸನ್ನತೆಯನ್ನು ಪಡೆಯಬಹುದಾಗಿತ್ತು.

ಶ್ರೀ. ಬಸವನಾಳರ ಸಹವಾಸ–ಒಡನಾಟಗಳೆಂದರೆ ಹುಣ್ಣಿಮೆಯ ಬೆಳುದಿಂಗಳ ಅನುಭವ ಪಡೆದಂತೆ. ಅಂತಹ ಬೆಳುದಿಂಗಳ ಸವಿಯನ್ನು ನಾನು ಸಾಕಷ್ಟು

ಸವಿದಿದ್ದೇನೆ. ವೃತ್ತಿಯಿಂದ, ಸ್ವಭಾವದಿಂದ, ಆಚರಣೆಯಿಂದ, ಹಿರಿತನದಿಂದ ಅವರು ಇಲ್ಲಿ ಎಲ್ಲರಿಗೂ 'ಮಾಸ್ತರ' ಆಗಿದ್ದರು. ಬಸವನಾಳ ಮಾಸ್ತರರು ಏಕೆ ಹೋದರು? ಎಂಬ ವಿಚಾರದಲ್ಲಿದ್ದ ನನಗೆ ಹೊಳೆದ ಮಾತುಗಳು ಎರಡು : (೧) ಅವರ ಆತ್ಮ ದೇವನಲ್ಲಿ ಪೂರ್ಣತ್ವ ಪಡೆಯಿತು. (೨) ಅವರನ್ನು ನಮ್ಮ ಮಧ್ಯದಲ್ಲಿ ಉಳಿಸಿ ಕೊಳ್ಳುವಷ್ಟು ಯೋಗ್ಯತೆಯನ್ನು ಅವರ ಸುತ್ತಲಿನ ನಾವು ಇನ್ನೂ ಪಡೆದುಕೊಳ್ಳಲಿಲ್ಲ.

ಕನ್ನಡದ ಭಾಗ್ಯಶ್ರೀಯಂತಿದ್ದ ಬಸವನಾಳರನ್ನು ಕಳೆದುಕೊಂಡ ಕನ್ನಡ ಜನತೆಯ ದುರ್ಭಾಗ್ಯಕ್ಕೆ ಮಿತಿಯಿಲ್ಲವೆಂದು ತೋರುತ್ತದೆ. ಆದರೆ ಅವರ ಸವಿಜೀವನ, ಸಮನ್ವಯ ವಿಚಾರಸರಣಿ, ಆಳವಾದ ಪಾಂಡಿತ್ಯ, ಅಪಾರತ್ಯಾಗ-ಸೇವೆಗಳು ಕನ್ನಡಿಗರಿಗೆ ಸ್ಫೂರ್ತಿದಾಯಕವಾಗಿವೆಯಷ್ಟೆ!

—ಸ. ಸ. ಮಾಳವಾಡ.

## ಅಭ್ಯಸನಗಳು

**ಪ್ರಶ್ನೆಗಳು :**

(೧) ಪ್ರೊ. ಬಸವನಾಳರು ವಿದ್ಯಾದಾನದ ಕಾರ್ಯದಲ್ಲಿ ಹೇಗೆ ನಿರತರಾಗಿದ್ದರು?

(೨) ಪ್ರೊ. ಬಸವನಾಳರ ಸಂಘಟನಾ ಶಕ್ತಿಯು ಯಾವ ಯಾವ ದಿಶೆಯಲ್ಲಿ ಪ್ರಕಟವಾಗಿದೆ?

(೩) ಕನ್ನಡದ ಏಳ್ಗೆಗೆ ಪ್ರೊ. ಬಸವನಾಳರು ಯಾವ ಬಗೆಯಲ್ಲಿ ನೆರವಾದರು?

(೪) ಪ್ರೊ. ಬಸವನಾಳರ ಅನುಕರಣೀಯ ಗುಣಗಳಾವವು?

**ಭಾಷಾಭ್ಯಾಸ :—**

(೧) 'ಶ್ರೀ. ಬಸವನಾಳರು ಒಂದು ವ್ಯಕ್ತಿಯಾಗಿರಲಿಲ್ಲ. ನಮ್ಮ ನಾಡಿನ ಶಕ್ತಿಯಾಗಿದ್ದರು' ಈ ವಾಕ್ಯವೃಂದವನ್ನು ಓದಿರಿ.
ಪ್ರಶ್ನೆಗಳ ಮೂಲಕವಾಗಿ ಮಾಡಿದ ಪರಿಣಾಮಕಾರಿಯಾದ ವರ್ಣನೆಯನ್ನು ಇಲ್ಲಿ ಲಕ್ಷಿಸಬೇಕು. ಇದರಂತೆಯೇ ಕೆಳಗಿನ ಸಂದರ್ಭಗಳಲ್ಲಿ ಬೇಕಾದ ಎರಡನ್ನು ಕುರಿತು ಇಷ್ಟವಾದ ಪರಿಣಾಮವನ್ನುಂಟು ಮಾಡುವಂತೆ ಐದು ಪ್ರಶ್ನೆಗಳನ್ನು ಬರೆಯಿರಿ.
[೧] ಬಡತನ [೨] ಮಗುವಿನ ಸುಂದರ ರೂಪ [೩] ಪಂಡಿತ ನೆಹರು ಅವರ ಹಿರಿಮೆ.

(೨) ನಿಮ್ಮ ವರ್ಗದಲ್ಲಿಯ ವಿದ್ಯಾರ್ಥಿಯ ವರ್ಣನೆಯನ್ನು ಅವನ ಹೆಸರನ್ನು ಹೇಳದೆ ಬರೆಯಿರಿ. ಅದನ್ನು ಓದಿ ತೋರಿಸಿದಾಗ ಆ ವಿದ್ಯಾರ್ಥಿಯಾರೆಂಬುದನ್ನು ಉಳಿದವರು ಗುರುತಿಸಬಲ್ಲರೇ? ಎಂಬುದನ್ನು ನೋಡಿರಿ.

(೩) ಕೆಳಗಿನ ವಾಕ್ಯಗಳಲ್ಲಿಯ ವಿಚಾರವನ್ನು ಸ್ಪಷ್ಟಗೊಳಿಸಿರಿ.
[೧] ಶ್ರೀ. ಬಸವನಾಳರ ಸಹವಾಸ-ಒಡನಾಟಗಳೆಂದರೆ ಹುಣ್ಣಿಮೆಯ ಬೆಳದಿಂಗಳ ಅನುಭವ ಪಡೆದಂತೆ.

[೨] ಸಮರಸವು ಬಸವನಾಳರ ಜೀವನದ ಸೂತ್ರವಾಗಿತ್ತು. ಸಮನ್ವಯವು ಇವರ ಜೀವನದ ಶಕ್ತಿಯಾಗಿತ್ತು.

ಶಬ್ದ ವಿಚಾರ :—

(೧) ಸಹಕಾರ, ಗುರು ಈ ಶಬ್ದಗಳ ಮೂಲಾರ್ಥವೇನು ? ಮೇಲಿನ ಪಾಠದಲ್ಲಿ ಈ ಶಬ್ದಗಳನ್ನು ಉಪಯೋಗಿಸಿದ ವಿಶಿಷ್ಟಾರ್ಥವೇನು ? ಶರಣ ಮತ್ತು ದಾಸ ಇವುಗಳ ಮೂಲಾರ್ಥವೇನು ? ಮತ್ತು ಇವುಗಳಿಗೆ ಪ್ರಾಪ್ತವಾದ ವಿಶಿಷ್ಟಾರ್ಥ ವೇನು ?

(೨) ಕಾವೇರು, ತಣ್ಣಗಾಗು, ಮನೆಮಾತಾಗು ಇವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.

(೩) ಕೈ – ಇಕ್ಕು,–ಬಿಡು,–ಹಿಡಿ,–ಕೊಡು,–ತೋರಿಸು ಇವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.

(೪) ಕಲಿ, ಕಲೆ ಇವುಗಳಲ್ಲಿಯ ಅರ್ಥಭೇದವನ್ನು ತೋರಿಸುವಂತೆ ಎರಡು ವಾಕ್ಯ ಗಳನ್ನು ಬರೆಯಿರಿ.

ವಾಕ್ ಶಿಕ್ಷಣ :—

(೧) ಶಬ್ದಾನುಶಾಶನ, ಸಮ್ಮಂಧ, ಮ್ರತ್ಯುಂಜಯ, ಕ್ರಿಷ್ಣ ಇವುಗಳ ಶುದ್ಧರೂಪ ಗಳನ್ನು ಹೇಳಿರಿ.

(೨) ಮೇಲಿನ ಪಾಠದಲ್ಲಿ ನಿಮಗೆ ಮೆಚ್ಚುಗೆಯಾದ ಐದು ವಾಕ್ಯಗಳನ್ನು ಹೇಳಿರಿ.

ಚರ್ಚೆ :—

ಪ್ರೊ. ಬಸವನಾಳರು ಮೊದಲು ಕೈತುಂಬ ಹಣ ದೊರಕಿಸಿ, ರಾವಸಾಹೇಬ, ರಾವ-ಬಹದ್ದೂರ ಇತ್ಯಾದಿ ಬಿರುದುಗಳನ್ನು ಪಡೆದುಕೊಂಡು ಖ್ಯಾತಿವಂತರಾಗಿ ಇದಕ್ಕೂ ಹೆಚ್ಚಿನ ನಾಡಸೇವೆಯನ್ನು ಸಲ್ಲಿಸಬಹುದಿತ್ತು. ಇದು ನಿಜವೇ ?

ಬರೆಹ :—

(೧) ಸಂತೆಯ ದೃಶ್ಯವನ್ನು ವರ್ಣಿಸಿರಿ.
(೨) ಮಗುವನ್ನು ಕಳೆದುಕೊಂಡ ತಾಯಿಯ ಅವಸ್ಥೆಯನ್ನು ಬಣ್ಣಿಸಿರಿ.
(೩) ನಿಮ್ಮ ಮನಸ್ಸಿನ ಮೇಲೆ ಪರಿಣಾಮ ಮಾಡಿದ ಒಂದು ನೆನಪನ್ನು ಕುರಿತು ಬರೆಯಿರಿ.

# ೩. ಬಣ್ಣದ ಬುಗ್ಗೆ

[ ಶೀಲವಂಥ ಫಲ; ಶೀಲವೇ ದೈವ. ಆದುದರಿಂದ ದುರ್ದೈವ, ಹಣೇಬರೆಹವೆಂದು ನರಳಬೇಕಾದ ಹೆಚ್ಚಿನ ಪ್ರಸಂಗಗಳಲ್ಲಿ ತಮ್ಮ ಶೀಲದಲ್ಲಿ, ನಡೆನುಡಿಗಳಲ್ಲಿ ಎಲ್ಲಿಯೋ ತಪ್ಪು ಆಗಿವೆ ಎಂದು ನಿಶ್ಚಿತವಾಗಿ ತಿಳಿದುಕೊಳ್ಳಬೇಕು. ಆತ್ಮನಿರೀಕ್ಷಣೆಯಿಂದ ಆ ಕುಂದು ಕೊರತೆಗಳನ್ನು ತಿದ್ದಿಕೊಂಡು ಸಕಾಲದಲ್ಲಿಯೇ ತಮ್ಮ ಶೀಲವನ್ನು ಬಲಪಡಿಸಿಕೊಳ್ಳಬೇಕು. ಇಲ್ಲವಾದರೆ ಏನು ಗತಿಯಾಗುವುದೆಂಬುದನ್ನು ಈ ಕತೆಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಲಾಗಿದೆ.

ಶ್ರೀ. ಬಸವರಾಜ ಕಟ್ಟೀಮನಿಯವರ 'ಸೆರೆಯಿಂದ ಹೊರಗೆ' ಎಂಬ ಕಥಾಸಂಗ್ರಹದಿಂದ ಇದನ್ನು ಆಯ್ದುಕೊಳ್ಳಲಾಗಿದೆ. ]

ಆನೆಯನೇರಿಕೊಂಡು ಹೋದಿರೇ ನೀವು !
ಕುದುರೆಯನೇರಿಕೊಂಡು ಹೋದಿರೇ ನೀವು !
ಸತ್ಯದ ನಿಲವನರಿಯದೆ ಹೋದಿರಲಾ !
ಅಹಂಕಾರವೆಂಬ ಮದಗಜವನೇರಿ
ಮೂವಿಧಿಗೆ ಗುರಿಯಾಗಿ ಕೆಟ್ಟುಹೋದಿರಲಾ !

—ಶ್ರೀಬಸವಣ್ಣನವರು.

ಬ್ರಹ್ಮಚಾರಿ ಬೀದಿಗುಂಟ ಹೊರಟಿದ್ದ—ನಡುಹಗಲಿನ ಕಡುಬಿಸಿಲಿನಲ್ಲಿ. ವಯಸ್ಸು ಇನ್ನೂ ತೀರ ಕಡಿಮೆ. ಇಪ್ಪತ್ತೈದು ಇಪ್ಪತ್ತಾರು ಇದ್ದೀತು. ಹಳ್ಳಿಯಲ್ಲಿ ಹುಟ್ಟಿ ಬೆಳೆದ ದೇಹ; ಸಾಕಷ್ಟು ದೃಢವಾಗಿಯೇ ಇದ್ದಿತಾದರೂ ಗುರಿ ಇಲ್ಲದ, ಪ್ರಯೋಜನವಿಲ್ಲದ ಅಲೆದಾಟದಿಂದಲೂ ನಿರುತ್ಸಾಹ—ನಿರಾಸೆಗಳಿಂದಲೂ ಕೊಂಚ ಕೃಶವಾಗಿ ತೋರುತ್ತಿತ್ತು. ಬೆಳಗಿನಿಂದ ಹೊಟ್ಟೆಗೇನೂ ಬಿದ್ದಿರಲಿಲ್ಲ. ಊರಿನಿಂದ ಎರಡು ಮೈಲಿ ದೂರದಲ್ಲಿದ್ದ ನಿಲ್ದಾಣದಿಂದ ಹಾಗೆ ನಡೆಯುತ್ತ ಬಂದಿದ್ದ. ಆ ಹಸಿವು, ಆ ಬಿಸಿಲಿನ ಬಾಧೆ, ಆ ದಾಹ ! ಮುಖದಲ್ಲಿ ಬಳಲಿಕೆಯ ಮೋಡ ಮೂಡಿತ್ತು. ಬ್ರಹ್ಮಚಾರಿ ಹಾಗೇ ನಡೆಯುತ್ತಿದ್ದ—ಹೆಗಲ ಮೇಲೆ ಬಟ್ಟೆಗಳ ಗಂಟನ್ನು ಹೊತ್ತುಕೊಂಡು, ಜನ ಹೋಗುತ್ತಿತ್ತು, ಬರುತ್ತಿತ್ತು. ಟಾಂಗಾ ಓಡ್ತುತ್ತಿದ್ದುವು. ಕಾರು ಧಾವಿಸುತ್ತಿದ್ದುವು. ಚಹದಂಗಡಿಗಳಲ್ಲಿ ಕಪ್ಪು—ಬಸಿಗಳ ತಾಕಲಾಟ; ಜನಗಳ ನಗೆ, ಕೇಕೆ, ಕೂಗಾಟ.

ಬ್ರಹ್ಮಚಾರಿ ಹಾಗೇ ನಡೆಯುತ್ತಿದ್ದ. ಎಲ್ಲವೂ ಅವನಿಗೆ ಕಾಣುತ್ತಿತ್ತು. ಅವನು ಮಾತ್ರ ಯಾರಿಗೂ ಕಾಣಿಸಲಿಲ್ಲ. ನಾಲ್ಕಾರು ಗಲ್ಲಿಗಳನ್ನು ಸುತ್ತಿ ದೊಡ್ಡ ಮಹಡಿಯ ಮನೆಯೊಂದರ ಎದುರಿಗೆ ಬಂದು ನಿಂತುಕೊಂಡ. ಆ ನಗರದ ಪ್ರಸಿದ್ಧ ಶ್ರೀಮಂತರೂ ದಾನಶೂರರೂ ಆದ ಶ್ರೀಯುತರವರ ಮಂದಿರ ಅದು. ಶ್ರೀಯುತರು ಆಗ ತಾನೆ ಊಟ ಮುಗಿಸಿ ತಾಂಬೂಲ ಸೇವಿಸುತ್ತ ಮಹಡಿಯ ಮೇಲಿನ ಮೆತ್ತಗಿನ ಸೋಫಾದಲ್ಲೊರಗಿಕೊಂಡಿದ್ದರು. ಬ್ರಹ್ಮಚಾರಿ ಮನೆಯೊಳಗಡೆ ಬಂದು 'ಯಜಮಾನ್ರು ಉಂಟೇ'? ಎಂದು ಕೇಳಿದ.

ತನ್ನ ಗಂಟನ್ನು ತಾನೆ ಹೊತ್ತುಕೊಂಡು, ಹರಿದ ಬಟ್ಟೆಗಳನ್ನು ಹಾಕಿಕೊಂಡು ಕುಂದಿದ ಮುಖದಿಂದ ಮಧ್ಯಾಹ್ನದ ಹೊತ್ತಿನಲ್ಲಿ ಮನೆಬಾಗಿಲಿಗೆ ಬಂದ ಈ ಬ್ರಹ್ಮ ಚಾರಿಯನ್ನು ಕಂಡು ಅಲ್ಲಿದ್ದ ಸೇವಕನಿಗೆ ಸಂದೇಹ ಬರದಿರಲಿಲ್ಲ. ಈತ ಊಟ ಗಿಟ್ಟಿಸಲೆಂದೇ ಬಂದಿರುವನೆಂಬುದು ಸ್ಪಷ್ಟವಾಗುತ್ತಲೂ ಆತ 'ಏನು ಬೇಕು ನಿನಗೆ ? ನಡಿಯಾಚೆ,' ಎಂದು ಒರಟು ದನಿಯಲ್ಲಿ ಕೂಗಿಕೊಂಡ.

'ಯಜಮಾನ್ರನ್ನ ನೋಡಬೇಕಪ್ಪಾ; ಜಂಗಮನೊಬ್ಬ ಬಂದಿದಾನೆ ಅಂತ ಹೇಳು' ಎಂದನಾತ, ವಿನಯದಿಂದ.

ಆಳು, ಗೊಣಗುತ್ತಲೇ ಮೇಲೆ ಹೋಗಿ ಗೊಣಗುತ್ತಲೇ ಮರಳಿ ಬಂದ. 'ಯಜಮಾನ್ರಿಗೆ ಈಗ ಸಮಯವಿಲ್ಲವಂತೆ; ಸಾಯಂಕಾಲ ಆರು ಗಂಟೆಗೆ ಬಾ ಅಂತ ಹೇಳಲು ತಿಳಿಸಿದರು; ನಡೆ' ಎಂದು ಗವರಿಸಿದ.

ಮೊದಲೇ ಇಳಿದಿದ್ದ ಬ್ರಹ್ಮಚಾರಿಯ ಮುಖ, ಈ ಮುಖಭಂಗದಿಂದಾಗಿ ಇನ್ನಿಷ್ಟು ಇಳಿಯಿತು. ಬಂದ ಹಾಗೆ ಹಿಂದಿರುಗಿ ಹೊರಕ್ಕೆ ಬಂದ. ಬೀದಿಯ ಮೂಲೆಯಲ್ಲಿ ಕ್ಷಣಕಾಲ ನಿಂತುಕೊಂಡು ಶೂನ್ಯದೃಷ್ಟಿಯಿಂದ ಅಕ್ಕಪಕ್ಕದ ಮನೆಗಳ ನ್ನೆಲ್ಲ ನಿಟ್ಟಿಸಿ ನೋಡಿದ. 'ಎಲ್ಲರೂ ಊಟಮಾಡಿ ಹಾಯಾಗಿ ವಿರಮಿಸುವ ಸಮಯ ಇದು. ಆದರೆ ನಾನು....?' ಎಂದುಕೊಂಡು ಒಂದು ನಿಟ್ಟುಸಿರು ಹಾಕಿದ.

'ಶೇಂಗಾ.........ಶೇಂಗಾ........'

ಚೌಕದಲ್ಲಿ ಕುಳಿತುಕೊಂಡು ಹಣ್ಣುಹಣ್ಣು ಮುದುಕಿಯೊಂದು ಅಂಥ ಉರಿಬಿಸಿಲಿನಲ್ಲೂ ವ್ಯಾಪಾರಕ್ಕಾಗಿ ಕಾದಿತ್ತು. ಯಾರನ್ನೂ ಯೋಚಿಸದೆ, ಬಿಸಿಲು.... ಮಳೆ. . ಗಾಳಿ.... ಯಾವುದನ್ನೂ ಗಮನಿಸದೆ ಅಲ್ಲಿ ಕುಳಿತುಕೊಂಡು ವ್ಯಾಪಾರ ಮಾಡಿ, ಬಂದ ಹಣದಲ್ಲಿ ಹೊಟ್ಟೆ ತುಂಬಿಕೊಳ್ಳುವ ಆ ಮುದುಕಿ ! ಕಡಲೆಕಾಯಿ ಕೊಳ್ಳಲು ಅವಳ ಬಳಿ ಬಂದಾಗ ಆ ಮುದುಕಿಯ ಮುಖದ ಕಡೆ ಅವನ ದೃಷ್ಟಿ ಹೋಯಿತು. ಅಂಥ ವೃದ್ಧಾಪ್ಯದಲ್ಲೂ ಅಂಥ ಬಿಸಿಲಿನಲ್ಲೂ ಅವಳ ಮುಖದ ಮೇಲೆ ಬಳಲಿಕೆಯ ಛಾಯೆ ಕಂಡುಬರುತ್ತಿರಲಿಲ್ಲ. ಅಲ್ಲಿ ತೃಪ್ತಿಯೂ ಇರಲಿಲ್ಲ, ಅತೃಪ್ತಿಯೂ ಇರಲಿಲ್ಲ. ಒಂದು ಬಗೆಯ ಸ್ಥಿರವಾದ ಕಳೆ ಅಲ್ಲಿ ಮಿನುಗುತ್ತಿತ್ತು.

ಜೇಬಿನಲ್ಲಿದ್ದ ಹಲವು ಪುಡಿಕಾಸುಗಳಿಂದ ಕಡಲೆಕಾಯಿ ಕೊಂಡು ಬ್ರಹ್ಮಚಾರಿ ಪಕ್ಕದಲ್ಲಿದ್ದ ದೇವಾಲಯದಲ್ಲಿ ಪ್ರವೇಶಿಸಿದ. ಅದರಾಚೆಗೆ ಒಂದು ಕೆರೆ; ಅದರ ದಡದ ಮೇಲೊಂದು ಅಶೋಕವೃಕ್ಷ; ಅದರ ತಣ್ಣೆಳಲು ಅವನನ್ನು ಆಹ್ವಾನಿಸಿತು. ಅಲ್ಲಿಗೆ ಹೋಗಿ ಕುಳಿತುಕೊಂಡು ಅದರ ಎದುರಿಗಿದ್ದ ಕೆರೆಯ ನೀರಿನ ಕಡೆಗೆ ದೃಷ್ಟಿ ತೂರಿದ; ನೀರು ಆಳವಾಗಿತ್ತು; ಕೆರೆ ವಿಶಾಲವಾದುದಾಗಿತ್ತು.

ಕೆರೆಯನ್ನು ಕಂಡು ತನ್ನ ತಲೆಯಲ್ಲಿ ಹೊಳೆದ ವಿಚಾರವೊಂದು ಅವನಿಗೆ ನಡುಕ ಹುಟ್ಟಿಸಿತು. ಹಿಂದೆಂದೂ ಅಂಥ ಯೋಚನೆ ಅವನಿಗೆ ಹೊಳೆದಿರಲಿಲ್ಲ. ಆತ್ಮಹತ್ಯೆ ! ಆ ಶಬ್ದದ ನೆನಪಾಗುತ್ತಲೂ ಆತ ಬೆಚ್ಚಿಬಿದ್ದ.

ಅಷ್ಟು ಹಸಿವೆಯಾಗಿದ್ದರೂ ಅವನಿಗಾಗ ಕಡಲೆಕಾಯಿ ತಿನ್ನುವ ಮನಸ್ಸಾಗ ಲಿಲ್ಲ. ಇಪ್ಪತ್ತು ವರ್ಷಗಳ ತನ್ನ ಗತ ಆಯುಷ್ಯವೆಲ್ಲವೂ ಒಮ್ಮೆಲೆ ಅವನ ಅಂತರ್ದೃಷ್ಟಿ ಯೆದುರಿಗೆ ಹಾರಿಹೋದಂತಾಯಿತು. ತೀರ ಬಡವರಾದ ಜಂಗಮರ ಮನೆಯಲ್ಲಿ ತಾನು ಹುಟ್ಟಿದುದು; ಅಲ್ಲಿ ಇಲ್ಲಿ ಯಾರಾರ ಮನೆಯಲ್ಲೋ ಊಟಮಾಡುತ್ತ ಕನ್ನಡ ಕಲಿತದ್ದು; ಯಾರಿಂದಲೋ ಸ್ವಲ್ಪ ಇಂಗ್ಲೀಷನ್ನೂ ಕಲಿತುದು; ಕೈಗೆ ಸಿಕ್ಕಿದ ಕೆಲವು ಪುಸ್ತಕಗಳನ್ನೋದಿದುದು; ಯಾವುದೋ ಒಂದು ಮಠಕ್ಕೆ 'ಮರಿ' ಯಾಗಿ ಹೋದುದು; ದೀಕ್ಷೆಯಾದುದು; ಏನೇನೋ ನಡೆದು ಅಲ್ಲಿಂದ ಹೊರಟು ಮತ್ತೆ ಬೀದಿಯ ಪಾಲಾದುದು; ಸಮಾಜಸೇವೆ, ದೇಶಸೇವೆಗಳ ಹಂಬಲ ಬಂದು ಕೆಲವು ಲೇಖನ ಬರೆಯಲು ಪ್ರಯತ್ನಿಸಿ ಅವುಗಳನ್ನು ಪತ್ರಿಕೆಗಳಿಗೆ ಕಳುಹಿಸಿದುದು; ಅವರು ಪ್ರಕಟಿಸದಿದ್ದುದು; ಅಲ್ಲಲ್ಲಿ ಒಂದೆರಡು ಕಡೆ ಏನೋ ಭಾಷಣ ಮಾಡಿ ತಾನೊಬ್ಬ ವಕ್ತಾರನೆಂದು ತಿಳಿದುಕೊಂಡಿದ್ದುದು; ಆದರೂ ಜನ ತನ್ನನ್ನು ಕರೆಯದೆ, ಗೌರವಿಸದೆ ಅಲಕ್ಷಿಸುತ್ತಿದ್ದುದು; ಏನು ಮಾಡಬೇಕೆಂಬುದು ಗೊತ್ತಾಗದೆ, ಯಾವ ಗುರಿಯ ದಡ ವನ್ನು ಹಿಡಿಯದೆ ಹಳ್ಳಿಯನ್ನು ಸೇರಿ ಹೊಲದಲ್ಲಿ ದುಡಿದು ತಿನ್ನುತ್ತ ಹಳ್ಳಿಗರ ಸೇವೆ ಮಾಡುವ ಒಲವಿಲ್ಲದೆ, ಅಲ್ಲಿ ಇಲ್ಲಿ ತಿರುಗಿ ಅವರಿವರ ಮನೆಗಳಿಗೆ ಹೋಗಿ ಭಿಕ್ಷಾನ್ನ ಕ್ಕಾಗಿ ಯಾಚಿಸುವ ಸ್ಥಿತಿ! ಈ ದುಃಸ್ಥಿತಿಗಿಂತ ಆತ್ಮಹತ್ಯೆ ಮೇಲಲ್ಲವೆ? ಎಂದು ಆತನಿಗೆನ್ನಿಸಿತು.

ಕಡಲೆಕಾಯಿಗಳನ್ನೆಸೆದುಬಿಟ್ಟು ಆತ ಮೆಟ್ಟಲುಗಳನ್ನಿಳಿದು ಕೆರೆಯ ನೀರಿನ ಬಳಿ ಬಂದು ಒಂದು ಸಲ ಸುತ್ತುಮುತ್ತಲೂ ದೃಷ್ಟಿ ಹೊರಳಿಸಿದ. ಯಾತಕ್ಕೂ ಉಪಯೋಗವಾಗದ ಈ ಜೀವದಿಂದ ಪ್ರಯೋಜನವಾದರೂ ಏನು, ಎಂದುಕೊಂಡು ನೀರಿಗೆ ಧುಮುಕಲು ಅಡಿಯೆತ್ತಿದ.

ಅಷ್ಟರಲ್ಲಿ ಯಾವುದೋ ಅದೃಶ್ಯ ಹಸ್ತವೊಂದು ಅವನನ್ನು ಹಿಡಿದು ತಡೆದಂತಾ ಯಿತು. 'ಮೂರ್ಖಾ, ಯಾಕೆ ಸಾಯುತ್ತೀಯಾ ಸುಮ್ಮನೆ? ನಾನೊಂದು ಉಪಾಯ ಹೇಳಿಕೊಡುವೆ ನಿನಗೆ, ಬಾ, ನೀನು ಬದುಕುತ್ತೀ–ಸುಖವಾಗಿ ಬದುಕುತ್ತೀ. ಇಂದು ನಿನ್ನನ್ನು ಉಪೇಕ್ಷೆ ಮಾಡುವ ಜನವೆ ನಾಳೆ ನಿನ್ನ ಅಡಿಗೆರಗುವುದು. ಹಸಿದು ಹಸಿದು ಮನೆಗೆ ಬಂದ ನಿನಗೆ, ಊಟ ಹಾಕದೇ ಕಳುಹಿಸಿದ ಜನವೇ ನಾಳೆ ನಿನ್ನನ್ನು ಮೆರವಣಿಗೆಯಿಂದ ಕರೆದು ತಂದು ಮಿಷ್ಟಾನ್ನ ಹಾಕುವುದು' ಎಂದಂತಾಯಿತು.

ಬ್ರಹ್ಮಚಾರಿ ಚಕಿತನಾದ. ಹೀಗೆ ಬೋಧಿಸುವ ಈ ವಸ್ತು ಯಾವುದೊ, ಎಂದು ಯೋಚಿಸಿದ. ಏನೂ ಹೊಳೆಯಲಿಲ್ಲ.

೨

ಬ್ರಹ್ಮಚಾರಿ ಬೀದಿಗುಂಟ ಹೊರಟಿದ್ದ.

ಅದೇ ಊರು; ಅದೇ ಬೀದಿ; ಅದೇ ಜನ; ಅದೇ ನಿಲ್ದಾಣದಿಂದ ಆತ ಬಂದಿದ್ದ. ಅಂದಿನ ಹಾಗೆ ಗಂಟು ಹೊತ್ತುಕೊಂಡು ಬಿಸಿಲಿನಲ್ಲಿ ನಡೆದುಬರುವ

ಅಗತ್ಯವಿರಲಿಲ್ಲ. ಆತ ಬರುವನೆಂದು ಊರಿಗೆ ಊರೇ ನಿಲ್ದಾಣದಲ್ಲಿ ನೆರೆದಿತ್ತು, ಅವನನ್ನು ಸ್ವಾಗತಿಸಲೆಂದು.

ಆತನನ್ನು ಹೊತ್ತು ತಂದ ರೈಲುಗಾಡಿ ನಿಲ್ದಾಣಕ್ಕೆ ಬಂದಾಗ ಅದೇನು ಸಂಭ್ರಮ ಅದೆಂಥ ವಿಜೃಂಭಣೆ! ಆ ಜಯಜಯಕಾರ, ಆ ಘೋಷಣೆ, ಆ ಹಾರ-ತುರಾಯಿ, ಆ ಹಣ್ಣು ಹಂಪಲು! ಜನಗಳ ನೂಕುನುಗ್ಗಲಿನಲ್ಲಿ, ಸ್ವಯಂಸೇವಕರು ಮಾಡಿದ ದಾರಿಯಲ್ಲಿ ಆತ ಬಂದಾಗ ಅವನ ಅಡಿಗಳಿಗೆರಗಿದ ಆ ಜನ! ಆ ಊರಿನ ಸಿದ್ಧ ಪ್ರಸಿದ್ಧ, ಶ್ರೀಮಂತ ಜನ! ಫೋಟೋ ತೆಗೆಯುವ ಪತ್ರಿಕೋದ್ಯೋಗಿಗಳು; ಮುಗುಳುನಗೆ ಬೀರುತ್ತ ನಮಸ್ಕರಿಸುವ ಲೇಖಕರು; ಕವಿಗಳು; ಕತೆಗಾರರು! ಕಾಂಗ್ರೆಸ್ಸಿನವರು, ಕಾಂಗ್ರೆಸ್ಸಿನವರಲ್ಲದವರು, ಆ ಜಾತಿಯವರು, ಈ ಜಾತಿಯವರು! ನಿಲ್ದಾಣದ ಹೊರಗಡೆ 'ಗೌರವ ರಕ್ಷೆ' ಯೂ ದೊರೆತಿತು. ಅನಂತರ ಸುಂದರವಾದ ಮೋಟಾರ ಕಾರಿನಲ್ಲಿ ಕುಳಿತು, ಬ್ಯಾಂಡಿನ ಸುಸ್ವರದಲ್ಲಿ, ಜನಗಳ ಜಯಜಯಕಾರ ದಲ್ಲಿ, ಮಧ್ಯೆ ಮಧ್ಯೆ ಬೀಳುವ ಹಾರಗಳ ಮಳೆಯಲ್ಲಿ ಆತ ಬೀದಿಗುಂಟ ಬರುತ್ತಿದ್ದ!

ಮೆರವಣಿಗೆ ಊರೆಲ್ಲವನ್ನು ಸುತ್ತಿ ಆ ಶ್ರೀಯುತರ ಮನೆಯೆದುರಿಗೆ ಬಂದು ನಿಂತಿತು. ಅದೇ ಮನೆ; ಅಂದು ಮಧ್ಯಾಹ್ನ ಆತ ಹಸಿದು ಕಂಗೆಟ್ಟು ಬಂದಾಗ ಊಟ ಹಾಕದೆ ಮುಖಭಂಗ ಮಾಡಿ ಕಳುಹಿಸಿದ ಆ ಮನೆಯೇ, ಇಂದು ಅವನನ್ನು ಆರತಿ ಎತ್ತಿ ಸ್ವಾಗತಿಸಿತು. ಅಂದು 'ನಡೆಯಾಚೆ' ಎಂದು ಗದರಿಸಿದ ಸೇವಕನೇ ಇಂದು ಅವನ ಪಾವಾಸುಗಳನ್ನು ಎತ್ತಿ ಬದಿಗಿಟ್ಟ. ಅಂದು ಆತ ಭಿಕ್ಷಾನ್ನಕ್ಕಾಗಿ ಬಂದಾಗ ಮೇಲೆ ಒರಗಿಕೊಂಡು 'ಸಮಯವಿಲ್ಲ' ಎಂದಿದ್ದ ಆ ಶ್ರೀಯುತರೇ ಇಂದು ಅವನನ್ನು ನಿಲ್ದಾಣದಿಂದ ಕರೆದುಕೊಂಡು ಬಂದು ತನ್ನಲ್ಲಿಯೇ ಬಿಡಾರಕ್ಕೇರ್ಪಡಿಸಿ ದ್ದರು. ಅಂದು ಕಡಲೆಕಾಯಿ; ಇಂದು ಮಿಷ್ಟಾನ್ನಭೋಜನ! ಅಂದು ಅಶೋಕ ವೃಕ್ಷ, ಇಂದು ಮೆತ್ತಗಿನ ಹಾಸುಗೆ, ಅಂದವಾದ ಮಂಚ.

ಊಟವಾದ ನಂತರ ಬ್ರಹ್ಮಚಾರಿ ತಾಂಬೂಲ ಸವಿಯುತ್ತ ಮಂಚದ ಮೇಲೆ ಪವಡಿಸಿದ್ದ ಹಾಗೆ ಅದೃಶ್ಯವಾಣಿಯೊಂದು ನಕ್ಕು ನುಡಿದಂತಾಯಿತು.

'ನೋಡಿದೆಯಾ! ನಾನು ಹೇಳಿದ ಮಾತು ಕೇಳಿದೆಯೆಂದು ಇಂದು ಇಂಥ ಅದ್ಭುತಗಳನ್ನು ನೋಡುತ್ತಿದ್ದೀಯೆ! ನನ್ನ ಮಾತು ಕೇಳದಿದ್ದರೆ ನೀನು ಆಗಲೇ ನೀರಿನ ಪಾಲಾಗುತ್ತಿದ್ದೆ!'

ಚಕಿತನಾಗಿ ಬ್ರಹ್ಮಚಾರಿ ಯೋಚಿಸತೊಡಗಿದ. "ಹೌದು; ಆ ವಾಣಿ ಉಸು ರಿದ ಮಾತು ನಿಜವಾಗಿತ್ತು. ಅದರ ಉಪದೇಶದಂತೆ ನಾನು ನಡೆಯದಿದ್ದರೆ, ಯಾರದೋ ಬಾಲ ಹಿಡಿದು, ದೊಡ್ಡ ಸ್ವಾಮಿಯ ಹಾಗೆ ನಟಿಸಿ, ವಿದ್ವತ್ತಿಯ ಗಂಧ ವಿರದಿದ್ದರೂ ಮಹಾವಿದ್ವಾಂಸನ ಹಾಗೆ ನಟಿಸಿ, ಬೆಡಗಿನಿಂದ ಮೆರುಗಿನಿಂದ ತನ್ನ ವ್ಯಕ್ತಿತ್ವಕ್ಕೆ ಬಣ್ಣ ಬಳಿದುಕೊಂಡು ಆ ಮಹಾಪೀಠದ ಅಧಿಕಾರಸ್ಥಾನಕ್ಕೇರದಿದ್ದರೆ, ಅದರ ಆಸ್ತಿಯ ಒಡೆಯನಾಗಿರದಿದ್ದರೆ, 'ಜಗದ್ಗುರು' ವೆಂಬ ಬಿರುದು ತಳೆದು,

ರೇಷ್ಮೆಯ ಕಾವಿಯನ್ನು ಉಟ್ಟು, ಜರೀ ರುಮಾಲು ಸುತ್ತಿ, ನಿಲುವಂಗಿ ಹಾಕಿಕೊಂಡು ಜರಿಕಟ್ಟಿದ ಪಾಪೋಸು ಮೆಟ್ಟಿ ವೈಭವದಿಂದ ಮೆರೆಯದಿದ್ದರೆ, ಕೆಲವು ಭಟ್ಟಂಗಿಗಳನ್ನು ಕಟ್ಟಿಕೊಂಡು ತನ್ನ ಕೀರ್ತಿಯ ಡಂಗುರ ಸಾರಿಸಿಕೊಳ್ಳದಿದ್ದರೆ, ಈ ಊರು ತನ್ನನ್ನು ಮೆರೆಯಿಸುತ್ತಿರಲಿಲ್ಲ. ಅಂದು ತಾನಿಲ್ಲಿಗೆ ಭಿಕಾರಿಯಂತೆ ಬಂದಾಗ ಯಾವ ಯೋಗ್ಯತೆ ತನಗಿತ್ತೋ – ಅದೇನೂ ಈಗ ಹೆಚ್ಚಿಲ್ಲ. ಆದರೂ ಜನರನ್ನು ಮರುಳು ಮಾಡುವ ಈ ಆಡಂಬರ, ಈ ಕಪಟ, ಈ ಮೆರಗು, ಈ ಬಣ್ಣ ! ಈ ಹಣ ! ಹೌದು ....ಈ ಹಣ! ಹೆಣವಾಗಲಿದ್ದ ತನ್ನನ್ನು ಮದುವಣಿಗನ ಹಾಗೆ ಮೆರೆಯಿಸುತ್ತಿರುವ ಈ ಹಣ...!"

ಬ್ರಹ್ಮಚಾರಿ ತನ್ನಷ್ಟಕ್ಕೆ ತಾನೇ ನಕ್ಕು ಬಿಟ್ಟ. ತನಗಾವ ಯೋಗ್ಯತೆಯಿಲ್ಲದಿದ್ದರೂ ಜನ ಇಂದು ತನ್ನನ್ನು ಹೊತ್ತು ಮೆರೆಯಿಸುತ್ತಿತ್ತು. ತನ್ನನ್ನು ಹೊಗಳಿ ಬರೆಯುವದರಲ್ಲಿ ಪತ್ರಿಕೆಗಳು ಸ್ಪರ್ಧೆ ನಡೆಸಿದ ಹಾಗೆ ತೋರುತ್ತಿತ್ತು. ಹಿಂದೆ ತನ್ನ ಲೇಖನಗಳನ್ನು ಕಸದ ಬುಟ್ಟಿಗೆಸೆದಿದ್ದ ಪತ್ರಿಕೆಗಳೇ ಇಂದು ತನ್ನ ಭಾಷಣಗಳನ್ನು ಪ್ರಕಟಿಸಿ, ಚರಿತ್ರೆಯನ್ನು ಮುದ್ರಿಸಿ ತನ್ನ ಗುಣಗಾನ ಮಾಡುತ್ತಿದ್ದುವು; ತನ್ನ ಬರೆಹಗಳಿಗಾಗಿ ಕಾದಿದ್ದುವು. 'ಆಧುನಿಕ ವಿವೇಕಾನಂದ' ಎಂದು ತನ್ನನ್ನು ಕರೆದವರು ಕೆಲವರು, 'ಕರ್ನಾಟಕವನ್ನು ಒಂದುಗೂಡಿಸಲು ಬಂದ ವಿದ್ಯಾರಣ್ಯ' ಎಂದವರು ಹಲವರು. 'ಮಹಾವಿಭೂತಿ' ಎಂದಿತು ಒಂದು ಪತ್ರಿಕೆ. 'ನಿಜವಾಗಿಯೂ ಈತ ಮಹಾಪುರುಷ' ಎಂದಿತು ಒಂದು ಪತ್ರಿಕೆ. ತನ್ನ ಕೀರ್ತಿಯನ್ನು ಸಾರುವದಕ್ಕಾಗಿಯೆ ಹುಟ್ಟಿಕೊಂಡ ಪತ್ರಿಕೆಗಳು ಎಷ್ಟೋ, ಎಲ್ಲಿ ನೋಡಿದರೂ ತನ್ನ ಪ್ರಚಾರವೆ ! ತನ್ನ ಭಾವಚಿತ್ರವೆ ! ತನ್ನ ಮಾತೆ !

ಬ್ರಹ್ಮಚಾರಿ ನಗುತ್ತಲೆ ಇದ್ದ. ಅಂದು ತಾನು ಈ ಊರಿಗೆ ಬಂದಾಗ ಚಹದಂಗಡಿಯಲ್ಲಿ ಚಹ ಕುಡಿದು ಸಿಗರೇಟು ಸೇದುತ್ತಿದ್ದ ಕವಿಗಳು, ಕಥೆಗಾರರು, ಲೇಖಕರು ಇಂದು ತನ್ನನ್ನು ಕಂಡು ಆದರದಿಂದ ವರ್ತಿಸುತ್ತಿದ್ದಾರೆ. ಅವರ ದೃಷ್ಟಿಯಲ್ಲಿ ತನ್ನನ್ನು ಮೇಲಕ್ಕೆತ್ತರಿಸಿದ ಶ್ರೇಯಸ್ಸು ಆ ಪತ್ರಿಕೆಗಳದು—ತನ್ನಿಂದ ಹಣ ತಿಂದ ಪತ್ರಿಕೆಗಳದು. ಅದಕ್ಕೊಂದು ಸಾವಿರ; ಇದಕ್ಕೆರಡು ಸಾವಿರ; ಆ ಸಂಪಾದಕನಿಗೆ ಐದು ಸಾವಿರ; ಈ ಉಪಸಂಪಾದಕನಿಗೆ ಎರಡು ಸಾವಿರ.... ಅವನಿಗೆ ಐದುನೂರು ಇವನಿಗೆ ಆರುನೂರು. ಸ್ವಾಗತ ಸಮಾರಂಭಗಳನ್ನೇರ್ಪಡಿಸಲು ಕೆಲವರಿಗೆ ಹಣ; ಭಾಷಣ ಬರೆದುಕೊಡಲು ಕೆಲವರಿಗೆ ಹಣ; ತನ್ನ ಚರಿತ್ರೆ ಬರೆಯಲು ಕೆಲವರಿಗೆ ಲಂಚ... ಹಣ....ಹಣ! ಆ ಹಣವೇ ತನ್ನನ್ನು ಹಲವು ದಿನಗಳಲ್ಲಿ ಸಿದ್ಧ–ಪ್ರಸಿದ್ಧನನ್ನಾಗಿ ಮಾಡಿತು. ಬ್ರಹ್ಮಚಾರಿಗೆ ಜೊಂಪು ಹತ್ತಿತು. ಮುಂದೆ ಯಾವದೂ ಹೊಳೆಯಲಿಲ್ಲ.

೩

ಬ್ರಹ್ಮಚಾರಿ ಬೀದಿಗುಂಟ ಹೊರಟಿದ್ದ, ನಡುಹಗಲಿನ ಕಡುಬಿಸಿಲಿನಲ್ಲಿ.

ಅದೇ ಊರು. ಅದೇ ಬೀದಿ. ಅದೇ ಜನ. ಅದೇ ನಿಲ್ದಾಣದಿಂದ ಆತ ಬಂದಿದ್ದ, ಮೊದಲನೆಯ ಸಲದ ಹಾಗೆ ತನ್ನ ಗಂಟನ್ನು ತಾನೇ ಹೊತ್ತುಕೊಂಡು.

ಎರಡನೆಯ ಸಲ ತಾನಿಲ್ಲಿಗೆ ಬಂದಾಗ ನಿಲ್ದಾಣದಲ್ಲಿ ಎಂಥ ಸ್ವಾಗತ! ಏನು ವೈಭವ! ಎಷ್ಟು ಜನ! ಇಂದು ತಾನು ಬರುವುದಾಗಿ ಮೊದಲೇ ಹಲವರಿಗೆ ಕಾಗದ ಬರೆದಿದ್ದರೂ ಅವರಲ್ಲೊಬ್ಬನೂ ಬಂದಿರಲಿಲ್ಲ. ಕಾರುಗಳಿಲ್ಲ, ಹೂಹಾರಗಳಿಲ್ಲ, ಗೌರವ ರಕ್ಷೆಯಿಲ್ಲ. ಹಣ್ಣು-ಹಂಪಲಗಳಿಲ್ಲ. ಕವಿಗಳು, ಕತೆಗಾರರು, ಲೇಖಕರು, ಪತ್ರಿಕಾಕರ್ತರು, ಶ್ರೀಮಂತರು ಯಾರೂ ಅವನು ಬರುವುದನ್ನು ನೋಡಲಿಲ್ಲ. ಅಂದು ಅವನನ್ನು ಕಂಡು ಜಯಜಯಕಾರ ಮಾಡುತ್ತಿದ್ದ ಅದೇ ಊರೇ ಇಂದು ಅವನನ್ನು ಕಂಡರೂ ಗುರುತಿಸದೆ ಮೌನ ತಳೆದಿತ್ತು!

ಮೊದಲಿನ ಹಾಗೆ ಹರಿದ ಬಟ್ಟೆ. ಮೊದಲಿನ ಹಾಗೆಯೆ ಕುಂದಿದ ಶರೀರ; ಬಾಡಿದ ಮುಖ; ಹಸಿದ ಹೊಟ್ಟೆ; ಬರಿದಾದ ಜೇಬು !

'ಶೇಂಗಾ........ಶೇಂಗಾ........'

ಚೌಕದಲ್ಲಿ ಕುಳಿತುಕೊಂಡು ಅದೇ ಆ ಹಣ್ಣು ಹಣ್ಣು ಮುದುಕಿ ಈಗಲೂ ವ್ಯಾಪಾರ ಮಾಡುತ್ತಿತ್ತು. ಆ ಚೌಕದಾಚೆ ಆ ಶ್ರೀಯುತರ ಮನೆ; ಅಂದು ತನ್ನನ್ನು ಆರತಿ ಎತ್ತಿ ಸ್ವಾಗತಿಸಿ, ಮಿಷ್ಟಾನ್ನ ಹಾಕಿ ಸತ್ಕರಿಸಿದ ಆ ಮನೆ ?....ಅತ್ತ ಹೊರಳಲೂ ಅವನಿಗೆ ಮನಸ್ಸು ಬರಲಿಲ್ಲ.

ಜೇಬಿನಲ್ಲಿದ್ದ ಕೆಲವು ಪುಡಿ ಕಾಸುಗಳಿಂದ ಕಡಲೆಕಾಯಿ ಕೊಂಡು ಆತ ಪಕ್ಕದಲ್ಲಿದ್ದ ದೇವಾಲಯಕ್ಕೆ ಪ್ರವೇಶಿಸಿದ. ಅದೇ ಅಶೋಕವೃಕ್ಷ; ಅದರ ತಣ್ಣೆಳಲು; ಅದರ ಎದುರಿಗಿದ್ದ ಆ ಕೆರೆ. ಗಿಡದ ಎಡೆಯಲ್ಲಿ ಕುಳಿತು ಕೆರೆಯ ನೀರಿನೆಡೆ ದೃಷ್ಟಿ ತೂರಿದ.

ಅಷ್ಟು ಹಸಿವೆಯಾಗಿದ್ದರೂ ಸಹ ಅವನಿಗೆ ಕಡಲೆಕಾಯಿ ತಿನ್ನುವ ಮನಸ್ಸಾಗಲಿಲ್ಲ. ಕಳೆದ ವರ್ಷ ನಡೆದ ಘಟನೆಗಳೆಲ್ಲ ಅವನ ಮನದ ಪರದೆಯ ಮೇಲೆ ಮೂಡಿ ಹೋದುವು;.... ಮಹಾಪುರುಷ..... ಕಾರಣಪುರುಷ.... ವಿದ್ಯಾರಣ್ಯ........ ಏನೇನೋ ಆದುದು. ಕರ್ನಾಟಕಕ್ಕೆಲ್ಲ ತಾನೇ ರಾಜನೆಂದು ತಿಳಿದುಕೊಂಡುದು...ರಾಜಕೀಯ, ಸಾಹಿತ್ಯ, ಕಲೆ, ಧರ್ಮ ಯಾವುದನ್ನೂ ಸರಿಯಾಗಿ ಅರಿಯದಿದ್ದರೂ ಎಲ್ಲ ಬಲ್ಲವನೆಂಬಂತೆ ಎಲ್ಲದರಲ್ಲೂ ಕೈಹಾಕತೊಡಗಿದುದು..ನಿಜವಾಗಿ ಮಹಾಪುರುಷರನ್ನೆಲ್ಲ ಟೀಕಿಸುವ ಉಪದ್ವ್ಯಾಪಕ್ಕೆ ಬಿದ್ದುದು... ಪತ್ರಿಕೆಯವರಿಗೆ ಕೊಟ್ಟು ಕೊಟ್ಟು ಎಲ್ಲ ಹಣವೂ ತೀರಿಹೋದುದು.... ಸಾಲ ಬೆಳೆದುದು... ಸಾವಿರ, ಎರಡು ಸಾವಿರ, ಹತ್ತು ಸಾವಿರ,.... ಲಕ್ಷ...; ಪೀಠದ ಭಕ್ತರಿಗೆಲ್ಲ ಬೇಸರ ಬಂದುದು... ವ್ಯಾಜ್ಯ ನಡೆದುದು....ಆದರೂ ತನ್ನ ಕಣ್ಣ ಮೇಲಿನ ಪರದೆ ಹರಿಯದಿದ್ದುದು, ಅಹಂಕಾರ ಮಾಯವಾಗದಿದ್ದುದು,.... 'ಈ ಪೀಠದ ಹಂಗೇಕೆ ನನಗೆ ? ನಾನದಕ್ಕೆ ಅಧಿಕಾರಿಯಾಗಿರುವೆನೆಂದು ಜನ ನನ್ನನ್ನು ಗೌರವಿಸುವುದೇನು ?'

ಹಿಂದೆ ಏನೋ ಆಯ್ತು, ಹೋಯ್ತು. ಇನ್ನು ಮೇಲೆ ನಿಜವಾದ ನನ್ನ ಯೋಗ್ಯತೆಗೆ, ನನ್ನ ಉಜ್ವಲ ವ್ಯಕ್ತಿತ್ವಕ್ಕೆ, ನನ್ನ ಬುದ್ಧಿಗೆ, ನನ್ನ ಕರ್ತೃತ್ವಶಕ್ತಿಗೆ, ನನ್ನ ವಾಣಿಗೆ, ನನ್ನ ತೇಜಸ್ಸಿಗೆ, ಜನ ಮೆಚ್ಚಬೇಕು; ನಾನು ನಿಜಕ್ಕೂ ಮಹಾಪುರುಷ, ಜನರ ಕಲ್ಯಾಣಕ್ಕಾಗಿಯೇ ನಾನು ಅವತರಿಸಿದವ, ಎಂಬುದನ್ನು ನನ್ನ ಪ್ರಯತ್ನಗಳಿಂದ ಲೋಕದ ನಿದರ್ಶನಕ್ಕೆ ತಂದು ಕೊಡಲೇಬೇಕು. ಆದುದರಿಂದ ಈ ಸಂಕುಚಿತ ಕ್ಷೇತ್ರದಲ್ಲಿ ಕೊಳೆಹಾಕುವ ಈ ಪೀಠವನ್ನು ಧಿಕ್ಕರಿಸಿ ಹೊರಡುತ್ತೇನೆ. ಈ ಬಿರುದು, ಈ ರೇಷ್ಮೆ, ಈ ಜರತಾರಿ, ಈ ನಿಲುವಂಗಿ ಯಾವದೂ ಬೇಡ; ತಪಸ್ಸಿನಿಂದ ನನ್ನಲ್ಲಿ ನಿಜವಾದ ಯೋಗ್ಯತೆಯನ್ನು ತಂದುಕೊಳ್ಳಲೇ ಬೇಕು' ಎಂದು ಅವನು ನಿರ್ಧರಿಸಿದನು. ಆದರೆ ಈ ಮೊದಲಿನ ಡಂಭಾಚಾರಕ್ಕಾಗಿ ಜುಗುಪ್ಸೆಗೊಂಡ ಜನ ತನ್ನನ್ನು ತನ್ನ ನೆರಳಿಗೂ ನಿಲ್ಲಗೊಡಲು ಮನಸ್ಸಿಲ್ಲದ್ದು ಆತನ ಅನುಭವಕ್ಕೆ ಬಂತು.

ಹಲವು ತಿಂಗಳು ಆ ಊರು ಈ ಊರು ಸುತ್ತಿ, ಅವರಿವರ ಹತ್ತಿರ ಇದ್ದುದು, ಜೀವನಕ್ಕೆ ಬೇಸರವಾದುದು, ಪತ್ರಿಕೆಯ ಪ್ರಚಾರ ನಿಂತುದು, ಮತ್ತೆ ಮೊದಲಿನ ನಿರಾಶೆ....ಜಿಗುಪ್ಸೆ...ಪುನಃ ಅಶೋಕವೃಕ್ಷ....ಪುನಃ ಕೆರೆ....

ಅವನ ಮೈ ಜುಮ್ಮೆಂದಿತು ! ಆತ್ಮಹತ್ಯೆ ?— ಮತ್ತೆ, ಆತ್ಮಹತ್ಯೆಯ ಯೋಚನೆಯೆ ?

ಇದ್ದುದಿದ್ದ ಹಾಗೆ ಯಾವುದೋ ಅದೃಶ್ಯ ವ್ಯಕ್ತಿಯೊಂದು ಗಹಗಹಿಸಿ ನಕ್ಕಂತಾಯಿತು.

ಬ್ರಹ್ಮಚಾರಿ ದಿಗಿಲುಗೊಂಡು ಕಣ್ಣರಳಿಸಿ ನೋಡಿದ. ಅದೃಶ್ಯವಾಣಿಯೊಂದು ವ್ಯಂಗ್ಯಸ್ವರದಿಂದ ನುಡಿದಂತಾಯಿತು. 'ಎಂಥ ಅಪ್ಪಟ ಮೂರ್ಖ ನೀನು ! ನಾನು ಹೇಳಿದಂತೆ ನಡೆದುಕೊಂಡಿದ್ದರೆ ಇಂಥ ಗತಿ ನಿನಗೆ ಬರುತ್ತಿರಲಿಲ್ಲ. ಜೀವವಿಲ್ಲದ ಶವದಂತೆ ಇಲ್ಲಿ ಬಿದ್ದುಕೊಂಡಿದ್ದ ನಿನಗೆ ಗಾಳಿ ಹಾಕಿ, ಉಪಾಯ ಹೇಳಿಕೊಟ್ಟು, ಕಳೆ ತಂದುಕೊಟ್ಟು ಕಳುಹಿಸಿದೆ. ನಿನ್ನ ಬುದ್ಧಿಯನ್ನು ನಿನ್ನ ಹಿಡಿತದಲ್ಲಿಟ್ಟುಕೊಂಡು ಇದ್ದುದರಲ್ಲೆ ತೃಪ್ತಿಪಟ್ಟುಕೊಂಡಿದ್ದರೆ ಸುಖದಿಂದ ಬದುಕಬಹುದಿತ್ತು. ನೀನು ಅಷ್ಟಕ್ಕೆ ನಿಲ್ಲಲಿಲ್ಲ. ಮಹಾಪುರುಷರನ್ನು ಮೀರಿಸುವ ಅವತಾರ ಪುರುಷನಾಗಲು ಹೊರಟೆ. ಯಾವ ಯೋಗ್ಯತೆಯೂ ನಿನಗಿಲ್ಲವಾದರೂ ನೀನೊಬ್ಬ ದಿವ್ಯ ಪುರುಷ ಎಂದು ನಂಬಿ ಆ ರೀತಿ ವರ್ತಿಸತೊಡಗಿದೆ. ಬಣ್ಣದ ರಬ್ಬರಿನ ಬುಗ್ಗೆ ಎಷ್ಟು ಉಬ್ಬ ಬೇಕೋ ಅಷ್ಟೇ ಉಬ್ಬಬೇಕು; ಒಣ ಅಹಂಕಾರದಿಂದ ತನ್ನ ಶಕ್ತಿಮೀರಿ ಉಬ್ಬ ತೊಡಗಿದರೆ ಒಮ್ಮೆಲೆ ಒಡೆದು ಹೋಗುತ್ತದೆ, ನಿರುಪಯೋಗಿಯಾಗುತ್ತದೆ. ಮೂರ್ಖಾ! ಗಡ್ಡಕ್ಕೆ ಬೆಂಕಿ ಹತ್ತಿದಾಗ ಬಾವಿ ತೋಡಹೊರಟವನಂತೆ ಕೊನೆಗೊಮ್ಮೆ ನಿನಗೆ ಸ್ವಲ್ಪ ಬುದ್ಧಿ ತಿಳಿಯಿತಾದರೂ ಅದರ ಉಪಯೋಗವೇನು? ಅಪಥ್ಯದಿಂದ ಸಾವಿನ ಬಾಗಿಲಲ್ಲಿ ಇದ್ದಾಗ ಯಾವ ಔಷಧವೂ ನಾಟದು, ಎಂಬ ಈ ವಿಚಾರ ತಿಳಿ ಯಲಿಲ್ಲವೆ ನಿನಗೆ?' ಎಂದು ಅಣಕಿಸಿ ನಕ್ಕಂತಾಯಿತು.

ಆ ಅಣಕದ ನಗೆಯನ್ನು ಸಹಿಸಲಾರದೆ ಅಲ್ಲಿಂದ ಎದ್ದುಬಿಟ್ಟ. ಕಡಲೇಕಾಯಿಗಳನ್ನು ದೂರ ಎಸೆದುಬಿಟ್ಟ; ಮೆಟ್ಟಲುಗಳನ್ನಿಳಿದು ಕೆರೆಯ ನೀರಿನ ಬಳಿ ಬಂದ. ಯಾರಾದರೂ ನೋಡುತ್ತಿರುವರೇನೋ ಎಂಬ ಭಯದಿಂದ ಒಂದು ಸಲ ಸುತ್ತು ಮುತ್ತಲೂ ದೃಷ್ಟಿ ಹೊರಳಿಸಿದ. ಯಾರೂ ಕಾಣಿಸಲಿಲ್ಲ. ಯಾತಕ್ಕೂ ಉಪಯೋಗವಾಗದ ಈ ಜೀವದಿಂದ ಪ್ರಯೋಜನವಾದರೂ ಏನೆಂದುಕೊಂಡು ನೀರಿಗೆ ಧುಮುಕಲು ಅಡಿಯೆತ್ತಿದ. ಯಾವ ಅದೃಶ್ಯ ವಸ್ತುವೂ ಈ ಸಲ ಅವನನ್ನು ತಡೆಯಲು ಬರಲಿಲ್ಲ.

'ಶೇಂಗಾ!.... ಶೇಂಗಾ!'.... ಚೌಕದಲ್ಲಿ ಕುಳಿತು ಮಾರುವ ಆ ಮುದುಕಿಯ ದನಿ ಅಲ್ಲಿಗೂ ಕೇಳಬರುತ್ತಿತ್ತು.

ಬ್ರಹ್ಮಚಾರಿ ತಡೆದುನಿಂತ. ಮುಂದಿಟ್ಟ ಹೆಜ್ಜೆಯನ್ನು ಹಿಂದಿರುಗಿಸಿದ. ಮೆಟ್ಟಲುಗಳನ್ನೇರಿ ಮೇಲೆ ಬಂದು ದೃಢ ಮನಸ್ಸಿನಿಂದ ಅಂತರಂಗದ ಕರೆ ಬಂದ ಕಡೆಗೆ ಸಾಗಿದ.

—ಬಸವರಾಜ ಕಟ್ಟೀಮನಿ.

## ಅಭ್ಯಸನಗಳು

**ಪ್ರಶ್ನೆಗಳು:—**

(೧) ಬ್ರಹ್ಮಚಾರಿಯ ಮಹತ್ವಾಕಾಂಕ್ಷೆ ಯಾವುದು? ಮತ್ತು ಅದನ್ನು ಈಡೇರಿಸಿಕೊಳ್ಳಲು ಅವನು ಹೂಡಿದ ಉಪಾಯ ಯಾವುದು?

(೨) ಬ್ರಹ್ಮಚಾರಿಯ ಯೋಜನೆಯು ಏಕೆ ಮಣ್ಣುಗೂಡಿತು?

(೩) ಬ್ರಹ್ಮಚಾರಿಗೆ ಸಂಭ್ರಮದ ಸ್ವಾಗತ ದೊರೆಯಲು ಕಾರಣವೇನು?

(೪) ಬ್ರಹ್ಮಚಾರಿಯ ಹೆಜ್ಜೆ ಎಲ್ಲಿ ತಪ್ಪಿತು? ಮತ್ತು ಅದನ್ನು ಸರಿಪಡಿಸಿಕೊಳ್ಳಲು ಅವನು ಮಾಡಿದ ಸಂಕಲ್ಪವಾವುದು?

(೫) 'ಬಣ್ಣದ ಬುಗ್ಗೆ' ಎಂಬ ಹೆಸರಿನ ಔಚಿತ್ಯವೇನು?

**ಭಾಷಾಭ್ಯಾಸ:—**

(೧) ಅದೇ ಊರು; ಅದೇ ಬೀದಿ; ಅದೇ ಜನ; ಅದೇ ನಿಲ್ದಾಣದಿಂದ ಆತ ಬಂದಿದ್ದ ...... ......
ಆ ಜಯಜಯಕಾರ, ಆ ಘೋಷಣೆ, ಆ ಹಾರ ತುರಾಯಿ, ಆ ಹಣ್ಣು-ಹಂಪಲ!
'ಅದೇ' ಮತ್ತು 'ಆ' ಇವುಗಳ ಪುನರುಕ್ತಿಯಿಂದ ಉಂಟಾಗುವ ಪರಿಣಾಮವನ್ನು ನಿರೀಕ್ಷಿಸಿರಿ. ಮತ್ತು ಇದೇ ವಾಕ್ಯವೃಂದದಲ್ಲಿ ಬಂದ ಚಿಕ್ಕ ಚಿಕ್ಕ ಉದ್ಗಾರವಾಚಕ ವಾಕ್ಯಗಳನ್ನು ನೋಡಿರಿ. ಇದರಂತೆ 'ಆ' ಇದನ್ನು ಐದು ಸಲ ಉಪಯೋಗಿಸಿ ಸೂರ್ಯೋದಯವನ್ನು ಬಣ್ಣಿಸಿರಿ.
ಇದೇ ಕಥೆಯಲ್ಲಿ ಬಂದ 'ಆ' 'ಈ' ಇವುಗಳ ಪುನರುಕ್ತಿಯ ಪರಿಣಾಮವನ್ನು ಕಂಡು ಹಿಡಿಯಿರಿ.

(೨) ಈ ಕಥೆಯಲ್ಲಿ ಬಂದ ವಿರಾಮ ಚಿಹ್ನವನ್ನು ಅನುಲಕ್ಷಿಸಿರಿ.

[೧] ಯಾವ ಯೋಗ್ಯತೆ ತನಗಿತ್ತೋ —— ಅದೇನೂ ಈಗ ಹೆಚ್ಚಿಲ್ಲ.

[೨] ಶ್ರೇಯಸ್ಸು ಆ ಪತ್ರಿಕೆಗಳದು —— ತನ್ನಿಂದ ಹಣ ತಿಂದ ಪತ್ರಿಕೆಗಳದು.

[೩] ಘಟನೆಗಳೆಲ್ಲ ಅವನ ಮನದ ಪರದೆಯ ಮೇಲೆ ಮೂಡಿ ಹೋದವು . . . . ಮಹಾಪುರುಷ . . . . ಕಾರಣಪುರುಷ . . . . ವಿದ್ಯಾರಣ್ಯ . . . .

[೪] '——' '....' ಈ ಚಿಹ್ನಗಳಲ್ಲಿರುವ ವ್ಯತ್ಯಾಸವನ್ನು ಅರಿಯಿರಿ.

[೫] 'ಬಿಸಿಲು .... ಮಳೆ .... ಗಾಳಿ .... ಚಳಿ ಯಾವುದನ್ನೂ ಗಮನಿಸದೆ' ಇದನ್ನು 'ಬಿಸಿಲು, ಮಳೆ, ಗಾಳಿ, ಚಳಿ ಯಾವುದನ್ನೂ ಗಮನಿಸದೆ' ಹೀಗೆ ಬರೆದರೆ ಅರ್ಥದಲ್ಲಿ ಆಗುವ ವ್ಯತ್ಯಾಸವೇನು ?

(೩) [೧] 'ಅದೇ ನಿಲ್ದಾಣದಿಂದ ಆತ ಬಂದಿದ್ದ'
'ಆತ ನಿಲ್ದಾಣದಿಂದ ಅದೇ ಬಂದಿದ್ದ'
ಇವುಗಳಲ್ಲಿರುವ ಭೇದವನ್ನು ತೋರಿಸಿರಿ.

[೨] ನಿಲ್ದಾಣಕ್ಕೆ ಅವನನ್ನು ಸ್ವಾಗತಿಸಲು ಒಬ್ಬರೂ ಬಂದಿರಲಿಲ್ಲ ಅಥವಾ ಒಬ್ಬನೂ ಬಂದಿರಲಿಲ್ಲ. ಇವೆರಡು ವಾಕ್ಯಗಳಲ್ಲಿರುವ ಅರ್ಥ ವ್ಯತ್ಯಾಸ ವೇನು ? ಈ ಸಂದರ್ಭದಲ್ಲಿ ಯಾವ ವಾಕ್ಯವು ಹೆಚ್ಚು ಉಚಿತವಿರುವದು? ಏಕೆ ?

ಶಬ್ದ ವಿಚಾರ :—

(೧) ಹಸಿ (ಧಾ) + ವು (ಪ್ರತ್ಯಯ) = ಹಸಿವು (ಕೃದಂತನಾಮ). ಇದರಂತೆ ಮರೆ, ತಿಳಿ, ನಲಿ, ದಣಿ ಈ ಧಾತುಗಳಿಂದ ಉಂಟಾದ ನಾಮಗಳನ್ನು ಹೇಳಿರಿ.

(೨) ಪ್ರಯೋಜನ, ಸದುಪಯೋಗ, ಪ್ರಸಿದ್ಧ ಇವುಗಳಿಗೆ ವಿರುದ್ಧಾರ್ಥಕ ಶಬ್ದ ಗಳನ್ನು ಹೇಳಿರಿ.

(೩) ಅಕ್ಕ-ಪಕ್ಕ, ಊಟ-ಉಪಚಾರ, ಇಂತಹ ಐದು ಜೋಡು ನುಡಿಗಳನ್ನು ಹೇಳಿರಿ.

(೪) ಮುಖ—ಭಂಗ—ಹೀನ—ಬಾಡು—ತಿರುವು; ಬಣ್ಣದ ಮಾತು, ಇವುಗಳನ್ನು ಒಂದೊಂದು ವಾಕ್ಯದಲ್ಲಿ ಉಪಯೋಗಿಸಿರಿ.

ವಾಕ್‌ಶಿಕ್ಷಣ :—

ವ್ಯಂಗ್ಯ, ವೆಂಗ್ಯ; ಒಸ್ತು, ವಸ್ತು; ಭೇದ, ಬೇಧ; ಈ ಶಬ್ದಗಳಲ್ಲಿಯ ಶುದ್ಧ ರೂಪಗಳನ್ನು ಗುರುತಿಸಿರಿ.

ಚರ್ಚೆ :—

(೧) 'ಹಣವಂತನೇ ಗುಣವಂತನು' ಈ ಅಭಿಪ್ರಾಯವು ನಿಜವಿರುವದೇ ?

(೨) ಗುಣ ಮತ್ತು ಬಣ್ಣ ಇವುಗಳಲ್ಲಿ ಯಾವುದಕ್ಕೆ ಹೆಚ್ಚು ಬೆಲೆ ?

ಬರೆಹ :—

(೧) ಆತನನ್ನು ಹೊತ್ತು ತಂದ . . . . ಬೀದಿಗುಂಟ ಬರುತ್ತಿದ್ದ. ಈ ವಾಕ್ಯವೃಂದದ ಸಾರಾಂಶವನ್ನು ಬರೆಯಿರಿ.

(೨) ನಿಮ್ಮ ಶಾಲೆಯ ವಾರ್ಷಿಕ ಸ್ನೇಹ ಸಮ್ಮೇಲನಕ್ಕೆ ಬಂದ ಅತಿಥಿಗೆ ನೀವಿತ್ತ ಸಂಭ್ರಮದ ಸ್ವಾಗತವನ್ನು ಬಣ್ಣಿಸಿರಿ.

(೩) ಪರವಂಚಕನು, ಆತ್ಮವಂಚಕನೂ ಅಹುದು ಎಂಬುದನ್ನು ಮೇಲಿನ ಕಥೆಯಿಂದ ವಿವರಿಸಿರಿ.

# ೪. ಸರ್ವಾರ್ಥಸಿದ್ಧಿ ಕವಚ !

[ ಯಂತ್ರಮಂತ್ರಗಳಿಗೆ ಮರುಳಾಗಿ ಮೋಸ ಹೋಗುತ್ತಿರುವ ಜನರನ್ನು ಕುರಿತು ಒಂದು ನಗೆಬರೆಹ. ]

'ಸರ್ವಾರ್ಥಸಿದ್ಧಿ ಕವಚ!' ಎಂತಹ ಆಶಾದಾಯಕ ಶಬ್ದಗಳು! ನಿರಾಶೆಯ ನರಕದಲ್ಲಿ ಹೊರಳಾಡುತ್ತಿದ್ದ ನನಗೆ ಈ ಶಬ್ದಗಳನ್ನು ಕೇಳಿ ಸ್ವರ್ಗಕ್ಕೆ ಫ್ರೀ ಪಾಸು ಸಿಕ್ಕಿದಷ್ಟು ಆನಂದವಾಯಿತು; ಸರ್ವಾರ್ಥಸಿದ್ಧಿ ಕವಚ !

ನಾನು ತೀರ ಅದೃಷ್ಟಹೀನ ವ್ಯಕ್ತಿ. ನಾನು ಹುಟ್ಟುವ ಗಳಿಗೆಯಲ್ಲಿ ಮನುಷ್ಯನ ಜೀವನದ ಸುಖದುಃಖಗಳನ್ನು ರೂಪಿಸಿರುವ ನವಗ್ರಹಗಳು ಸಂಪು ಹೂಡಿದ್ದವಂತೆ. ಶನಿಯೊಬ್ಬನೇ ಸಂಪಿಗೆ ಸೇರದೇ ಇದ್ದುದರಿಂದ ನನ್ನ ಜೀವನದಲ್ಲಿ ಅವನೊಬ್ಬನದೇ ಸರ್ವಾಧಿಕಾರವಾಯಿತು. ಸಂಪು ಕಡೆಗೆ ನಾರದರ ಮಧ್ಯಸ್ಥಿಕೆಯಿಂದ ಮುಕ್ತಾಯವಾಯಿತಂತೆ. ಹೇಗೆ ಮುಕ್ತಾಯವಾಯಿತೋ ನಾನರಿಯೆ. ಹೇಗಿದ್ದರೂ ದೇವರ ಹಾಗು ನವಗ್ರಹಗಳೊಳಗಿನ ಆ ವಿವಾದದಲ್ಲಿ ನನ್ನಂತಹ ಹುಲುಮಾನವನ ಲೆಕ್ಕ ಯಾರಿಗೆ ? ಅಂತೆಯೇ ನನ್ನ ಪಾಲಿಗೆ ಶನಿಯು ನಿರಂಕುಶ ಪ್ರಭುತ್ವವೊಂದೇ ಉಳಿಯಿತು. ನಿರಾಶೆ, ನಷ್ಟ, ಸಂಕಷ್ಟಗಳು ನಾಯಿಯ ಹಿಂದಿನ ಬಾಲದಂತೆ ನನ್ನ ಬೆನ್ನು ಬಿಡಲಿಲ್ಲ. ಇದರ ಪರಿಹಾರಕ್ಕಾಗಿ ಇದ್ದ, ಇಲ್ಲದ ಎಲ್ಲ ಜ್ಯೋತಿಷಿಗಳ ಸಲಹೆ ಕೇಳಿದೆ. ಒಬ್ಬ ಜ್ಯೋತಿಷಿಶ್ರೇಷ್ಠ ಶನಿವಾರ ರಾತ್ರಿ ಊಟ ಬಿಡಬೇಕೆಂದ; ಬಿಟ್ಟೆ. ಶನಿವಾರ ಪೂರ್ಣ ಉಪವಾಸ ಮಾಡಬೇಕೆಂದ ಇನ್ನೊಬ್ಬ ಮಹಾಜ್ಯೋತಿಷಿ; ಅದನ್ನೂ ಮಾಡಿ ನೋಡಿದೆ. ಶನಿಯು ಸಿಟ್ಟಾಗಬಾರದೆಂದು ಚಹಾ ಕೂಡಾ ಬಿಟ್ಟೆ. ಶನಿಮಹಾತ್ಮ್ಯೆ ಪಾರಾಯಣ, ಎಂದ ಮತ್ತೊಬ್ಬ ಜ್ಯೋತಿರ್ಮಾರ್ತಂಡ; ಓದಿ ಓದಿ ಅದು ಬಾಯಿಪಾಠವಾಗಿಹೋಯಿತು. ಶನಿಮಹಾತ್ಮ್ಯದ ಚಿತ್ರಪಟ ಬಂದಾಗ ಒಂದೂ ದಿನ ತಪ್ಪದೆ ಪ್ರತಿ ದಿನದ ಮೂರೂ (Show) ಶೋಗಳನ್ನೂ (ಆಟಗಳನ್ನು) ಭಕ್ತಿಯಿಂದ ಹೋಗಿ ನೋಡಿದ್ದಾಯಿತು. ಆದರೆ ಕೈತೊಳಕೊಂಡು ಬೆನ್ನುಹತ್ತಿದ ಶನಿಮಹಾರಾಯನ ವಕ್ರದೃಷ್ಟಿ ಮಾತ್ರ ಕಡಿಮೆಯಾದುದೇನು ಕಂಡುಬರಲಿಲ್ಲ.

ಈ ಪರಿಸ್ಥಿತಿಯಲ್ಲಿ ಶನಿವಾರದ ಉಪವಾಸದಿಂದ ಬಳಲಿ ಬೆಂಡಾಗಿ ರವಿವಾರ ಮುಂಜಾನೆ ಚಹದ ಅಂಗಡಿಯಿಂದ ತರಿಸಿದ ಚಿವಡಾ ಕಟ್ಟಿಕೊಟ್ಟ ಒಂದು ವರ್ತಮಾನಪತ್ರದಲ್ಲಿ ಒಂದು ಜಾಹಿರಾತನ್ನು ಓದಿದೆ.

ಮಾನವರೇ ನರಳುವಿರೇಕೆ ?

"ನಮ್ಮ 'ಸರ್ವಾರ್ಥಸಿದ್ಧಿ ಕವಚ'ವನ್ನು ಧರಿಸಿದರೆ ನಿಮ್ಮ ಯಾವತ್ತೂ ಸಂಕಷ್ಟಗಳು ದೂರವಾಗುವವು. ಕೃತಯುಗದಲ್ಲಿ ಕೃತಕ ಮಹಾಮುನಿಯು ಮನುಷ್ಯಜೀವಿಗಳು ಪಡುತ್ತಿರುವ ನಾನಾ ಕಷ್ಟಗಳನ್ನು ಕಂಡು, ಕನಿಕರಗೊಂಡು ದೀರ್ಘಕಾಲದವರೆಗೆ ಘೋರತಪಸ್ಸನ್ನು ಗೈದು, ಮೂವತ್ತು ಮೂರು ಕೋಟಿ ದೇವರನ್ನು ಮೆಚ್ಚಿಸಿ, ಅವರೆಲ್ಲರ ಅನುಗ್ರಹದಿಂದ ಇಷ್ಟಾರ್ಥಸಿದ್ಧಿಯ ವರವನ್ನು

ಪಡೆದನು. ಆ ದಿವ್ಯ ಶಕ್ತಿಯ ಪ್ರಭಾವದಿಂದ ತಯಾರಿಸಲ್ಪಟ್ಟ ನಮ್ಮ 'ಸರ್ವಾರ್ಥ ಸಿದ್ಧಿ ಕವಚ'ವನ್ನು ಧರಿಸುವವರ ಎಲ್ಲ ಇಷ್ಟಾರ್ಥಗಳು ಕೈಗೂಡುವುವು. ನೀವು ಕಾಮಿಸಿದ ಸ್ತ್ರೀ, ಎಷ್ಟೇ ಕಠೋರ ಹೃದಯಳಿರಲಿ, ನಿಮ್ಮನ್ನು ಎಷ್ಟೇ ತಿರಸ್ಕರಿಸು ತ್ತಿರಲಿ, ಈ ಕವಚವನ್ನು ಧರಿಸಿದೊಡನೆ ಎಲ್ಲಿದ್ದರೂ ಹಗ್ಗದಿಂದ ಬಿಗಿದು ಎಳೆಯಲ್ಪ ಟ್ಟವಳಂತೆ ನಿಮ್ಮ ಬಳಿ ಬಂದು ನಿಮ್ಮ ಕಾಲಿಗೆರಗಿ ನಿಮ್ಮ ಆಜ್ಞಾಧಾರಕಳಾಗುವಳು. ನೀವು ವ್ಯಾಪಾರಸ್ಥರಿದ್ದರೆ, ನೀವು ಖರೀದಿ ಮಾಡುವ ಸಾಮಾನುಗಳ ಕ್ರಯ ಅರ್ಧ ಕ್ಕರ್ಧ ಇಳಿಯುವುದು; ನೀವು ಮಾರುವಾಗ ಒಮ್ಮಿಗೆಲೆ ಇಮ್ಮಡಿಯಾಗುವುದು. ಮಕ್ಕಳಿಲ್ಲದವರಿಗೆ ಅವಳಿಮಕ್ಕಳಾಗುವುವು. ಮಕ್ಕಳು ಬೇಡವೆಂದಿದ್ದವರಿಗೆ ಹೆರಿಗೆ ನಿಂತೇ ಹೋಗುವುದು. ವಿದ್ಯಾರ್ಥಿಗಳಿಗೆ ಪರೀಕ್ಷೆಯಲ್ಲಿ ಪ್ರಥಮಸ್ಥಾನ ಸಿಕ್ಕು ವುದು. ನೀವು ವಾದಿಯಾಗಿದ್ದರೆ ದಾವೆ ಡಿಕ್ರಿಯಾಗುವುದು. ಪ್ರತಿವಾದಿಯಾಗಿದ್ದರೆ ಕೇಸ ಡಿಸ್‌ಮಿಸ್ ಆಗುವುದು. ಮುದುಕರು ಯುವಕರಾಗುವರು. ಗೋಚರಕ್ಕೆ ಬಂದ, ಬಾರದ ಎಲ್ಲ ರೋಗಗಳು ಸದ್ದಿಲ್ಲದೆ ಓಡಿಹೋಗುವುವು."

"ಕೃತಕ ಮಹಾಮುನಿಯ ವರಪ್ರಣೀತವಾದ 'ಸರ್ವಾರ್ಥಸಿದ್ಧಿ ಕವಚದ' ಮಹಿಮೆಯನ್ನು ವರ್ಣಿಸಲು ಮಹಾಶೇಷನಿಗೆ ಸಾವಿರ ನಾಲಗೆಗಳೂ ಸಾಲದೆ, ಅವನು ಕ್ಷೀರಸಾಗರದ ದಂಡೆಯ ಉದ್ಯಾನದಲ್ಲಿನ ರೆಡಿಮೇಡ ಸ್ಟೋರಿನಲ್ಲಿ ಇನ್ನೂರು ಎಕ್ಸ್ಟ್ರಾ (extra) ನಾಲಿಗೆಗಳಿಗೆ ಆರ್ಡರ ಕೊಟ್ಟನು. ಎರಡೇ ದಿನದ ಉಪಯೋಗ ದಿಂದ ತಿಳಿಯುವುದು ಇದರ ಶಕ್ತಿ. ಕಿಮ್ಮತ್ತು ಬರೀ ರೂಪಾಯಿ ಹತ್ತು. ಕೃತಕ ಕವಚಾಶ್ರಮ, ದಗೆಗಲ್ಲಿ, ಪೋಸ್ಟ ಉಡಾಳನಗರ" ಎಂದು ಇದರ ಕೆಳಗೆ ದೊಡ್ಡ ಅಕ್ಷರಗಳಲ್ಲಿ ಬರೆದಿತ್ತು:

"ಕೃತ ಯುಗದಲ್ಲಿ ಕೃತಕ ಮಹಾಮುನಿಗೆ ಎಲ್ಲ ದೇವತೆಗಳು ವರಕೊಟ್ಟಿದ್ದು ಸುಳ್ಳೆಂದು ಸಿದ್ಧಮಾಡಿಕೊಟ್ಟವರಿಗೆ ೫೦,೦೦೦ ರೂಪಾಯಿ ಬಹುಮಾನ."

ಇದನ್ನೋದಿದ ಮೇಲಂತೂ ತಾಯತದಲ್ಲಿ ಶ್ರದ್ಧೆಯು ದೃಢವಾಗಿ, ಆನಂದ ದಿಂದ ಹೃದಯವು ಹಾರಿ ಬಾಯೊಳಗೆ ಬಂತು. 'ಕೃತಕ ಮುನಿ ಜಿಂದಾಬಾದ! ಶನೀಶ್ವರ ಮುರ್ದಾಬಾದ!" ಎಂತ ಗಟ್ಟಿಯಾಗಿ ಘೋಷಣೆ ಮಾಡಿದೆ.

ರವಿವಾರವಿದ್ದುದರಿಂದ ಒಂದು ಕಿರಾಣಿ ಅಂಗಡಿಯಿಂದ ಅರ್ಧಾಣೆ ಜಾಸ್ತಿ ಕೊಟ್ಟು ಲಕೋಟಿ ತರಿಸಿದೆ. ಕವಚಕ್ಕಾಗಿ ಎಕ್ಸಪ್ರೆಸ್ ಪತ್ರ ಬರೆದು ಹಾಕಿದೆ. ಪಾರ್ಸಲು ಬಂದ ದಿನ ಮೊದಲು ನನ್ನಲ್ಲಿಗೇನೇ ಬರಬೇಕೆಂದು ಅಂಚೆ ಜವಾನನಿಗೆ ಎಂಟಾಣೆ ಖುಷಿ ಸಹ ಅಂದೇ ಕೊಟ್ಟುಬಿಟ್ಟೆ.

ಹತ್ತು ದಿನ ದಾಟಿ, ಹನ್ನೊಂದನೇ ದಿನ ನಾನು ಹಾಸಿಗೆಯಿಂದ ಏಳುವ ಮೊದಲೇ ಅಂಚೆ ಜವಾನ ಬಾಗಿಲು ತಟ್ಟಿದ. ಎದ್ದು ಬಾಗಿಲು ತೆರೆದೆ. ಕವಚದ ಪಾರ್ಸಲು ಹಿಡಿದುಕೊಂಡು ನಿಂತಿದ್ದ. ಕೂಡಲೇ ತಕ್ಕೊಂಡುಬಿಟ್ಟೆ. ಆ ಸ್ವಸ್ತಿಕದ ಆಕಾರದ ಲೋಹದ ತುಂಡು ದಾರದಲ್ಲಿ ಸಿಕ್ಕಿಸಿ, ಕೊರಳಿಗೆ ಕಟ್ಟಿಕೊಳ್ಳಬೇಕೆಂದು

ಸೂಚನಾಪತ್ರದಲ್ಲಿ ಬರೆದ ಪ್ರಕಾರ ಮೊದಲು ದೇವರೆದುರು ಧೂಪ ಹಾಕಿ ತಡ ಮಾಡದೆ ಕೊರಳಿಗೆ ಕಟ್ಟಿಕೊಂಡೆ.

ದೇಹದಲ್ಲಿ ನವಶಕ್ತಿಯ ಸಂಚಾರವಾದಂತಾಯಿತು. ಉತ್ಸಾಹದ ಭರದಲ್ಲಿ ಏನು ಮಾಡುವುದೆಂದು ತೋಚಲಿಲ್ಲ. ಕೋಣೆ ಗುಡಿಸಲಿಕ್ಕೆ ಬಂದ ಆಳಿನ ಹೆಗಲ ಮೇಲೆ ಕೈಹಾಕಿ, ಅವನನ್ನು ಖುರ್ಚಿಯಲ್ಲಿ ಕುಳ್ಳಿರಿಸಿ, "ನಿನಗೆ ಏನು ಬೇಕು ಹೇಳು, ಕೇಳಿದ್ದನ್ನು ಕೊಡುವೆ" ಎಂದೆ. ನನಗೆ ಹುಚ್ಚು ಹಿಡಿದಿದೆಯೆಂದು ಎನಿಸಿರಬೇಕು ಅವನಿಗೆ. ಉಸುರೆತ್ತದೆ, ಅವನು ಕೈಯಲ್ಲಿ ಕಸಬರಿಗೆ ಹಿಡಿದುಕೊಂಡೇ ಕೋಣೆ ಯಿಂದ ಓಡಿಬಿಟ್ಟ! ಅಂದಿನ ಕಸಗುಡಿಸುವ ಬಾರಿ ನನ್ನ ಮೇಲೆಯೇ ಬಂತು!

ತಾಯತದಿಂದ ಲಭಿಸಬಹುದಾದ ಸುಪರಿಣಾಮಗಳ ಕಾಲ್ಪನಿಕ ಸಂಭ್ರಮ ದಲ್ಲಿ ನನ್ನ ಮನಸ್ಸು ಓಲಾಡುತ್ತಿತ್ತು. ಪರೀಕ್ಷೆಯ ದಿನಗಳು ಸಮೀಪಿಸಿದ್ದವು. ನಾನು ಅಭ್ಯಾಸದ ಗೊಡವೆಗೆ ಹೋಗಲಿಲ್ಲ. ಕವಚದ ಪ್ರಭಾವದಿಂದ ಎಲ್ಲ ಇಷ್ಟಾರ್ಥಗಳು ತಾವಾಗಿ ಸಿದ್ಧಿಸುವಾಗ ನನಗೆ ಯಾತರ ಯೋಚನೆ!

ಪರೀಕ್ಷೆಯ ಪರಿಣಾಮವು ಹೊರಬಂದ ಮೇಲೆ ಮಾತ್ರ ದಿಗಿಲುಗೊಳ್ಳಬೇಕಾ ಯಿತು. ಅದೃಷ್ಟವೆಂದರೆ ಅಪಹಾಸ್ಯ ಮಾಡುತ್ತಿದ್ದ ಗುಂಡಪ್ಪ ಫಸ್ಟ್ ಕ್ಲಾಸಿ ನಲ್ಲಿ! ನನಗೂ ಮೊದಲನೆಯ ನಂಬರು ಸಿಕ್ಕಿತ್ತು; ಆದರೇನು; ನಾಪಾಸಾದವರಲ್ಲಿ ಕೆಳಗಿನಿಂದ.

ತಡಮಾಡದೆ ಬಡಕುಂದ್ರಿ ವಕೀಲರಲ್ಲಿಗೆ ಹೋದೆ. ನನ್ನ ಕತೆಯನ್ನೆಲ್ಲ ಕೇಳಿ, ಅವರು ಹ್ಹ....ಹ್ಹ.... ಹ್ಹ.... ಎಂದು ಜೋರಾಗಿ ನಕ್ಕುಬಿಟ್ಟರು. "ಪೆದ್ದಣ್ಣ! ದಾವೆಯಲ್ಲಿ ಗೆಲ್ಲಬೇಕಾದರೆ, ಕೃತಯುಗದಲ್ಲಿ ಕೃತಕ ಮಹಾಮುನಿಗೆ ದೇವರು ವರ ಕೊಡಲಿಲ್ಲವೆಂಬುದನ್ನು ನೀನು ಮೊದಲು ಸಿದ್ಧಮಾಡಬೇಕು. ಅದನ್ನು ಸಿದ್ಧಮಾಡ ಬೇಕಾದರೆ ಕೃತಯುಗದ ಪುರಾವೆ ಬೇಕು. ಅಥವಾ ದೇವರ ಸಾಕ್ಷ್ಯ ಕೊಡಬೇಕು. ಇದು ಕಲಿಯುಗದವರಿಂದ ಸಾಧ್ಯವಿಲ್ಲ. ನೀನು ಕೃತಯುಗದ ವಕೀಲರನ್ನು ಕಟ್ಟು; ಇಲ್ಲವೆ ದೇವಲೋಕಕ್ಕೇನೇ ಹೋಗಿ, ಅಲ್ಲಿಯೇ ಏನಾದರೂ ಖಟಪಟಿ ನಡಿಸು". ಎಂದರು.

ದಾವೆಯ ವಿಚಾರ ಅಲ್ಲಿಗೇ ಬಿಟ್ಟೆ. ಆದರೆ ದುರದೃಷ್ಟವು ಮಾತ್ರ ನನ್ನನ್ನು ಬಿಡ ಲಿಲ್ಲ. ನಮ್ಮ ಪಾಲಿಗೆ ಬಂದಿದ್ದ ಒಂದು ತುಂಡು ಹೊಲದ ವಿಷಯದಲ್ಲಿ ನೆರೆಮನೆಯ ರಾಮಾಚಾರ್ರು ಮಾಡಿದ ದಾವೆಯಲ್ಲಿ ಅವರು ಗೆದ್ದರೆಂದೂ, ಇನ್ನು ನಮಗೆ ಭಿಕ್ಷಾ ಪಾತ್ರವೇ ಗತಿಯೆಂದೂ ಊರಿಗೆ ಹೋದೊಡನೆ ತಂದೆಯವರು ಕಣ್ಣೀರು ಸುರಿಸುತ್ತ ಉಸುರಿದರು. "ದಾವೆಯಲ್ಲಿ ಏನೂ ಆಸೆ ಇರಲಿಲ್ಲ. ಆದರೆ ಅಪ್ಪನು ತರಿಸಿದ ಲಕ್ಷ್ಮೀ ಕವಚದ ಪ್ರತಾಪ; ಅದನ್ನು ತರಿಸಿದ್ದೇ ತರಿಸಿದ್ದು, ಮುನಸೂಫರು ನಮ್ಮ ಕಡೆಗೆ ತಿರುಗಿಯೇಬಿಟ್ಟರು." – ಎಂದು ರಾಮಾಚಾರ್ರ ಮಗನು ಗೆಳೆಯರೊಡನೆ ಹೇಳುತ್ತಿದ್ದ ಸುದ್ದಿ ಹತ್ತಿತೆ"ಂದು ಹೇಳಿದರು. ಹಾರಿಹೋಗಿದ್ದ ಇಷ್ಟಾರ್ಥಸಿದ್ಧಿ ಕವಚಗಳ

ಮೇಲಿನ ನನ್ನ ವಿಶ್ವಾಸವು ಪುನರ್ಜನ್ಮ ಪಡೆಯಿತು. ರಾಮಾಚಾರ‍್ರ ಮಗನಿಗೆ ಮುರ್ಗಿಪುಲಾವಿನ ಊಟಕೊಟ್ಟೆ. ಅದರ ರುಚಿಗೆ ಮೆಚ್ಚಿ ಅವನು 'ಲಕ್ಷ್ಮೀಕವಚ' ಕಳಿಸಿದ ಮಹಾನುಭಾವನ ವಿಳಾಸ ಹೇಳಿದ:— 'ಯೋಗಿ ಮಹಾಂತ ಬಾಬಾದಾಸ, ಹುಶ್ಯಾರಪುರ, ಪಂಜಾಬ'.

ಹಾಯಕೋರ್ಟಿಗೆ ಅಪೀಲಮಾಡಿ ನೋಡಬಹುದಿತ್ತು. ಆದರೆ ಲಕ್ಷ್ಮೀಕವಚ ರಾಮಾಚಾರ‍್ರ ಕೈಲಿ ಆಯಿತಲ್ಲ! ಎಂದು ತಂದೆಯವರು ಮಿಡುಕುತ್ತಿದ್ದರು. "ಏನೂ ಅಂಜಬೇಡಿರಿ" ಎಂದೆ. ನೇರವಾಗಿ ಆ ಯೋಗಿ ಮಹಾಂತ ಬಾಬಾದಾಸ ನಿಗೇನೇ ತಂತಿ ಕೊಟ್ಟೆ. ಅವನ ಉತ್ತರ ಬಂತು. "ರಾಮಾಚಾರ‍್ರಿಗೆ ಕಳಿಸಿದ್ದು ಸಾದಾ ಲಕ್ಷ್ಮೀ ಕವಚ. ಬರೀ ಇಪ್ಪತ್ತು ರೂಪಾಯಿ ಕಿಮ್ಮತ್ತಿನದು. ನೀವು ರೂ. ೨೫೦ ಕಳಿಸಿದರೆ ವಿಷ್ಣು ಕವಚವನ್ನು ಕಳಿಸುತ್ತೇನೆ. ಅದರ ಮಹಾಶಕ್ತಿಯ ಮುಂದೆ ಲಕ್ಷ್ಮೀ ಕವಚವೆಂದರೆ, ಸೂರ್ಯನ ಮುಂದೆ ಮಿಣುಕು ಹುಳ ಹಾರಿದಂತೆ; ತರಿಸಿನೋಡಿರಿ. ಆದರಿಂದ ನಿಮಗೆ ಜಯ ಬರದಿದ್ದರೆ ರೂ. ೧೦,೦೦೦ ಕೊಡು ವೆವು" ಎಂದು ತಿಳಿಸಿದ್ದರು.

ಈ ಜಾಹೀರಾತಿನಲ್ಲಿ ಸ್ವರ್ಗದ ಸಾಕ್ಷಿದಾರರನ್ನು ತರುವ ಮೋಸಗಾರಿಕೆಯಿಲ್ಲ. ಇಷ್ಟಾದ ಮೇಲೆ ಅವಿಶ್ವಾಸವೆಲ್ಲಿಯದು? ಇದ್ದ ಮನೆಯನ್ನು ಅಡವು ಹಾಕಿ ಕೆಳಗಿನ ಕೋರ್ಟಿನ ವಿರುದ್ಧ ಹೈಕೋರ್ಟಿಗೆ ಅಪೀಲು ಮಾಡಿದೆವು. ಜಡ್ಜಮೆಂಟು ಬರುವ ತನಕ ನಮ್ಮ ಆನಂದಕ್ಕೆ ಮೇರೆಯೇ ಇರಲಿಲ್ಲ. ರಾಮಾಚಾರ‍್ರ ಸೋಲಿನ ಬಗ್ಗೆ ಸಂದೇಹವಿದ್ದಿಲ್ಲ. ಕೊನೆಗೊಮ್ಮೆ ಹೈಕೋರ್ಟ ನಿರ್ಣಯವೂ ಬಂತು. ವಿಷ್ಣುಕವಚ ಧರಿಸಿದ ನಮಗೂ ಸೋಲು; ಲಕ್ಷ್ಮೀಕವಚಧಾರಿಗಳಾದ ರಾಮಾ ಚಾರ‍್ರಿಗೂ ಸೋಲು. ಗೆದ್ದವರು, ಕವಚಗಳ ವಿಷಯವನ್ನೇ ಅರಿಯದ ೨ನೆಯ ಪ್ರತಿ ವಾದಿ ಹೈದರ ಅಲ್ಲಿ ಸಾಹೇಬರು!

ಕೃತಕ ಮಹಾಮುನಿಯ ಕವಚದಿಂದ ನನ್ನ ಸ್ವಂತದ ಹಾನಿಗೀಡಾಗಿದ್ದೆ. ಈಗ ಈ ವಿಷ್ಣು ಕವಚದಿಂದ ಇದ್ದ ಹೊಲಮನೆಯೂ ಹೋಯಿತು!

ಮಂದಿ, ದೇಶಕ್ಕಾಗಿ, ಧರ್ಮಕ್ಕಾಗಿ, ಸರ್ವಸ್ವವನ್ನೂ ಕಳಕೊಂಡು ಹುತಾತ್ಮ ರಾಗುತ್ತಾರೆ. ನಾನು ಈ ನಶೀಬು ಮಾರುವ ಕವಚಗಳಿಗಾಗಿ ಎಲ್ಲವನ್ನು ಕಳ ಕೊಂಡು ಹುತಾತ್ಮನಾಗುವ ಬದಲು ಅಲ್ಪಾತ್ಮನಾದೆ! ಏನಾದರೂ ಸರಿ; ಇಂತಹ ಮೋಸದ ವ್ಯಾಪಾರವನ್ನು ನಿಲ್ಲಿಸಿದ ಪುಣ್ಯವನ್ನಾದರೂ ಗಳಿಸಬೇಕು, ಎಂದು ನಿರ್ಧರಿಸಿದೆ. ಮೋಸಹೋದ ಜನ ತಣ್ಣಗೆ ಕೂಡುತ್ತಾರೆಂದೇ ಇವರ ಆಟ ಸಾಗಿದೆ. ಇವರನ್ನು ಒಮ್ಮೆ ಕೋರ್ಟಿನ ಮೆಟ್ಟಲು ಹತ್ತಿಸಿ ಇವರ ಆಟವನ್ನೆಲ್ಲ ಬೈಲಿಗೆಳೆದರೆ, ತನ್ನ ತಾನೇ ಇವರ ದುರ್ವ್ಯಾಪಾರವು ನಿಂತುಹೋಗುವುದು.

ಹುಶಾರಪುರದ ಈ ಮಹಂತನು 'ಜಯ ಸಿಗದಿದ್ದರೆ ೧೦,೦೦೦ ರೂ.ಗಳನ್ನು ಕೊಡುತ್ತೇನೆ' ಎಂದು ಪತ್ರ ಬರೆದಿದ್ದ. ತಾಯಿಯ ಒಡವೆಗಳನ್ನು ಮನೆಯಲ್ಲಿಪ್ಪ

ಚೆಂಬು-ಚೆರಗಿಯ ವರಿಗೆ ಎಲ್ಲ ಜಂಗಮ ಮಾಲು ಮಾರಿ ಯಾರ ಮಾತೂ ಕೇಳದೆ ನಮ್ಮ ಜಿಲ್ಹಾ ಕೋರ್ಟಿನಲ್ಲಿ ದಾವೆ ಹೂಡಿಯೇಬಿಟ್ಟೆ. ಮಹಂತ ಕೋರ್ಟಿಗೆ ಹಾಜರು ಆಗಲೇ ಇಲ್ಲ; ಮತ್ತೇನು? ಏಕತರ್ಫಿ ನಿಕಾಲಿ ಹೊಡೆದೇಬಿಟ್ಟೆ.

ಹತ್ತು ಸಾವಿರ ರೂಪಾಯಿ ಡಿಕ್ರಿ! ಇನ್ನೇನು ಅಂಜಿಕೆ! ಅದನ್ನು ಹುಶಾರ ಪುರದ ಕೋರ್ಟಿಗೆ ವರ್ಗಾಯಿಸಿ ಅಮಲಬಜಾವಣೆಯ ಬಗ್ಗೆ ನಾನೇ ಅಲ್ಲಿಗೆ ಹೋದೆ. ಅಲ್ಲಿಯ ವಕೀಲ, ಕಾರಕೂನ, ಬೇಲೀಫರ ಕೈ ಬೆಚ್ಚಗೆ ಮಾಡಿದೆ. ಆದರೆ ನನ್ನ ಹಣೆಬರಹ ಎಂತಹದು! ನನ್ನ ಶನಿಚಾರವು ನನಗಿಂತಲೂ ಮುಂದೆಯೇ ಹೋಗಿ ನಿಂತಿತ್ತು! ಯೋಗಿ ಮಹಂತ ಬಾಬಾದಾಸ ಎಂಬ ದೊಡ್ಡ ಬೋರ್ಡು ಒಂದು ಮನೆಯ ಜಗಲಿಗೇನೋ ತೂಗಹಾಕಿತ್ತು. ಆದರೆ ಆ ಮನೆ ಬೇರೆಯವರದು. ಜಗ ಲಿಯಷ್ಟೆ ಇವರ ಆಫೀಸು. ಅಲ್ಲಿ ಒಂದು ಮರದ ಪೆಟ್ಟಿಗೆ; ಹರಕು ಚಾಪೆ; ಹೊರತು ಬೇರೇನೂ ಇರಲಿಲ್ಲ. ಒಟ್ಟು ಒಂದು ರೂಪಾಯಿ ಬೆಲೆ ಆಗಬಹುದು. "ಸಾಬ್, ಇಸೀ ಚೀಜೇ ಜಪ್ತ ಕರನಾ ಕ್ಯಾ?" ಎಂದು ತನ್ನ ಗಡ್ಡ ನೇವುತ್ತ ಕೇಳಿದ, ಆ ಜಪ್ತಿ ವಾರಂಟು ತಂದ ಶೀಖ ಬೇಲೀಫ.

ನಾಲ್ಕು ದಿನ ಹುಶಾರಪುರದಲ್ಲೇ ನಿಂತು ಯೋಗಿ ಮಹಂತ ಬಾಬಾದಾಸ ಸಿಗುತ್ತಾನೋ ನೋಡಿದೆ. ಅವನ ಪತ್ತೆಯೇ ಇಲ್ಲ. ಶಿವಕವಚ ತರಲಿಕ್ಕೆ ಕೈಲಾ ಸಕ್ಕೆ ಹೋಗಿದ್ದಾನೆ, ಎಂದರು ನೆರೆಯವರು.

ಇನ್ನು ಹೆಚ್ಚು ದಿನ ಅಲ್ಲಿಯೇ ನಿಂತರೆ ಹೊಟ್ಟೆಗಿಲ್ಲದೆ ನಾನು ನೇರವಾಗಿ ವೈಕುಂಠಕ್ಕೇನೇ ಹೋಗಬೇಕಾಗಿತ್ತು. ಅಂತೂ ೧೦,೦೦೦ ರೂಪಾಯಿಯ ಡಿಕ್ರಿ ಕಿಸೆಯಲ್ಲಿ ಹಾಕಿಕೊಂಡು ಹತ್ತಾಣೆಯೂ ವಸೂಲಾಗದೆ, ಎಲೆ ಅಡಿಕೆಗೆ ಹತ್ತು ಬಿಡಿ ಕಾಸಿಗೂ ಗತಿಯಿಲ್ಲದೆ ಹತಾಶನಾಗಿ ಊರಿಗೆ ಮರಳಿದೆ.

ಊರಿಗೆ ಬಂದ ಮೇಲೆ ಒಂದು ಉದ್ಯೋಗವನ್ನಾದರೂ ದೊರಕಿಸೋಣವೆಂದು ತುಂಬ ಪ್ರಯತ್ನಪಟ್ಟೆ.

ಮನಸ್ಸಿನ ದುಃಖ, ಹೊಟ್ಟೆಯ ಹಸಿವೆ ಎರಡನ್ನೂ ತಾಳಲಾರದೆ ಜೀವವೇ ಬೇಡವೆಂದೆನಿಸಿತು. ಕೆರೆಗೆ ಹಾರಿಯಾದರೂ ಪ್ರಾಣ ಬಿಡೋಣವೆಂದು ಒಂದು ದಿನ ನಮ್ಮೂರಿನ ದೇವರ ಗುಡಿಯ ಕೆರೆಯ ಬಳಿಗೆ ಹೋದೆ. "ಬ್ರಹ್ಮ ಸತ್ಯಂ ಜಗ ನ್ಮಿಥ್ಯಾ" ಎಂದು ಪ್ರವಚನ ಹೇಳುತ್ತಾ ಕೂತಿದ್ದ ಡೊಳ್ಳುಹೊಟ್ಟೆಯ ರಾಜವಿಲಾಸದ ಒಬ್ಬ ಸಾಧುವನ್ನು ಕಂಡೆ. ಜಗನ್ಮಿಥ್ಯಾ ನಿಜ. ಸತ್ಯಕ್ಕೆ ಈ ಲೋಕದಲ್ಲಿ ಸ್ಥಾನವಿಲ್ಲ. ಆದರೆ ಬ್ರಹ್ಮ ಸತ್ಯಂ ಎಂದು ಹೇಳುತ್ತಾನಲ್ಲ. ಯಾವ ಬ್ರಹ್ಮನ ಸತ್ಯದಿಂದ ಇವನಿಗೆ ಕೂತಲ್ಲಿಯೇ ಈ ರೇಶನ್ ದಿನಗಳಲ್ಲೂ ಪಂಚಪಕ್ವಾನ್ನದ ಊಟ ಸಿಕ್ಕುತ್ತದೆ? ಸೇವೆಗೆ ಸ್ತ್ರೀಪುರುಷರ ಸೇನೆಯೇ ಸಿದ್ಧವಾಗಿದೆ. ಬುದ್ಧನಂತೆ ನಾನು ಮರದಡಿ ಕೂತು ಕ್ಷಣಕಾಲ ಯೋಚಿಸಿದೆ. ವಿಚಾರ ಹೊಳೆಯಿತು.

ಈಗ ನಾನು ಒಬ್ಬ ವ್ಯಾಪಾರಿ. ಭಾಂಡವಲವಿಲ್ಲದ ವ್ಯಾಪಾರಿ. ಬೊಕ್ಕಸ ತುಂಬ ರೊಕ್ಕ ಬರುತ್ತದೆ. ನನ್ನ ಗಿರಾಕಿಗಳೆಲ್ಲ ವಕೀಲರು, ಡಾಕ್ಟರರು, ಸರಕಾರಿ

ಆಫೀಸರರು, ಶ್ರೀಮಂತರು, ಪುಢಾರಿಗಳು ನನ್ನ ವ್ಯಾಪಾರ ಯಾವುದು ಎನ್ನುವಿರಾ? ಕೇಳಿ ಹಾಗಾದರೆ :

"ಬ್ರಹ್ಮ ಸತ್ಯಂ"

ಮಾನವರೇ, ಚಿಂತೆಯೆಂದರೆ ನಿಮ್ಮನ್ನು ಜೀವಂತ ಸುಡುವ ಸಾಕ್ಷಾತ್ ಚಿತೆ. ಆದ್ದರಿಂದ ಚಿಂತೆಯನ್ನು ತ್ಯಜಿಸಿ, ಸೃಷ್ಟಿಕರ್ತನಾದ ಬ್ರಹ್ಮನು, ತಾನು ನಿರ್ಮಿಸಿದ ಮನುಷ್ಯಯೋನಿಯ ಸಂಕಷ್ಟಗಳೆಲ್ಲ ಸುಲಭದಲ್ಲಿ ನಿವಾರಣೆಯಾಗುವಗೋಸ್ಕರ ಆದಿ ಮಾನವನಾದ ವೈವಸ್ವತಮನುವಿಗೆ ಈ ಮಹಾಮಂತ್ರೋಪದೇಶವನ್ನು ಕೊಟ್ಟನು. ವೈವಸ್ವತಮನುವು ಸ್ವತಃ ಬರೆದಿಟ್ಟ, ತಿಬೇಟದಲ್ಲಿ ಉಪಲಬ್ಧವಾದ ಅಮೂಲ್ಯ ಪ್ರಾಚೀನ ಗ್ರಂಥದ ಆಧಾರದಿಂದ ನಾವು ನಮ್ಮ ಬ್ರಹ್ಮಮಂತ್ರಯುಕ್ತ ಕವಚವನ್ನು ತಯಾರಿಸಿದ್ದೇವೆ. ಅವರವರ ಯೋಗ್ಯತೆಯಂತೆ ಲಭಿಸಲು ಅನುಕೂಲವಾಗುವಂತೆ ಎಲ್ಲರಿಗೂ ೫ ರೂ. ಯಿಂದ ೫೦೦ ರೂ. ಗಳ ವರೆಗೆ ಅಗ್ಗದರದಲ್ಲಿ ಕವಚಗಳನ್ನು ಒದಗಿಸುತ್ತೇವೆ. ಇದನ್ನು ಧರಿಸುವುದರಿಂದ ನಿಮ್ಮ ಚಿಂತೆಗಳೆಲ್ಲ ದೂರವಾಗಿ ಎಲ್ಲ ಇಷ್ಟಾರ್ಥಗಳು ಸಿದ್ಧಿಸುವುವು. ಮುಂಬಯಿಯಂತಹ ಪಟ್ಟಣದಲ್ಲಿ ಕೂಡ ನಿಮಗೆ ಬೇಕಾದ ಕೇರಿಯಲ್ಲಿ ಕಡಿಮೆ ಬಾಡಿಗೆಗೆ ಉತ್ತಮ ಮನೆ ಸಿಗುವುದು. ನೀವು ವಕೀಲರಿದ್ದರೆ, ಶ್ರೀಮಂತ ಪಕ್ಷಗಾರರು ತಾವಾಗಿ ನಿಮ್ಮನ್ನು ಹುಡುಕಿಕೊಂಡು ಬಂದು ನಿಮ್ಮ ಮುಂದೆ ಹಣದ ಚೀಲಗಳನ್ನೇ ಸುರಿಯುವರು. ನೀವು ಡಾಕ್ಟರರಿದ್ದರೆ ನೀವು ಹೋದ ಊರಿನಲ್ಲಿ ಎಲ್ಲ ಡಾಕ್ಟರರು ಅಸ್ವಸ್ಥದಿಂದ ಹಾಸಿಗೆ ಹಿಡಿದು ರೋಗಿಗಳೆಲ್ಲ ನಿಮ್ಮ ಕಡೆಗೆ ಬರುವರು. ನೀವು ಇಚ್ಛಿಸಿದ ನವಕರಿಯಲ್ಲಿ ನೀವು ಅಪೇಕ್ಷಿಸುವುದಕ್ಕಿಂತ ಇಮ್ಮಡಿ ಸಂಬಳದ ಮೇಲೆ ನಿಮ್ಮನ್ನು ನೇಮಿಸುವುದಾಗಿ ಕೂತಲ್ಲಿ ಕರೆ ಬರುವುದು.

ಬೇಡವೇನು ? ನಿಮಗೆ ಇಂತಹ ಬ್ರಹ್ಮಕವಚ ? ತ್ವರೆ ಮಾಡಿರಿ! ಸ್ವಲ್ಪೇ ಉಳಿದಿವೆ !

ತಿಬೇಟದಿಂದ ಈ ದುರ್ಮಿಳ ಗ್ರಂಥವನ್ನು ಪಡೆದುಕೊಂಡು ಬಂದು ಹಿಮಾಲಯದಲ್ಲಿ ತಪಸ್ಸುಗೈದು ಮಹಾಸಿದ್ಧಿಯನ್ನು ಪಡೆದ ನಮ್ಮ ಗುರುವರೇಣ್ಯ ಶ್ರೀ ಶ್ರೀ ಶ್ರೀ ಬಾಬಾ ಸಾಧು ಮಹಾರಾಜರ ಕೃಪಾಪ್ರಸಾದದಿಂದ ಈ ದಿವ್ಯ ಕವಚಗಳು ಸಿದ್ಧವಾಗಿವೆ. ನಮ್ಮ ಆಶ್ರಮದಲ್ಲಿ ಬಂದು ಕಾಣಿಕೆ ಒಪ್ಪಿಸಿದ ಭಕ್ತರಿಗೆ ಗುರುಗಳ ಸ್ಮರಣ ಮಾತ್ರದಿಂದ ಸಂಕಷ್ಟಗಳ ಪರಿಹಾರವಾದ ಅನುಭವದ ಉದಾಹರಣೆಗಳುಂಟು. ಇಂತಹ ಘನಮಹಿಮ ಮಹರ್ಷಿಗಳ ಭಾವಚಿತ್ರದ ಕೊರಳಪದಕಗಳೂ ಉಂಗುರಗಳೂ ನಮ್ಮಲ್ಲಿ ಸಿಗುತ್ತವೆ.

* * * *

ಮೊದಲು ಏನೂ ಬೆಲೆಯಿಲ್ಲದವನಾಗಿದ್ದ ನನಗೆ ಇಂದು ಎಲ್ಲಕ್ಕೂ ಹೆಚ್ಚಿನ ಮಹತ್ವ ಬಂದಿದೆ. ಕಾರಣಾಂತರದಿಂದ ಅವರ ಇಚ್ಛಾಪೂರ್ತಿಯಾದ ಹಾಗೆ ಎನಿಸಿ

ಹಲವರು ನನ್ನನ್ನು ಮಹಂತನೆಂದು ಭಾವಿಸಿದ್ದಾರೆ. ನನ್ನ ಪಾದಧೂಳಿಯನ್ನು ಹಣೆಗೆ ಹಚ್ಚಿಕೊಳ್ಳುತ್ತಾರೆ. ಆಗ ನನಗೇನೇ ಸಂದೇಹ, ನನ್ನ ಸದ್ಗುಣಗಳ ಬಗೆಗೆ! ನನ್ನಲ್ಲಿ ಕೂಡಿಬಿದ್ದ ಸಂಪತ್ತನ್ನು ಕಂಡು ನನಗೆ ಅನೇಕರು ಬೆಲೆ ಕೊಡಹತ್ತಿದ್ದಾರೆ. ನನಗೆ ಮಾತ್ರ ಅಂತರಂಗದಲ್ಲಿ ಎಳ್ಳಷ್ಟೂ ಸಮಾಧಾನವೆನಿಸುವದಿಲ್ಲ. ನಾನು ಮಾಡುತ್ತಿರುವ ಈ ದಂದುಗ ಸರಿಯೆ, ಎಂದು ನನ್ನ ಒಳದನಿಯು ಒಳಗೊಳಗೇ ಕೊರೆಯುತ್ತಿದೆ. ಹೊಟ್ಟೆಬಟ್ಟೆಗಳಿಗಷ್ಟೇ ಅಲ್ಲ. ಸಂಪತ್ತಿಗೂ ಕಾರಣವಾದ ಧಂದೆಯಲ್ಲಿ ದೋಷವೆನಿಸುವುದು ನ್ಯಾಯವೇ? ಎಂದು ಇನ್ನೊಂದು ಮನಸ್ಸು ಸಮಾಧಾನ ಹೇಳಿ, ಚುಕ್ಕು ಬಡಿದು ವಿವೇಕದ ಕಣ್ಣು ಮುಚ್ಚಿಸುತ್ತಲಿದೆ.

—ತಲಚೇರಿ ರಂಗರಾವ

## ಅಭ್ಯಸನಗಳು

**ಪ್ರಶ್ನೆಗಳು:—**

(೧) ಜನರು ಕವಚ, ತಾಯತಾದಿಗಳ ಬೆನ್ನು ಹತ್ತುವ ಕಾರಣವೇನು ?

(೨) ಸರ್ವಾರ್ಥಸಿದ್ಧಿ ಕವಚದ ಮೇಲೆ ವಿಶ್ವಾಸವಿಟ್ಟವನ ಗತಿ ಏನಾಯಿತು ?

(೩) 'ಬ್ರಹ್ಮಸತ್ಯಂ' ಕವಚದಿಂದ ಸಿರಿವಂತನಾದ ಮೇಲೆಯೂ, ಅವನಿಗೆ ಮನಸ್ಸಿನಲ್ಲಿ ಅಸಮಾಧಾನ ಉಳಿಯಲು ಕಾರಣವೇನು ?

**ಭಾಷಾಭ್ಯಾಸ:—**

(೧) 'ಸರ್ವಾರ್ಥ ಸಿದ್ಧಿ ಕವಚ' ಇಲ್ಲವೆ 'ಬ್ರಹ್ಮಸತ್ಯಂ ಕವಚ'ಗಳ ಜಾಹೀರಾತಿನ ಶೈಲಿಯನ್ನು ನಿರೀಕ್ಷಿಸಿರಿ. ಇವುಗಳನ್ನು ಓದುವಾಗ ನಿಮಗೆ ನಗು ಎಲ್ಲೆಲ್ಲಿ ಬರುವದು ಎಂಬುದನ್ನು ಹೇಳಿರಿ.
ಇಂತಹ ಜಾಹೀರಾತುಗಳನ್ನು ಓದುವಾಗ ಜಾಹೀರಾತುಗಳಲ್ಲಿಯ ಸಂಗತಿಯು ನಿಜವಾದುದಲ್ಲ ಎಂಬುದು ಹೇಗೆ ಕಂಡುಬರುವುದು? ಉದಾಹರಣೆಗಳಿಂದ ಸ್ಪಷ್ಟಗೊಳಿಸಿರಿ.

(೨) ನೀವು ಒಂದು ಸಬಕಾರ ಕಾರಖಾನೆಯ ಮುಖ್ಯಸ್ಥರೆಂದು ತಿಳಿದು, ಅದರ ಪ್ರಚಾರಕ್ಕಾಗಿ ಒಂದು ಜಾಹೀರಾತನ್ನು ಸಿದ್ಧಪಡಿಸಿರಿ.

(೩) ಕೃತಕ-ಕವಚಾಶ್ರಮ, ದಗೆಗಲ್ಲಿ, ಉಪಾಳನಗರ, ಹುಶ್ಯಾರಪುರ — ಮೊದಲಾದ ಶಬ್ದಗಳಿಂದ ಲೇಖಕನು ಕವಚಗಳ ಬಗೆಗೆ ಯಾವ ಭಾವನೆಗಳನ್ನು ವ್ಯಕ್ತಗೊಳಿಸಿದ್ದಾನೆ ?

(೪) ಈ ಹರಟೆಯನ್ನು ಓದುವಾಗ ನಿಮಗೆ ನಗು ಎಲ್ಲೆಲ್ಲಿ ಬರುವುದು ಎಂಬುದನ್ನು ಹೇಳಿರಿ. ನಗುವನ್ನುಂಟುಮಾಡುವ ಐದಾರು ವಾಕ್ಯಗಳನ್ನು ಗುರುತಿಸಿರಿ.

(೫) [ಅ] 'ಗೋಚರಕ್ಕೆ ಬಂದ, ಬಾರದ ಎಲ್ಲ ರೋಗಗಳು ಸದ್ದಿಲ್ಲದೆ ಓಡಿಹೋಗುವವು.' ಇಲ್ಲಿ ಬಾರದ ಎಂಬ ಶಬ್ದವನ್ನೇಕೆ ಉಪಯೋಗಿಸಲಾಗಿದೆ?

[ಬ] ಶಿವಕವಚ ತರಲು ಕೈಲಾಸಕ್ಕೆ ಹೋಗಿದ್ದಾನೆ. ಹೊಟ್ಟೆಗಿಲ್ಲದೆ ವೈಕುಂಠಕ್ಕೆ ಹೋಗು ... ಎಂಬ ವಾಕ್ಯಗಳಲ್ಲಿ ಬಂದ ಕೈಲಾಸಕ್ಕೆ ಹೋಗು, ವೈಕುಂಠಕ್ಕೆ ಹೋಗು, ಎಂಬವುಗಳು ಏನನ್ನು ಸೂಚಿಸುವವು ?

(೬) 'ಇದನ್ನೋದಿದ ಮೇಲಂತೂ, ತಾಯತದಲ್ಲಿ ಶ್ರದ್ಧೆಯು ದೃಢವಾಗಿ, ಆನಂದದಿಂದ ಹೃದಯವು ಹಾರಿ ಬಾಯೊಳಗೆ ಬಂದಿತು.' 'ಕೃತಕ ಮುನಿ ಜಿಂದಾಬಾದ! ಶನೀಶ್ವರ ಮುರ್ದಾಬಾದ'! ಎಂದು ಗಟ್ಟಿಯಾಗಿ ಘೋಷಣೆ ಮಾಡಿದೆ.
ಇಲ್ಲಿರುವ ವಿನೋದಪೂರ್ಣ ಅತಿಶಯೋಕ್ತಿಯ ಶೈಲಿಯನ್ನು ನಿರೀಕ್ಷಿಸಬೇಕು.

(೭) [೧] 'ನನಗೆ ಏಕತರ್ಫಿ ನಿಕಾಲೆ ಸಿಕ್ಕಿತು' 'ನಾನು ಏಕತರ್ಫಿ ನಿಕಾಲೆ ಹೊಡೆದೇ ಬಿಟ್ಟೆ'! ಇವೆರಡು ವಾಕ್ಯಗಳಲ್ಲಿಯ ಭೇದವನ್ನು ತೋರಿಸಿರಿ.

[೨] 'ಪಾರ್ಸಲು ಬಂದ ದಿನ ಮೊದಲು ನನ್ನಲ್ಲಿಗೆ ಬರಬೇಕು' 'ಪಾರ್ಸಲು ಬಂದ ದಿನ ಮೊದಲು ನನ್ನಲ್ಲಿಗೇ ಬರಬೇಕು' ಇವೆರಡರಲ್ಲಿಯ ವ್ಯತ್ಯಾಸವನ್ನು ಹೇಳಿರಿ. (ಇಲ್ಲಿ ನಿಪಾತ ಅವ್ಯಯವು ಯಾವುದು.)

[೩] ವಿಶಾಲ ದೃಷ್ಟಿಯ ಭಾರತದ ನಾಗರಿಕರು ಹೀನ ಕೆಲಸಕ್ಕೆ ಎಂದಿಗೂ ಕೈಯಿಕ್ಕಲಾರರು.
ಭಾರತದ ವಿಶಾಲ ದೃಷ್ಟಿಯ ನಾಗರಿಕರು ಹೀನ ಕೆಲಸಕ್ಕೆ ಎಂದಿಗೂ ಕೈಯಿಕ್ಕಲಾರರು (ಈ ವಾಕ್ಯಗಳಲ್ಲಿ ಕಂಡು ಬರುವ ಭೇದವನ್ನು ಗುರುತಿಸಿರಿ.)

ಶಬ್ದ ವಿಚಾರ:—

(೧) ಅಮಲಬಜಾವಣಿ, ಜವಾನ, ರೆಡಿಮೇಡ, ಡಿಕ್ರಿ, ಫ್ರೀಪಾಸ ಈ ಶಬ್ದಗಳು ಯಾವ ಭಾಷೆಯಿಂದ ಬಂದಿವೆ? ಪಾಕೀಟು, ಬಟಾಟೆ, ಪಿಕಾಸಿ ಇವುಗಳು ಆಂಗ್ಲ ಭಾಷೆಯ ಯಾವ ಶಬ್ದದಿಂದ ಬಂದಿವೆ, ಎಂಬುದನ್ನು ಅರಿಯಿರಿ.

(೨) ಇಮ್ಮಡಿ:— ಎರಡು + ಮಡಿ = ಇಮ್ಮಡಿ. ಇದರಂತೆ ಇಬ್ಬಗೆ, ಇಬ್ಭಾಗ, ಇಕ್ಕೆಲ, ಇರ್ಚಾಸಿರ, ಇಪ್ಪತ್ತು ಇವುಗಳನ್ನು ಬಿಡಿಸಿ ಹೇಳಿರಿ.
ಆಶಾದಾಯಕ, ಲಾಭದಾಯಕ ಹೀಗೆ ದಾಯಕ ಎಂಬುದು ಅಂತ್ಯದಲ್ಲಿರುವ ಐದು ಶಬ್ದಗಳನ್ನು ಹೇಳಿರಿ.

(೩) ಕೈ ತೊಳೆದುಕೊಂಡು ಬೆನ್ನು ಹತ್ತು, ಕೈ ಬೆಚ್ಚಗೆ ಮಾಡು, ವಕ್ರದೃಷ್ಟಿ, ಹುಲುಮಾನವ, ಪಾರಾಯಣ, ಕೃತಕ ಇವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಮಾಡಿರಿ.

(೪) ಮೋಸಗಾರ — ಮೋಸಗಾರಿಕೆ, ಇದರಂತೆ ಕಮ್ಮಾರ, ಸಿರಿವಂತ, ಕಲಾವಂತ, ಚೆಲುವು, ನಿಲವು — ಇವುಗಳಿಂದ ತದ್ಧಿತನಾಮಗಳನ್ನು ಸಿದ್ಧಪಡಿಸಿರಿ.

ವಾಕ್‌ಶಿಕ್ಷಣ:—

(೧) ಜೋತಿಷಿ, ಮದ್ಯಾನ್ಹ, ಧೃವ, ಧೃಢ — ಇವುಗಳ ಶುದ್ಧ ರೂಪಗಳನ್ನು ಬರೆಯಿರಿ.

(೨) ನಿಮ್ಮ ಶಾಲೆಯ ಹಿರಿಮೆಯನ್ನು ಪರಿಣಾಮಕಾರಿಯಾದ ಧ್ವನಿಯಲ್ಲಿ ಹೇಳಿರಿ.

(೩) ನೀವು ಒಬ್ಬ ಜ್ಯೋತಿಷಿಯಲ್ಲಿ ಹೋಗಿರುವಿರೆಂದು ತಿಳಿದು ಆ ಜ್ಯೋತಿಷಿಯು ನಿಮ್ಮನ್ನು ಹೇಗೆ ಸ್ವಾಗತಿಸುವನು ಮತ್ತು ನಿಮಗೆ ಸಮಾಧಾನವನ್ನು ಹೇಗೆ ಹೇಳುವನು ಎಂಬುದನ್ನು ಅಭಿನಯಿಸಿರಿ.

ಚರ್ಚೆ—

(೧) 'ದೈವ ಮಿಗಿಲೋ ಪ್ರಯತ್ನ ಮಿಗಿಲೋ' ಎಂಬುದನ್ನು ಚರ್ಚಿಸಿರಿ.

(೨) ಜನರು ಯಂತ್ರ ತಂತ್ರಗಳಿಗೆ ಮೋಸ ಹೋಗುವ ಕಾರಣಗಳನ್ನು ಹೇಳಿರಿ.

ಬರಹ:—

(೧) ವಾರಭವಿಷ್ಯವನ್ನು ಓದಿ ತನ್ನ ದಿನದ ಕೆಲಸವನ್ನು ಮಾಡುವವನ ಸ್ಥಿತಿಯನ್ನು ಬಣ್ಣಿಸಿರಿ.

(೨) ಲಾಟರಿಯಿಂದ ಸಿರಿವಂತನಾಗಬೇಕೆಂದು ಹಾಳಾದವನ ಮನೆಯ ಸ್ಥಿತಿಯನ್ನು ಚಿತ್ರಿಸಿರಿ.

## ೫. ಬೀಗ ಶಕಾರ

[ಮೃಚ್ಛಕಟಿಕವು ಬಹಳ ಲೋಕಪ್ರಿಯ ಸಂಸ್ಕೃತ ನಾಟಕ. ಇಡೀ ಸಂಸ್ಕೃತ ನಾಟಕ ಪರಂಪರೆಯಲ್ಲಿ ಸಾಮಾಜಿಕ ನಾಟಕವೆಂದರೆ ಇದೊಂದೇ. ಈ ನಾಟಕದ ಕಥಾವಸ್ತು, ಅದನ್ನು ವಿವರಿಸಿದ ಕೌಶಲ ಎಲ್ಲವೂ ಅಪೂರ್ವವಾಗಿದೆ. ಇದರಲ್ಲಿಯ ನಗೆಮಾತಿನ ಸೊಗಸು, ಬೇರೆ ಪ್ರಾಚೀನ ನಾಟಕಗಳಲ್ಲಿ ಇಲ್ಲವೆಂದರೂ ಸಲ್ಲುವುದು. ೧೫೦೦ ವರುಷಗಳಿಗಿಂತ ಪ್ರಾಚೀನ ಕಾಲದ ನಾಟಕವಿದು. ಇದನ್ನು ಉಜ್ಜಯನಿಯಲ್ಲಿ ಶೂದ್ರಕ ಕವಿಯು ರಚಿಸಿದನೆಂದು ಖ್ಯಾತಿಯಿದೆ.]

ಉಜ್ಜಯನಿಯಲ್ಲಿ ಚಾರುದತ್ತನೆಂಬ ಆಗರ್ಭ ಶ್ರೀಮಂತನಿದ್ದನು. ಅವನು ಸದ್ಗುಣಿಯೂ ಉದಾರನೂ ಆಗಿದ್ದನು. ಆತನು ತನ್ನ ಹತ್ತಿ ಹೊಂದಿದವರಿಗೂ ಗೆಳೆಯರಿಗೂ ಬಡವರಿಗೂ ಧನಸಹಾಯ ಮಾಡುವದರಲ್ಲಿ ಹಿಂದೆ ಮುಂದೆ ನೋಡುತ್ತಿರಲಿಲ್ಲ. ಹೀಗೆ ಹೆರವರಿಗೆ ನೆರವಾಗುವದರಲ್ಲಿ ಚಾರುದತ್ತನು ಸಾಲಗಾರನಾಗುವ ಹೊತ್ತು ಬಂತು. ಆ ಊರಲ್ಲಿ ವಸಂತಸೇನೆ ಎಂಬ ಚಲುವೆಯಾದ ಕಲಾವಂತಳಿದ್ದಳು. ಅವಳು ಒಂದು ದಿನ ತನ್ನ ಮನೆಯಿಂದ ಹೊರಟು ಚಾರುದತ್ತನ ಮನೆಯ ಹತ್ತಿರ ಹಾಯ್ದು ಹೋಗುತ್ತಿದ್ದಳು. ಅವಳು ಶಕಾರನೆಂಬ ಆ ಊರ ಅರಸನ ಬೀಗನ ಕಣ್ಣಿಗೆ ಬಿದ್ದಳು. ಶಕಾರನು ಆ ತರುಣಿಯನ್ನು ನೋಡಿದೊಡನೆ ಹುಚ್ಚನಂತೆ ಅವಳ ಬೆನ್ನಟ್ಟಿ ಹೊರಟನು. ಅವನ ಜೊತೆಗೆ ಅವನ ಇಬ್ಬರು ಅಂಗರಕ್ಷಕರು ಇದ್ದರು. ವಸಂತಸೇನೆಯು ಆ ಮೂರ್ಖ ಶಕಾರನ ಹೊಂಚನ್ನು ಅರಿತು ಅವರ ಕೈಯಿಂದ ಪಾರಾಗುವದಕ್ಕಾಗಿ ಚಾರುದತ್ತನ ಮನೆಯಲ್ಲಿ ನುಸುಳಿದಳು. ಅದು ರಾತ್ರಿಯ ಕಾಲ. ಚಾರುದತ್ತನ ಗೆಳೆಯನಾದ ಮೈತ್ರೇಯನು ಹೊರಗೆ ಕೈಯಲ್ಲಿ ಒಂದು ದೀಪವನ್ನು ಹಿಡಿದುಕೊಂಡು ಬರುತ್ತಿದ್ದನು. ಗಾಳಿಯಿಂದ ದೀಪವು ಆರಿತು. ವಸಂತಸೇನೆಯು ಲಗುಬಗೆಯಿಂದ ಒಳಸೇರಿ ಚಾರುದತ್ತನಿಗೆ ತನ್ನ ಮುತ್ತು ರತ್ನದ ಅಲಂಕಾರಗಳನ್ನು

ಕಾಯ್ದಿಡಲು ಕೊಟ್ಟು ಬೇರೊಂದು ಬಾಗಿಲಿಂದ ಹೊರಟುಹೋದಳು. ಚಾರುದತ್ತನು ಆ ಅಲಂಕಾರಗಳನ್ನು ಜೋಕೆಯಿಂದ ಕಾಯ್ದಿಡುವದಕ್ಕಾಗಿ ಮೈತ್ರೇಯನ ವಶಕ್ಕೆ ಕೊಟ್ಟನು. ಇರುಳಿನಲ್ಲಿ ಗೋಡೆಯನ್ನು ಒಡೆದು ಶರ್ವಿಲಕನೆಂಬ ಕಳ್ಳನು ಆ ಅಲಂಕಾರಗಳನ್ನೆಲ್ಲ ಕದ್ದು ಒಯ್ದನು. ಚಾರುದತ್ತನಿಗೆ ಬೆಳಗಾದ ಮೇಲೆ ಇದು ಗೊತ್ತಾಯಿತು. ಆತನು ಬಹು ವ್ಯಥೆಪಟ್ಟುಕೊಂಡನು. ತನಗೆ ಬಡತನ ಬೇರೆ ಬಂದಿದೆ. ದುಷ್ಟರ ಕೈಯಿಂದ ತಪ್ಪಿಸಿಕೊಳ್ಳುವದಕ್ಕಾಗಿ ಒಬ್ಬ ಹೆಣ್ಣು ಮಗಳು ಕಾಯ್ದಿಡಲು ವಿಶ್ವಾಸದಿಂದ ತನ್ನಲ್ಲಿ ಆಭರಣಗಳನ್ನು ಇಟ್ಟು ಹೋಗಿದ್ದಾಳೆ. ಈಗ ಆ ಬೆಲೆ ಬಾಳುವ ವಸ್ತುಗಳು ತನ್ನಲ್ಲಿ ಇಲ್ಲವೆಂದು ಹೇಳಿದರೆ ಅವನ್ನು ಅಪಹರಿಸಿದ ಅಪವಾದವು ತನ್ನನ್ನು ತಟ್ಟದೇ ಇರಲಾರದು. ಇದರಿಂದ ತನ್ನ ಕೀರ್ತಿಯು ಕಲಂಕಿತ ವಾಗುವದು, ಎಂಬ ಚಿಂತೆಯಲ್ಲಿ ಆತನು ಮುಳುಗಿದನು.

ಅಂಥ ಹೊತ್ತಿನಲ್ಲಿ ಚಾರುದತ್ತನ ಹೆಂಡತಿಯು ತನ್ನ ಗಂಡನನ್ನು ಸಂಕಟದಿಂದ ಮುಕ್ತಗೊಳಿಸುವದಕ್ಕಾಗಿ ತನ್ನ ಕೊರಳೊಳಗಿನ ಒಂದು ಬೆಲೆಯುಳ್ಳ ಮುತ್ತಿನ ಮಾಲೆಯನ್ನು ಚಾರುದತ್ತನಿಗೆ ಕೊಟ್ಟಳು. ಆ ಮಾಲೆಯನ್ನು ಕೊಟ್ಟು ವಸಂತಸೇನೆ ಯನ್ನು ಸಮಾಧಾನಪಡಿಸಲು ಕೇಳಿಕೊಂಡಳು.

ಶರ್ವಿಲಕನು ತನ್ನ ಒಬ್ಬ ಪ್ರೇಯಸಿಯನ್ನು ಮೆಚ್ಚಿಸುವದಕ್ಕಾಗಿ ಈ ಕಳವನ್ನು ಮಾಡಿದ್ದನು. ಶರ್ವಿಲಕನು ಅಪೇಕ್ಷಿಸಿದ ಆ ತರುಣಿಯು ವಸಂತಸೇನೆಯಲ್ಲಿ ಜೀತದ ಆಳಾಗಿದ್ದಳು. ಆ ಯಜಮಾನಿಯಾದ ವಸಂತಸೇನೆಗೆ ಸಾಕಷ್ಟು ಧನವನ್ನು ಕೊಟ್ಟರೆ ಅವಳು ಶರ್ವಿಲಕನಿಗೆ ಅವನ ನಲ್ಲೆಯನ್ನು ಕೊಂಡೊಯ್ಯಲು ಒಪ್ಪಿದ್ದಳು. ಶರ್ವಿಲಕನು ತನ್ನ ನಚ್ಚಿನ ಮದನಿಕೆಗೆ ತಾನು ತಂದ ಆ ಅಮೌಲಿಕ ಆಭರಣಗಳನ್ನು ಒಳ್ಳೇ ಪ್ರೀತಿಯಿಂದ ಒಯ್ದುಕೊಟ್ಟನು. ಆಗ ಮದನಿಕೆಗೆ ಸೋಜಿಗವೆನಿಸಿತು. ಏಕೆಂದರೆ ಆ ಅಲಂಕಾರಗಳು ವಸಂತಸೇನೆಯವು ಎಂಬುದನ್ನು ಅವಳು ಚೆನ್ನಾಗಿ ಅರಿತಿದ್ದಳು. ಆದುದರಿಂದ ಅವುಗಳನ್ನು ತಾನು ಇಟ್ಟುಕೊಳ್ಳುವದು ಅನ್ಯಾಯ ವೆಂದು ಅನಿಸಿತು. ವಸಂತಸೇನೆಯು ತನ್ನ ಸದ್ಗುಣಗಳಿಂದ ಜನರಿಗೆ ಅಷ್ಟು ಅಚ್ಚು ಮೆಚ್ಚಿನವಳು ಆಗಿದ್ದಳು.

ಚಾರುದತ್ತನ ಮಗನಾದ ರೋಹಸೇನ ಎಂಬುವನು ತನಗೆ ಆಟಕ್ಕಾಗಿ ಬಂಗಾರದ ಬಂಡಿಯೊಂದು ಬೇಕೆಂದು ಹಟ ಪ್ರಾರಂಭಿಸಿ ಅಳತೊಡಗಿದ್ದನು. ದಾಯಿಯು ಆತನಿಗೆ ಒಂದು ಮಣ್ಣಿನ ಬಂಡಿಯನ್ನು ( ಮೃದ್+ಶಕಟಿಕಾ=ಮೃಚ್ಛ-ಕಟಿಕ ) ಮಾಡಿಕೊಟ್ಟಳು. ಆದರೂ ಮಗು ಅಳುವನ್ನು ನಿಲ್ಲಿಸಲಿಲ್ಲ. ವಸಂತ ಸೇನೆಗೆ ಇದು ಗೊತ್ತಾದೊಡನೆ ಚಾರುದತ್ತನಿಗೆ ಈಗ ಬಂದ ಬಡತನವನ್ನು ನೆನೆದು ಆತನ ಮಗನಿಗಾಗಿ ತಾನೇ ಒಂದು ಬಂಗಾರದ ಬಂಡಿಯನ್ನು ಮಾಡಿಸಿ ಕೊಡುವುದಾಗಿ ನಿರ್ಧರಿಸಿದಳು. ಸಂಸ್ಕೃತ "ಮೃಚ್ಛಕಟಿಕ" ನಾಟಕದೊಳಗಿನ ಕಥಾಮುಖವಿದು.

(ಒಬ್ಬ ಭಿಕ್ಷು ಪ್ರವೇಶಿಸುವನು).

**ಭಿಕ್ಷು:**— ಈ ಪ್ರಪಂಚವೆಲ್ಲ ಅಜ್ಞಾನಾಂಧಕಾರದಲ್ಲಿ ತೊಳಲುತ್ತಿದೆ. ನಾನು ಈ ತಿಳಿಗೇಡಿಗಳ ದಾರಿಯನ್ನು ಬಿಟ್ಟು ವಿರಕ್ತನಾಗಿ ಹೇಗೆ ಆತ್ಮಾನಂದದಲ್ಲಿ ತಲ್ಲೀನ ನಾಗಿದ್ದೇನೆ! ಆ ಸಂಸಾರವೂ ಬೇಡ, ಅದರ ತೊಳಲಾಟವೂ ಬೇಡ. ಹಾ, ಈಗ ಈ ಉದ್ಯಾನದಲ್ಲಿ ಹೋಗಿ ನನ್ನ ಕಾವೀ ಬಟ್ಟೆಯನ್ನಷ್ಟು ಒಗೆಯಬೇಕು.

( ಶಕಾರನೂ ಅವನ ಸಂಗಡಿಗ ಗೆಳೆಯನೂ ಬರುವರು )

**ಶಕಾರ:**— ಎಲಾ ದುಷ್ಟಾ, ಸ್ವಲ್ಪ ತಡೆ, ಅನಾಯಾಸವಾಗಿ ನನ್ನ ಕೈಗೆ ಸಿಕ್ಕಿರುವಿ. ಗಜ್ಜರಿಯಂತೆ ನಿನ್ನನ್ನು ಕತ್ತರಿಸಿಬಿಡುತ್ತೇನೆ. ಹೀಗೆ ನಿನ್ನ ಕತ್ತು ಹಿಸುಕುತ್ತೇನೆ. ( ಎಂದು ಅವನ ಕತ್ತಿಗೆ ಕೈ ಇಡುವನು ).

**ಸಂಗಡಿಗ:**— ಅಯ್ಯೋ ಪಾಪ, ಸಂಸಾರಕ್ಕೆ ಬೇಸತ್ತು ಕಾವೀ ಬಟ್ಟೆ ಯನ್ನುಟ್ಟು ಪ್ರಪಂಚದಿಂದ ಪಾರಾಗಬೇಕೆಂಬುವವನನ್ನು ಹೊಡೆಯಬೇಕೆ ? ಬಿಡಯ್ಯಾ ಅವನನ್ನು ! (ಶಕಾರನು ಬಿಡುವನು).

**ಭಿಕ್ಷು:**— ಹೇ ಸಾಧಕನೇ, ನನ್ನ ಮೇಲೆ ಕೃಪೆಯಿರಲಿ.

**ಶಕಾರ:**—ಗೆಳೆಯಾ, ಅಕೋ ನೋಡು ! ಶರಣನು ನನ್ನನ್ನು ನಿಂದಿಸುತ್ತಿದ್ದಾನೆ.

**ಸಂಗಡಿಗ:**— ಏನೆಂದು ನಿಂದಿಸಿದನು?

**ಶ:**— ನನಗೆ ಸಾಧಕನೆನ್ನುತ್ತಾನೆ. ನಾನೇನು ಕೀಳನೆಂದು ಅವನಿಗೆ ತೋರಿತೆ ?

**ಸಂ:**— ಛೀ, ಅದು ನಿನ್ನ ಹೊಗಳಿಕೆ, ತೆಗಳಿಕೆಯಲ್ಲ.

**ಶ:**— ಹಾ, ಹಾಗಾದರೆ ಅಡ್ಡಿಯಿಲ್ಲ. ಎಲೈ ಶ್ರವಣಕನೇ, ಕೇಳು—

**ಭಿಕ್ಷು:**— ನೀನು ಧನ್ಯನು, ನೀನು ಪುಣ್ಯವಂತನು.

**ಶ:**— ಅಕೋ ಮಿತ್ರಾ, ಈ ಶರಣನು ನನಗೆ ನೀನು ಧನ್ಯ, ನೀನು ಪುಣ್ಯವಂತ ಎನ್ನುತ್ತಿದ್ದಾನೆ ! ನಾನೇನು ಶ್ರಾವಕನೋ ಅಥವಾ ಜಾಡನೋ ಏನೆಂದು ಆತನ ಭಾವನೆ ?

**ಸಂ:**— ಗೆಳೆಯಾ, ಇದು ಕೂಡ ನಿನ್ನ ಸ್ತುತಿಯೇ, ನಿಂದೆಯಲ್ಲ.

**ಶ:**— ನಿಜವಾಗಿಯೂ ಹೇಳುವೆಯಲ್ಲವೆ ? ನಿಂದ್ಯವಲ್ಲವಷ್ಟೇ ? ಬಾಯಾರಿ ಹೊಗಳಲಿ. ನಾನು ಆ ಎಲ್ಲ ಹೊಗಳಿಕೆಗೆ ತಕ್ಕವನೇ ಇದ್ದೇನೆ. ಆದರೆ ಈ ಬಡಪಾಯಿ ಇಲ್ಲಿ ಏತಕ್ಕೆ ಬಂದಿದ್ದಾನೆ ?

**ಭಿ:**— ನಾನು ನನ್ನ ಈ ಕಾಷಾಯ ವಸ್ತ್ರವನ್ನು ಒಗೆಯಲು ಬಂದಿದ್ದೇನೆ.

**ಶ:**— ಎಲಾ ನೀಚಾ! ಈ ಎಲ್ಲ ಉದ್ಯಾನಗಳಲ್ಲಿ ಶ್ರೇಷ್ಠವಾದ ಪುಷ್ಪಕರಂಡಕ ವೆಂಬ ಹೆಸರಿನ ಈ ಹಳೆಯ ತೋಟವನ್ನು ನನ್ನ ಮಾವನು ನನಗಾಗಿ ಕೊಟ್ಟಿದ್ದಾನೆ.

ಇಲ್ಲಿ ಯಾರಿಗೂ ಬರುವ ಧೈರ್ಯವಿಲ್ಲ. ಎಲ್ಲಿಯ ಜಲಾಶಯದಲ್ಲಿ ನರಿನಾಯಿಗಳು ಯಾವ ಅಳುಕಿಲ್ಲದೇ ನೀರು ಕುಡಿಯುವವೋ ಎಲ್ಲಿ ಸಾಧು ಸಜ್ಜನರು ಒಂದು ಗುಟುಕು ಆಚಮನವನ್ನು ಮಾಡರೋ, ಅಲ್ಲಿ ನೀನು ಕೆಂಧೂಳಿಯಿಂದ ಮಾಸಿದ ಈ ಹೊಲಸು ರಗಟೆಯನ್ನು ಒಗೆಯಬಂದಿರುವೆಯಾ ? ನಿನಗೆ ಚೆನ್ನಾಗಿ ಥಳಿಸಿ ಬುದ್ಧಿ ಕಲಿಸಲೇಬೇಕು.

ಸಂ:— ಗೆಳೆಯಾ, ಈತನು ಹೊಸ ಸಂನ್ಯಾಸಿ ಎಂದು ತೋರುತ್ತದೆ. ಪಳಗಿದವನಲ್ಲ.

ಭಿಕ್ಷು:— ಸಾಧಕನೇ ನಿನ್ನ ಊಹೆ ಸರಿಯಾಗಿದೆ. ನಾನು ವಿರಕ್ತನಾಗಿ ಬಹಳ ದಿನಗಳು ಗತಿಸಲಿಲ್ಲ.

ಶ:— ಎಲಾ ಕಳ್ಳಾ, ನೀನು ಹುಟ್ಟುವಾಗಲೇ ಸಂನ್ಯಾಸಿಯಾಗಿಯೇಕೆ ಜನ್ಮ ತಾಳಲಿಲ್ಲ? ಮೂರ್ಖಾ! (ಎಂದು ಹೊಡೆಯುತ್ತಾನೆ.)

ಭಿಕ್ಷು:— (ಏಟುಗಳನ್ನು ಸಹಿಸುತ್ತ) ನಮೋ ಬುಧ್ಧಾಯ! ನಮೋ ಬುದ್ಧಾಯ !

ಸಂ:— ಈ ಬಡಪಾಯಿಗೆ ಹೊಡೆಯುವದರಿಂದ ನಿನಗೆ ಏನು ಲಾಭ?

ಶ:— ಎಲಾ ಶರಣಾ, ನಾನು ವಿಚಾರ ಪೂರ್ಣಮಾಡುವ ವರೆಗೂ ನಿಂತುಕೋ ಇಲ್ಲಿ.

ಸಂ:— ಯಾರೊಡನೆ ವಿಚಾರಿಸುವೆ?

ಶ:— ನನ್ನೊಡನೇ.

ಸಂ:— ಆಗಲಿ ಹಾಗಾದರೆ. (ಸ್ವಗತ) ಸಂನ್ಯಾಸಿಯು ಈ ಸಂಧಿಯನ್ನು ಸಾಧಿಸಿ ಏಕೆ ಓಡಿಹೋಗಲೊಲ್ಲನು ? ಹೆಡ್ಡನೆಂದು ತೋರುತ್ತದೆ.

ಶ:—(ತನ್ನಷ್ಟಕ್ಕೆ) ಎಲೆ ನನ್ನ ಜೀವವೇ, ಈ ಸಂನ್ಯಾಸಿಯು ಇಲ್ಲಿಂದ ಹೋಗಬೇಕೇ ಅಥವಾ ಇರಬೇಕೆ? ಇಲ್ಲವೇ ಹೋಗಕೂಡದೊ ಮತ್ತು ಇರಲೂ ಕೂಡದೊ? (ಗೆಳೆಯನಿಗೆ) ಹಾ ನನ್ನ ನಿರ್ಣಯವಾಯಿತು ! ನನ್ನ ಒಳದನಿಯು ನನಗೆ ಮೆಲುದನಿಯಲ್ಲಿ ಹೇಳುತ್ತಲಿದೆ. ಇವನು ಹೋಗಬಾರದು, ಇರಲಿಕ್ಕೂ ಆಗದು. ಇವನು ಉಸಿರು ಬಿಡಕೂಡದು, ಉಸಿರು ಎಳೆಯಕೂಡದು. ಇವನು ಬೇಗನೆ ಇಲ್ಲಿಯೇ ಸಾಯಬೇಕು.

ಭಿ:— ನಮೋ ಬುದ್ಧಾಯ ! ನಿಮಗೆ ಶರಣು ಬಂದಿದ್ದೇನೆ.

ಸಂ:— ಹೋಗಲಿ ಬಿಡಯ್ಯಾ.

ಶ:— ಆಗಲಿ, ಹೋಗುವದಾದರೆ ಇವನೇನಾದರೂ ಕುರುಹುದೋರಿ ಹೋಗಬೇಕು.

ಸಂ:— ಎಂಥ ಕುರುಹು.

ಶ:— ಈತನು ನೀರಲ್ಲಿ ಕೆಸರು ಚೆಲ್ಲಬೇಕು; ಆದರೆ ನೀರು ಕಲಕಾಗ ಕೂಡದು. ಇದು ಆತನಿಗೆ ಕಠಿಣವೆನಿಸುತ್ತಿದ್ದರೆ ಬೇರೊಂದು ಪವಾಡವನ್ನು ಮಾಡಬೇಕು. ಈ ನೀರಿನ ರಾಶಿಯನ್ನು ಮಾಡಿ ಅದರ ಮೇಲೆ ಅರಲಿನ ಕಳಸವನ್ನಿಡಬೇಕು; ಬಳಿಕ ಇಲ್ಲಿಂದ ಆತನು ತೊಲಗಬೇಕು. ( ಭಿಕ್ಷುವು ಮನಸ್ಸಿನಲ್ಲಿಯೇ ಕಸವಿಸಿಗೊಂಡು ಸಿಟ್ಟಿನಲ್ಲಿ ಹೊರಬೀಳುತ್ತಾನೆ ).

ಶ:— ಅಕೋ ಗೆಳೆಯಾ ಅವನು ಮತ್ತೆ—

ಸಂ:—ಹೋಗಲಿ ಬಿಡೋ, ಅಲ್ಲಿ ನೋಡು, ಆ ವೃಕ್ಷಕ್ಕೆ ಲತಾರೂಪಿಯಾದ ಲಲನೆಯರು ಸಂಗಡಿಸಿಕೊಂಡು ಹಿಗ್ಗಿನಿಂದ ತಲೆದೂಗುತ್ತಲಿದ್ದಾರೆ.

ಶ:— ಹಾ ನಿಜ, ಅಕೋ ಅಲ್ಲಿ ಆ ಮಂಗಗಳು ಗಿಡಗಳಿಗೆ ಹಲಸಿನಂತೆ ಹೇಗೆ ತೂಗಬಿದ್ದಿವೆ.

ಸಂ:— ಗೆಳೆಯಾ ಅಂದವಾದ ಈ ಹಾಸುಗಲ್ಲ ಮೇಲೆ ಕುಳಿತುಕೋ.

ಶ:—ಗೆಳೆಯಾ, ಸ್ಥಾವರಕನಿಗೆ ಬೇಗನೆ ಬಂದುಬಿಡು ಎಂದು ಹೇಳಿದರೂ ಆತನು ಇನ್ನೂ ಬಾರದಿರುವ ಕಾರಣವೇನಿರಬಹುದು ? ನನ್ನ ಹೊಟ್ಟೆಯಲ್ಲಿ ಪಾತ್ರ ವಾಡುತ್ತಿದೆ. ನನ್ನ ಕಾಲು ಸೋತಿವೆ. ನಡೆಯಲಾರೆ. ಆ ಸೂರ್ಯನನ್ನು ನೋಡು, ಕ್ರೋಧದಿಂದ ಕೆಂಡದಂತಾದ ಒಂದು ಕೆಂಪು ಮಂಗನ ಮುಸಡೆಯು ಹಾಗೆ ಕಾಣುತ್ತಲಿದ್ದಾನೆ. ನನ್ನಿಂದ ಈ ನೋಟವನ್ನು ನೋಡಲಿಕ್ಕಾಗುವುದಿಲ್ಲ. ಹಾ, ಆತನು ಬರುವ ವರೆಗೆ ನಾನು ಒಂದು ಸೊಗಸಾದ ಹಾಡನ್ನು ಹೇಳುವೆ. ಹಾಡಲೇ ? ( ಅಂತೂ ಒಂದು ಹಾಡು ಹೇಳಿ ) ಗೆಳೆಯಾ, ನನ್ನ ಹಾಡು ಹೇಗಿತ್ತು?

ಸಂ:— ಏನು ಹೇಳಬೇಕು ಸ್ವಾಮಿ ? ತಾವು ಪ್ರತಿಗಂಧರ್ವರೇ ಸೈ !

ಶ:— ಎಲಾ, ನಾನು ಗಂಧರ್ವನೇ? ಛಿಃ ನರಸೇನಾ!

ಹಿಂಗು ಜೀರಕ ಭದ್ರಮುಸ್ತಾ—ಸಗುಣ ಸುಂಠಿ ಬಚಸಹಿತಾ.
ಇವೆಲ್ಲ ಮೆಲ್ದಿ ಸುಗಂಧಯುಕ್ತಾ—ಗಂಧರ್ವ ನಾನಲ್ಲವೆ ?

ಕೇವಲ ಇಷ್ಟರಿಂದಲೇ ಹಾಡಲು ಬರುವದಿಲ್ಲ ಮತ್ತೆ. ಇನ್ನೂ ನಾನು ಮಾಡಿದ ಪರಿಶ್ರಮವನ್ನು ಹೇಳುತ್ತೇನೆ ಕೇಳು.

ಇಂಗು ಮೆಳಸಿನ ಕಂಪಿನಲ್ಲಿ—ಅದೇ ಕಾಯಿಸಿದ ತುಪ್ಪ ಬೆರಿಸಿ.
ಸವಿದೆ ನಾನು ಕೋಗಿಲೆಯ ಮಾಂಸವಾ—ಕುಕಿಲ್ವ ಕಂಠನು ನಾನಲ್ಲವೇ.

ಗೆಳೆಯಾ, ಬಂಡಿ ಬಂದಂತೆ ತೋರುತ್ತದೆ.

ಸಂ:— ಅದು ಹೇಗೆ ?

ಶ: — ಅಲ್ಲಿ ಕೇಳು, ಮುದಿಹಂದಿಯಂತೆ ದನಿಮಾಡುವ ಗಾಲಿಗಳ ಘರ್ ಘರ್ ಎಂಬ ಸದ್ದನ್ನು.

( ಚೇಟ ಮತ್ತು ವಸಂತಸೇನೆಯುರು ಬರುತ್ತಾರೆ. ವಸಂತಸೇನೆ ಗಾಡಿಯಲ್ಲಿಯೇ ಕುಳಿತಿದ್ದಾಳೆ. )

**ಚೇಟಿ:**— ಬಂದಿದ್ದೇನೆ, ಮಹಾಸ್ವಾಮಿ.

**ಶ:**— ಬಂಡಿ ಬಂತೇ?

**ಚೇ:**— ಬಂದಿದೆ ಬುದ್ಧೀ.

**ಶ:**— ಎತ್ತು ಬಂದುವೆ?

**ಚೇ:**— ಬಂದಿವೆ ಒಡೆಯಾ.

**ಶ:**— ನೀನೂ ಬಂದಿರುವೆಯಾ ?

**ಚೇ:**— ಸ್ವಾಮಿ, ತಮ್ಮ ಸಮ್ಮುಖದಲ್ಲಿ ನಿಂತಿದೆ ಈ ದೇಹ.

**ಶ:**— ಒಳ್ಳೇದು, ಹಾಗಾದರೆ ಬಂಡಿಯನ್ನು ಒಳಗೆ ತಾ.

**ಚೇ:**— ಯಾವ ದಾರಿಯಿಂದ ತರಲಿ?

**ಶ:**— ಆ ಬಿದ್ದಗೋಡೆಯ ಮೇಲಿಂದ.

**ಚೇ:**— ಆ ದಾರಿಯಿಂದ ತಂದರೆ ಬಂಡಿ ಮುರಿದೀತು, ಎತ್ತು ಸತ್ತಾವು, ನಾನೂ ಜೀವಕ್ಕೆ ಎರವಾದೇನು, ಮಹಾಸ್ವಾಮಿ.

**ಶ:**— ಆಗಲಿ. ಹಾಗಾದರೆ ನಾನು ಅರಸನ ಒಲುಮೆಯ ನಲ್ಮೆಯ ಸತಿಯ ತಮ್ಮನು; ನನಗೇನು ಕೊರತೆ? ಬಂಡಿ ಮುರಿದರೆ ಇನ್ನೊಂದು ತರುವೆ. ಎತ್ತು ಸತ್ತರೆ ಹೊಸವನ್ನು ಕೊಳ್ಳುವೆ. ನೀನು ಮಡಿದರೆ ಇನ್ನೊಬ್ಬನು ದೊರೆಯುವನು.

**ಚೇ:**— ಮಹಾಸ್ವಾಮಿ, ತಮ್ಮದೆಲ್ಲಾ ಸರಿಯಾಯ್ತು. ಆದರೆ ಈ ಒಡಪ್ರಾಣಿ ನಿಷ್ಕಾರಣವಾಗಿ ಜೀವಕ್ಕೆ ಎರವಾಗಬೇಕಾಗುವದಲ್ಲಾ!

**ಶ:**— ಯಾವದಕ್ಕೂ ಚಿಂತಿಸಬೇಡ. ಆ ಬಿದ್ದ ಗೋಡೆಯ ಮೇಲಿಂದಲೇ ಬಂಡಿಯನ್ನು ತರಲೇ ಬೇಕು. ಹೂ! ಇದು ನನ್ನ ಕಟ್ಟಪ್ಪಣೆ.

**ಚೇ:**— ಆ... ದ....ರಿ. ಬುದ್ಧೀ—

**ಶ:**— ಥೂ! ಪ್ರತಿ ಮಾತನಾಡಬೇಡ ಹೊರಡು.

**ಚೇ:**—ಆಗಲಿ ಒಡೆಯಾ (ಅಂತೂ ಬಂಡಿಯನ್ನು ತರುವನು) ಸ್ವಾಮಿ, ಇದೋ ಬಂಡಿ ಬಂತು.

**ಶ:**— ಎಲಾ ಪೋಕರಿ, ನೀನೂ ಸಾಯಲಿಲ್ಲಾ ಎತ್ತೂ ಹಾಳಾಗಲಿಲ್ಲಾ!

**ಚೇ:**— ತಮ್ಮ ಮಹಾಪಾದಗಳ ಪುಣ್ಯವೇ ಅಂತಹದು.

**ಶ:**— ಗೆಳೆಯಾ, ನಡೆ, ನಾವು ಬಂಡಿಯಲ್ಲಿ ಕುಳಿತುಕೊಳ್ಳುವಾ. ನೀನು ನನ್ನಗುರು, ನನ್ನ ಉಪಾಧ್ಯಾಯ ನನ್ನ ಗೆಳೆಯ; ಆದುದರಿಂದ ಬಂಡಿಯಲ್ಲಿ ಮೊದಲು ಕೂತುಕೊಳ್ಳುವ ಹಕ್ಕು ನಿನ್ನದು.

**ಸಂ:**— ಆಗಲಿ, ನಾನೇ ಕುಳಿತುಕೊಳ್ಳುವೆ. (ಬಂಡಿಯಲ್ಲಿ ಕೂಡ್ರಹೋಗುವನು)

**ಶ:**— ಎಲಾ, ತಡೆ ತಡೆ. ಈ ಬಂಡಿ ನಿನ್ನದೆಂದು ನೀನು ಮೊದಲು ಕೂಡುವವನೋ. ಹೋ! ಈ ಬಂಡಿ ನನ್ನದು. ನಾನು ಇದರ ಒಡೆಯನು. ನಾನೇ ಇದರಲ್ಲಿ ಮೊದಲು ಕೂಡುವವನು. ಸರಿ ಬದಿಗೆ.

ಸಂ:— ತಾವೇ ನನಗೆ ಕೂಡಲು ಅಪ್ಪಣೆ ಕೊಡಿಸಿದಿರಿ. ಈಗ ತಾವೇ ಬೇಡವೆನ್ನುವಿರಿ !

ಶ:—ನಾನು ಹಾಗೆ ಹೇಳಿದರೇನಾಯಿತು? 'ಮಹಾಸ್ವಾಮಿ, ತಾವೇ ಮೊದಲು ಕುಳಿತುಕೊಳ್ಳಬೇಕು' ಎಂದು ನೀನು ನನ್ನನ್ನು ಪ್ರಾರ್ಥಿಸಬೇಡವೇ?

ಸಂ:— ಆಗಲಿ. ತಾವೇ ಮೊದಲು ಕುಳಿತುಕೊಳ್ಳುವದಾಗಲಿ !

ಶ:— ಎಲಾ, ಬಂಡಿಯನ್ನು ತಿರುಗಿಸೋ.

ಚೇ:— (ಬಂಡಿಯನ್ನು ತಿರುಗಿಸಿ ನಿಲ್ಲಿಸಿ) ಏರಬೇಕು ಸ್ವಾಮಿ.

ಶ:— (ಬಂಡಿಯಲ್ಲಿ ಇಣಿಕಿ ನೋಡಿ, ಹೆದರಿಕೊಂಡಂತೆ ಗೆಳೆಯನ ಕೊರಳಿಗೆ ಅಪ್ಪಿ-ಕೊಳ್ಳುವನು) ಅಯ್ಯೋ ಸತ್ತೆ ಸತ್ತೆ! ಈ ಬಂಡಿಯಲ್ಲಿ ಯಾರೋ ರಾಕ್ಷಸಿ ಕುಳಿತಂತಿದೆ; ಅಥವಾ ಕಳ್ಳನಿರಬಹುದು. ರಾಕ್ಷಸಿಯಾಗಿದ್ದರೆ ನಮ್ಮನ್ನು ಎತ್ತಿಕೊಂಡು ಒಯ್ಯುವಳು ಮತ್ತು ಕಳ್ಳನಾಗಿದ್ದರೆ ನಮ್ಮನ್ನು ತಿಂದುಬಿಟ್ಟಾನು. ಇನ್ನೆಂತು ಮಾಡುವದು?

ಸಂ:— ಗೆಳೆಯಾ ಹೆದರಬೇಡ. ಮಧ್ಯಾಹ್ನದ ಬಿಸಿಲಿನಿಂದ ನಿನ್ನ ಕಣ್ಣು ಕುಕ್ಕಿ ಒಳಗೆ ಸರಿಯಾಗಿ ಕಾಣುತ್ತಿರಲಿಕ್ಕಿಲ್ಲ. ಒಳಗೆ ಚೇಟನ ನೆರಳು ಇದ್ದರೂ ಇರಬಹುದು.

ಶ:— ಮಗು ಚೇಟಾ, ಬದುಕಿದ್ದೀಯಷ್ಟೇ ಅಪ್ಪಾ!

ಚೇ:— ಅಹುದು ಸ್ವಾಮೀ.

ಶ:—ಗೆಳೆಯಾ, ಒಳಗೆ ಯಾವದೋ ಹೆಣ್ಣು ಇದ್ದಂತಿದೆ, ನೋಡೋ ಒಮ್ಮೆ.

ಸಂ:— ನಡೆ ನೋಡೋಣ.

ವಸಂತಸೇನೆ— (ಬೆಗಡುಗೊಂಡು) ಅಯ್ಯೋ ದೈವವೇ, ನನಗೆ ಯಾರನ್ನು ಕಂಡರೇ ಆಗದೋ, ಆ ರಾಜಶಾಲಕನೇ ಇಲ್ಲಿ ಇರಬೇಕೆ ? ಇನ್ನು ನನ್ನ ಹರಣವು ಹಾರಿಹೋಗುವದೋ ಏನೋ ನಾನರಿಯೆ. ನಾನು ಇಲ್ಲಿ ಬಂದದ್ದು ನಿಷ್ಫಲವಾಯಿತೆಂದು ತೋರುತ್ತದೆ.

ಸಂ:— (ವಸಂತಸೇನೆಯನ್ನು ಕಂಡು) (ಸ್ವಗತ) ಅಲಲಲಾ ! ಘಾತ-ವಾಯಿತು ! ಘಾತವಾಯಿತು ! ಹುಲಿಯ ಕೈಗೆ ಸಿಕ್ಕ ಹುಲ್ಲೆಯ ಹಾಗೆ ದುರ್ದೈವದಿಂದ ಹರಿಣಾಕ್ಷಿ ವಸಂತಸೇನೆಯು ಸಾವಿನ ಧವಡೆಯಲ್ಲಿ ಸಿಕ್ಕಂತಾಯಿತು !

## ಅಭ್ಯಸನಗಳು

ಪ್ರಶ್ನೆಗಳು :—

(೧) ಭಿಕ್ಷುವಿನ ಸ್ತುತಿಪರ ಮಾತುಗಳನ್ನು ಕೇಳಿ ಶಕಾರನು ಕೋಪಗೊಳ್ಳುವುದೇಕೆ ?

(೨) ಶಕಾರನ ಹುಚ್ಚಿನಲ್ಲಿಯೇ ಜಾಣತನವೂ ಮಿಶ್ರವಾಗಿದೆ ಎಂಬುದನ್ನು ಬೇರೆ ಬೇರೆ ಉದಾಹರಣೆಗಳಿಂದ ತೋರಿಸಿರಿ.

(೩) ಶಕಾರನು ತನ್ನ ಗೆಳೆಯನಿಗೆ ಮೊದಲು ಬಂಡಿಯನ್ನೇರಲು ಹೇಳುವ ಉದ್ದೇಶ ವೇನು ?

(೪) ಶಕಾರನು ಭಿಕ್ಷುವಿನ ಸಾಧುತ್ವವನ್ನು ಪರೀಕ್ಷಿಸಲು ಮಾಷ ಹೇಳಿದ ಪವಾಡ ಗಳಾವವು ?

ಭಾಷಾಭ್ಯಾಸ :—

(೧) ' ಎಲ್ಲಿಯ ಜಲಾಶಯದಲ್ಲಿ .... ಒಗೆಯಬಂದಿರುವೆಯಾ?'
ಈ ಮಾತುಗಳನ್ನು ಸುಸಂಬದ್ಧವಾಗುವಂತೆ ಬರೆಯಿರಿ.
' ರಾಕ್ಷಸಿಯಾಗಿದ್ದರೆ ನಮ್ಮನ್ನು ಎತ್ತಿಕೊಂಡು ಒಯ್ಯುವಳು ಮತ್ತು ಕಳ್ಳನಾಗಿದ್ದರೆ ನಮ್ಮನ್ನು ತಿಂದುಬಿಟ್ಟಾನು ' ಈ ವಾಕ್ಯವನ್ನು ಸರಿಪಡಿಸಿ ಬರೆಯಿರಿ.
' ನೀನು ಈ ನಾಡಿನಿಂದ ತೊಲಗು ' ' ನೀನು ಈ ನಾಡಿನಿಂದ ತೊಳಗು '
ಈ ವಾಕ್ಯಗಳಲ್ಲಿರುವ ಅರ್ಥಭೇದವನ್ನು ಹೇಳಿರಿ.

(೨) [೧] ಅವನು ಕೊಳಲನ್ನು (ಬಾರಿಸಿದನು, ನುಡಿಸಿದನು)
[೨] ಗಾಂಧೀಜಿಯವರು ದೇಶಕ್ಕಾಗಿ ತಮ್ಮ ದೇಹವನ್ನು (ಮೀಸಲಾಗಿರಿಸಿದರು; ಮುಡುಪಿಟ್ಟರು)
[೩] ಗವಳಿಗನು ಹಸುವನ್ನು ಹಾಲನ್ನು (ಕರೆದನು, ಹಿಂಡಿದನು)
ಕಂಸಗಳಲ್ಲಿ ಕೊಟ್ಟ ಶಬ್ದಗಳ ಯೋಗ್ಯ ರೂಪವನ್ನು ಉಪಯೋಗಿಸಿ ಮೇಲಿನ ವಾಕ್ಯಗಳನ್ನು ಬರೆಯಿರಿ.

(೩) ' ಸರ್ವಾರ್ಥಸಿದ್ಧಿ ಕವಚ ' ಮತ್ತು ಈ ಪಾಠದಲ್ಲಿ ಬಂದಿರುವ ವಿನೋದದಲ್ಲಿ ಇರುವ ಭೇದವನ್ನು ಅರಿತುಕೊಳ್ಳಿರಿ.

ಶಬ್ದವಿಚಾರ :—

(೧) ಪ್ರಮಾಣ — ಹವಣ, ಪ್ರಾಣ — ಹರಣ, ಪಕ್ಷಿ — ಪಕ್ಕಿ, ಹಕ್ಕಿ, ಪಶು — ಹಸು. ಹವಣ, ಹರಣ, ಹಕ್ಕಿ, ಹಸು ಮೊದಲಾದವುಗಳು ಸಂಸ್ಕೃತ ಶಬ್ದದಿಂದ ಬಂದ ತದ್ಭವ ಶಬ್ದಗಳು. ಪಿಷ್ಟ, ಪಾದುಕಾ, ಪಾಗ ಇವುಗಳ ತದ್ಭವ ರೂಪ ಗಳನ್ನು ಹೇಳಿರಿ.

(೨) ಗೆಳೆಯ — ಗೆಣೆಯ ಇವುಗಳಲ್ಲಿರುವ ಅರ್ಥಭೇದವನ್ನು ಹೇಳಿರಿ.
ವಿರಕ್ತ, ಶ್ರಮಣಕ, ಭಿಕ್ಷು ಇವುಗಳ ಅರ್ಥವನ್ನು ಹೇಳಿರಿ.

(೩) ಹೊಗಳಿಕೆ, ತೆಗಳಿಕೆ — ಈ ಬಗೆಯ ಐದು ನಾಮಗಳನ್ನು ಬರೆಯಿರಿ.

(೪) ಹುಲಿಯ ಕೈಗೆ ಸಿಕ್ಕ ಹುಲ್ಲೆಯ ಹಾಗೆ
ಬೆಕ್ಕಿನ ಕೈಗೆ ಸಿಕ್ಕ ....
ಗರುಡನ ಕೈಗೆ ಸಿಕ್ಕ ....
ಗಿಡಗನ ಕೈಗೆ ಸಿಕ್ಕ ....

ವಾಕ್‌ಶಿಕ್ಷಣ :—

(೧) ಪ್ರಶಿದ್ಧ, ವಿಸಿಷ್ಟ, ರಾಕ್ಷಶಿ — ಇವುಗಳ ಶುದ್ಧ ರೂಪಗಳನ್ನು ಬರೆಯಿರಿ.

(೨) ಈ ಪಾಠದೊಳಗಿನ ನಾಟಕದ ಭಾಗವನ್ನು ಅಭಿನಯಿಸಿರಿ.

ಚರ್ಚೆ :—

' ಪವಾಡ ಶಕ್ತಿ ಇಲ್ಲದವರು ಸಾಧುಗಳಲ್ಲ ' ಇದನ್ನು ಚರ್ಚಿಸಿರಿ.

ಬರೆಹ :—

(೧) ಕಳ್ಳಪೇಟೆಯಿಂದ ಸಿರಿವಂತನಾಗಬೇಕೆಂಬವನ ಕನಸಿನಲ್ಲಿಯ (ಅಸಂಬದ್ಧ) ಬಡಬಡಿಕೆಯನ್ನು ಬರೆಯಿರಿ.

(೨) ಶಬ್ದಗಳ ಅರ್ಥವು ತಿಳಿಯದೆ ಅನರ್ಥವಾಗುವ ಕೆಲವು ಹಾಸ್ಯ ಚುಟುಕಿಗಳನ್ನು ಕೊಡಿರಿ.

ಉದಾ :— ಒಬ್ಬ ಸದ್ಗೃಹಸ್ಥನಿಗೆ ಬಹು ದಿನಗಳ ಮೇಲೆ ತನ್ನ ಗೆಳೆಯನ ಮಗನು ಭೆಟ್ಟಿಯಾದುದನ್ನು ನೋಡಿ —

ಸ :— ನೀನು ರಾಮಣ್ಣನ ಮಗ ಭೀಮು ಏನಪಾ? ಪ್ರಬುದ್ಧ ಆಗೀದಿ.

ಭೀಮು :— ಏನ್ರಿ, ಹಾಗೆಲ್ಲ ಪ್ರಬುದ್ಧಾ ಗಿಬುದ್ಧಾ ಅನ್ನಬ್ಯಾಡಿರಿ. ಮಾತಾಡೋದಿದ್ರೆ ಒಳ್ಳೆ ಮಾತಾಡರಿ! ಹಂ......

# ೬. ಸಾಹಿತ್ಯದ ಪುನರುಜ್ಜೀವನ.

[ವಕ್ತೃತ್ವದ ಒಂದು ಉತ್ಕೃಷ್ಟ ಮಾದರಿ. ಇದರಲ್ಲಿ ಹೊರಹೊಮ್ಮಿದ ಪೂಜ್ಯ ಬಿ.ಎಂ.ಶ್ರೀ ಅವರ ಕಂಠಶ್ರೀಯ ವೈಭವವು ಯಾರನ್ನೂ ಮುಗ್ಧಗೊಳಿಸುವಂತಹದಾಗಿದೆ. ಉದಾತ್ತ ವಿಚಾರ, ಕಠೋರ ಸತ್ಯವನ್ನೂ ನಯವಾಗಿ ಕಹಿ ಎನಿಸದಂತೆ ಹೇಳುವ ಜಾಣ್ಮೆ, ಶೈಲಿಯ ಬೆಡಗು ಮುಂತಾದ ಇದರೊಳಗಣ ಒಂದೊಂದು ಅಂಶವೂ ಅಭ್ಯಸನೀಯವಾಗಿದೆ.

ಶ್ರೀ ಅವರು ೧—೬—೧೯೨೮ ನೆಯ ದಿನ ಕಲ್ಬುರ್ಗಿಯಲ್ಲಿ ನಡೆದ ಕರ್ನಾಟಕ ಸಾಹಿತ್ಯ ಪರಿಷತ್ತಿನ ೧೪ನೆಯ ಸಮ್ಮೇಲನದಲ್ಲಿ ಮಾಡಿದ ಭಾಷಣದಿಂದ ಈ ಭಾಗವನ್ನು ಆಯ್ದು ಕೊಳ್ಳಲಾಗಿದೆ.]

ಮಹನೀಯರೆ, ನಮ್ಮ ಕನ್ನಡ ನಾಡು ಚಿಕ್ಕದಿರಬಹುದು; ನಮ್ಮ ಕನ್ನಡಿಗರು ಸ್ವಲ್ಪ ಜನವಿರಬಹುದು; ಚರಗವನ್ನು ಚಲ್ಲಿದಂತೆ ಚೆದರಿಹೋಗಿರಬಹುದು. ಆದರೆ ಕರ್ಣಾಟಕದ ಪೂರ್ವಚರಿತ್ರೆಯನ್ನೂ, ಪ್ರಕೃತ-ಸಾಹಸಗಳನ್ನೂ, ನೆನಸಿಕೊಂಡರೆ ನಮ್ಮ ಪುರೋಭಿವೃದ್ಧಿಯಲ್ಲಿ ಯಾವ ಸಂದೇಹಕ್ಕೂ ಕಾರಣವಿರುವುದಿಲ್ಲ. ಈ ಪುಣ್ಯ ಕ್ಷೇತ್ರದಲ್ಲಿ ಬೇರೂರಿ, ಆಕಾಶ ಹಬ್ಬಿರುವ ಎಲ್ಲಾ ಪ್ರದೇಶಗಳಿಂದಲೂ, ಗಾಳಿಯನ್ನೂ, ಬೆಳಕನ್ನೂ, ಆಹಾರವನ್ನೂ, ತೇಜಸ್ಸನ್ನೂ, ಹೀರಿಕೊಳ್ಳುವ ಉದಾರ ಹೃದಯವೊಂದನ್ನು ನಾವು ಭದ್ರವಾಗಿ ಕಾಪಾಡಿಕೊಂಡರೆ;— ಅವರನ್ನು ಅನುಕರಿಸುವುದು, ಇವರನ್ನು ಧಿಕ್ಕರಿಸುವುದು, ಒಬ್ಬರ ವೇಷವನ್ನು ತಾಳಿ ಕುಣಿಯುವುದು, ಮತ್ತೊಬ್ಬರ ಮಹಿಮೆಯನ್ನು ಸಹಿಸಲಾರದೆ ಕುಯುಕ್ತಿಗಳನ್ನು ಹೂಡಿ ಆಡಿಕೊಳ್ಳುವುದು; ಈ ಅಸಭ್ಯ ಚೇಷ್ಟೆಗಳನ್ನು, ಮನೋವಿಕಾರಗಳನ್ನು ಬಿಟ್ಟುಬಿಡುವುದಾದರೆ;— ಸ್ವಪ್ರಕೃತಿ, ಸ್ವಪ್ರತಿಭೆಯನ್ನು ವಿಚಾರಮಾಡಿ ಅರಿತು, ನಮ್ಮ ಆವರಣ, ನಮ್ಮ ಅನು

ಕೂಲತೆಯನ್ನು ಮನದಟ್ಟು ಮಾಡಿಕೊಂಡು, ನ್ಯೂನತೆಗಳನ್ನು ದೌರ್ಬಲ್ಯಗಳನ್ನು ಪರಿಶೋಧಿಸಿ ತ್ಯಜಿಸಿ, ಸತ್ಯಸಂಧರಾಗಿ, ಋಜುಮಾರ್ಗದಲ್ಲಿ ಕರ್ಮವೀರರಾಗಿ ಮುಂದಕ್ಕೆ ಹೆಜ್ಜೆಯನ್ನಿಡುವ ಪಕ್ಷದಲ್ಲಿ, ನಮ್ಮ ನಾಡಿನಲ್ಲಿಯೂ ಜನದೊಡನೆ ಸಾಹಿತ್ಯವೂ, ಸಾಹಿತ್ಯದೊಡನೆ ಜನವೂ, ಅಮೂಲ್ಯವಾಗುವುದು, ಅಮೋಘವಾಗುವುದು; ಸತ್ಯ ಪ್ರತಿಷ್ಠಿತವಾಗುವುದು. ಧರ್ಮ ಪ್ರತಿಷ್ಠಿತವಾಗುವುದು. ಆಗ್ಗೆ ಅದರ ಯಶಸ್ಸಿಗೆ ಮಿತಿಯೆಲ್ಲಿ? ಗುಣವಿದ್ದಲ್ಲಿ ಗಾತ್ರವನ್ನು ಯಾರು ನೋಡುವರು? ವೀರ್ಯವಿದ್ದಲ್ಲಿ ವೇಷಭಾಷೆಗಳನ್ನು ಯಾರು ಕೇಳುವರು? ಎತ್ತ ಕಡೆಯಿಂದ ಶಿಕ್ಷಣವನ್ನು ಪಡೆದರೂ, ಎತ್ತ ಕಡೆಯಿಂದ ಬೆಂಬಲವನ್ನು ಬಯಸಿದರೂ, ಜೇನುಹುಳು ಯಾವ ಹೂವಿನ ಮಕರಂದವನ್ನು ತಂದರೂ ಕೊನೆಗೆ ಎಲ್ಲಾ ತನ್ನ ಜೇನುತುಪ್ಪವನ್ನಾಗಿಯೇ ಹೇಗೆ ಮಾಡಿಕೊಳ್ಳುವುದೋ ಹಾಗೆ ಎಲ್ಲವೂ ಕನ್ನಡವೇ ಆಗಿಹೋದರೆ, ಆಗ ಹೊರಗಿನದು ಎಲ್ಲಿ ಬಂತು? ಮೊದಲಿನಿಂದಲೂ ನಮ್ಮ ಕರ್ಣಾಟಕದ ಚರಿತ್ರೆಯೇ ಹೀಗೆಂದು ತೋರುವುದು. ಆರ್ಯಾವರ್ತಕ್ಕೂ, ದಕ್ಷಿಣಪಥದ ಸಮುದ್ರದ ಗಡಿಗಳಿಗೂ ಓಡಾಡುವ ರಾಜಮಾರ್ಗವಾಗಿ, ಭಾಷೆ, ಸಂಸ್ಕೃತಿ, ಮತಗಳನ್ನು ತನ್ನಲ್ಲಿ ಯಥೇಷ್ಟವಾಗಿ ಚಲಿಸಿ, ಪಶ್ಚಿಮ ಸಮುದ್ರದ ಎದೆಯ ಮೇಲೆ ತನ್ನ ಹಡಗುಗಳನ್ನು ತಾಂಡವವಾಡಿಸುತ್ತ, ಪಾರಸಿಕರು ಬ್ಯಾಬಿಲೋನಿಯ ಮತ್ತು ಈಜಿಪ್ತ ದೇಶದ ಜನರು, ಗ್ರೀಕರು, ರೋಮರು ಮುಂತಾದ ನಾಗರಿಕ ಜನರೊಡನೆ ನಾಗರಿಕತೆಯಿಂದ ವ್ಯವಹರಿಸುತ್ತ; ಐಹಿಕ ವಿಷಯದಲ್ಲಾಗಲಿ, ಪಾರಲೌಕಿಕ ವಿಷಯದಲ್ಲಾಗಲಿ; ಭಾವನಾ ಪ್ರಪಂಚದಲ್ಲಾಗಲಿ, ಕಾರ್ಯಪ್ರಪಂಚದಲ್ಲಾಗಲಿ, ಯಾವುದರಲ್ಲೂ ಅತಿಗೆ ಹೋಗದೆ, ಒಂದೇ ಸಮನಾಗಿ, ಕ್ರಮವಾಗಿ, ಸಮ್ಮಿಳಿತವಾಗಿ ವೃದ್ಧಿಹೊಂದುತ್ತ ಅನೇಕ ಜನ—ಜಾತಿಗಳನ್ನು ತನ್ನ ಸೊಬಗಿನಿಂದ ಸೆಳೆಯುತ್ತ; ಅನೇಕ ರಾಜವಂಶಗಳನ್ನು ತನ್ನ ಪರಾಕ್ರಮದಿಂದ ಕೀರ್ತಿವಂತರನ್ನಾಗಿ ಮಾಡುತ್ತ; ಬೌದ್ಧ ಗುರುಗಳು, ಜೈನ ಯತಿಗಳು, ಶ್ರೀ ಶಂಕರಾಚಾರ್ಯರು, ಶ್ರೀ ರಾಮಾನುಜಾಚಾರ್ಯರು, ಶ್ರೀ ಮಧ್ವಾಚಾರ್ಯರು, ಶ್ರೀ ಬಸವೇಶ್ವರರು—ಇಂತಹ ಪ್ರಧಾನರಾದ ಧರ್ಮಸಂಸ್ಥಾಪನಾಚಾರ್ಯರುಗಳಿಗೆ ತನ್ನ ಸಮತಾಬುದ್ಧಿಯಿಂದ ಆಶ್ರಯವನ್ನು ನೀಡುತ್ತ; ಶಿಲ್ಪಕಲೆ, ಚಿತ್ರಕಲೆ, ಗಾನಕಲೆ, ಸಾಹಿತ್ಯಕಲೆ ಮುಂತಾದ ಆತ್ಮಸ್ಫುರಣೆಗಳಲ್ಲಿ ಸೌಂದರ್ಯಾನ್ವೇಷಣೆಯನ್ನು ಮಾಡುತ್ತ; ಕಾಲಕ್ಕೆ ತಕ್ಕಂತೆ ಪ್ರಜಾಸಮತೆಯನ್ನು ಪ್ರಜಾಹಿತವನ್ನು ಗುರಿಯಲ್ಲಿಟ್ಟುಕೊಂಡು, ಹೊಸಮತ, ಹೊಸಭಾಷೆ, ಹೊಸ ಕವನ, ಹೊಸಜೀವ, ಮುಂತಾದ ಹೊಸ ಆರಂಬಗಳನ್ನು ಉದಾರ-ಹೃದಯದಿಂದ ಸ್ವೀಕಾರಮಾಡುತ್ತ; ಒಡೆದು ಪಾಲಾಗಿ, ಪರಾಕ್ರಾಂತವಾಗಿ, ದುರ್ದೆಶೆಯಲ್ಲಿರುವಾಗ, ಈಗ ಕೂಡ, ಗರ್ವದಿಂದ ಕಾಲೋಚಿತವಾದ ಶ್ರೇಯೋಮಾರ್ಗವನ್ನು ಸೂಚಿಸುವ ನೂತನ ಶಿಕ್ಷಣವನ್ನು ಪಡೆದು, ಸ್ವಲ್ಪ ಕಾಲದಲ್ಲಿಯೇ ನವಚೈತನ್ಯ ಮೂಡಿ, ನಿದ್ದೆಯುಳಿದು, ಮೈಮುರಿದು ಮಲಗಿದ್ದೆದ್ದ ಸಿಂಹದಂತೆ ಮೇಲಕ್ಕೆ ನೆಗೆದು, ಕೇಸರವನ್ನು ಅಲುಗಿ, ಗರ್ಜಿಸುತ್ತಿರುವ ಈ ಕನ್ನಡ ನಾಡಿನ ಚರಿತ್ರೆ ಯಾವ ಕನ್ನಡಿಗನಿಗೆ ತಾನೆ ಆತ್ಮಗೌರವ

ವನ್ನೂ, ಆತ್ಮಶ್ರದ್ಧೆಯನ್ನೂ, ಹೊಸ ಹುರುಪನ್ನೂ, ಹೊಸ ಆರಂಬವನ್ನೂ ಹೊಂದಿಸಿಕೊಡಲಾರದು ?

ಆದುದರಿಂದ, ಕನ್ನಡಿಗರೇ, ಏಳಿ, ಎಚ್ಚರಗೊಳ್ಳಿ, ಆರಂಬ ಮಾಡಿ. ಪೂರ್ವ ಚರಿತ್ರೆಯ, ವಿಶ್ವವಿದ್ಯಾನಿಲಯದ, ಸಾಹಿತ್ಯ ಪರಿಷತ್ತಿನ, ನೂತನ ಸಾಹಿತ್ಯಕಾರರ, ಉತ್ಸಾಹಪೂರಿತರಾಗಿ ಸೇವಾತುರರಾದ ಯುವಕ ದೇಶವತ್ಸಲರ, ಸಾಹಿತ್ಯ ಸಂಸ್ಕೃತಿಗಳ ಕಟ್ಟಿನಿಂದ ಏಕಜನತೆಯನ್ನು ಬಯಸುತ್ತಿರುವ ಸಕಲ ಕರ್ಣಾಟಕರ, ಮಹತ್ಪ್ರೇರಣೆಯಿಂದ, ಮಹತ್ಪ್ರಯತ್ನದಿಂದ ಸಾಧ್ಯವಾಗದ ಕಾರ್ಯ ಯಾವುದು ? ಏಳಿ, ಎಚ್ಚರಗೊಳ್ಳಿ, ಆರಂಬ ಮಾಡಿ. ಹಿಂದೆ ಯುರೋಪಿನಲ್ಲಿ 'ರಿನೇಸಾನ್ಸ್' ಎಂಬ ಸಾಹಿತ್ಯದ ಪುನರ್ಜನ್ಮವುಂಟಾದಾಗ, ಒಬ್ಬ ಮಹಾಪಂಡಿತನು— "ನಾನು ಸತ್ತವರನ್ನು ಎಬ್ಬಿಸುವುದಕ್ಕೆ ಹೋಗುತ್ತೇನೆ". ಎಂದು ಘೋಷಿಸಿದನು. ನಾವು, ಕನ್ನಡಿಗರು, ಇಂದು ಸತ್ತವರನ್ನು ಎಬ್ಬಿಸುವುದೇ ಇಲ್ಲ; ಬದುಕಿರುವವರನ್ನೂ ಎಚ್ಚರಗೊಳಿಸುವುದಕ್ಕೆ ಹೊರಟಿರುವೆವು. ಹಿಂದಿನ ಸಾಹಿತ್ಯವನ್ನು ಪ್ರಯೋಜನಕಾರಿಯಾಗಿ ಮಾಡುವುದಕ್ಕೆ ಅಲ್ಲ; ಹೊಸ ಉತ್ತಮ ಸಾಹಿತ್ಯವೊಂದನ್ನು ಸೃಷ್ಟಿ ಮಾಡುವುದಕ್ಕೆ ಹೊರಟಿರುವೆವು. ಹೊರಟವರು, ವಿಲಾಸವತಿಯ ಕೊರಳಿನ ಪುಷ್ಪಮಾಲಿಕೆಯೇ ಅಲ್ಲ ಸಾಹಿತ್ಯ, ಮಾನವ ಜೀವನದ ಪುನರ್ನಿರ್ಮಾಣ ಕಾರ್ಯದಲ್ಲಿ ಬದ್ಧಕಂಕಣನಾಗಿರುವ ವೀರನ ಕೈಯಿನ ಖಡ್ಗವೂ ಅಹುದೆಂದು ತಿಳಿದಿರುವೆವು. **"ನಾನು ಬಂದು ಶಾಂತಿಯನ್ನು ತರಲಿಲ್ಲ, ಖಡ್ಗವನ್ನು ತಂದೆನು"** ಎಂದು ಕ್ರೂರ ಕಾರುಣ್ಯದಿಂದ ಸಾರಿದ ಒಬ್ಬ ಮಹಾತ್ಮ ಧರ್ಮಪುತ್ರನ ರಹಸ್ಯವನ್ನು ಹೃದಯದಲ್ಲಿಟ್ಟಿರುವೆವು.

ಕನ್ನಡಿಗರಾ, ಏಳಿ, ನಮ್ಮಲ್ಲಿ ಯಾವಯಾವ ಭಿನ್ನಾಭಿಪ್ರಾಯಗಳು, ಭಿನ್ನರುಚಿಗಳು ಇದ್ದರೂ, ನಮ್ಮನಮ್ಮಲ್ಲಿಯೇ ಅವು ಇರಲಿ. ಹಳೆಯ ಮಾರ್ಗವನ್ನು ಹಿಡಿಯುವವರು, ಹೊಸ ಮಾರ್ಗವನ್ನು ಹಿಡಿಯುವವರು; ಸಂಸ್ಕೃತಾಭಿಮಾನಿಗಳು, ಆಂಗ್ಲೇಯಾಭಿಮಾನಿಗಳು; ಭಾರತ-ಮಾತೆಯಲ್ಲಿ ವೀರಾವೇಶ ವಾತ್ಸಲ್ಯವುಳ್ಳವರು, ವಿಶ್ವದೃಷ್ಟಿಯ ಸರ್ವಸಮ ಮೈತ್ರಿಯ ಸಾಧುಸಂತರು—ಯಾರೇ ಆಗಲಿ ಒಬ್ಬರಂತೆ ಒಬ್ಬರಿರುವೆವೆಂಬ ಬೂಟಾಟಿಕೆಯ ನಿರ್ಬಂಧ ಬೇಡ; ಒಬ್ಬರಂತೆ ಒಬ್ಬರಿಲ್ಲವೆಂಬ ಕಿತ್ತಾಟವೂ ಬೇಡ. ನಮಗೆ ಭಗವಂತನು ದಯಪಾಲಿಸಿರುವ ವರಪ್ರಸಾದಗಳನ್ನೂ ಬಗೆಬಗೆಯಾದ ಶಕ್ತಿರುಚಿಗಳನ್ನೂ, ಕನ್ನಡನಾಡಿಗೆ, ಕನ್ನಡ ನುಡಿಗೆ, ಒಮ್ಮನಸ್ಸಿನಿಂದ ಮುಡಿಪು ಕಟ್ಟೋಣ; ಒಮ್ಮೆಯ್ಯಾಗಿ ಅವುಗಳ ಏಳಿಗೆಯಲ್ಲಿ ಏಳಿಗೆಯಾಗೋಣ.

ಸಾಹಿತ್ಯ ಕಲಾರಾಧಕರೆ, ಅಗೋ ನೋಡಿ, ಚಲನೆಯಿಲ್ಲದೆ ನಿಂತಿರುವಳು, ಕರ್ಣಾಟಕ ಸರಸ್ವತೀದೇವಿ. ತಲೆಯ ಮೇಲೆ ಭಾರವಾದ ಕಿರೀಟ, ಅಂಗಾಂಗವೆಲ್ಲಾ ತೆರವಿಲ್ಲದೆ ಮುಳ್ಳು ಹುಯ್ದಂತೆ ಹೇರಿರುವ ಜವಾಹಿರಿ, ಶಾಸ್ತ್ರ ನಿಯಮಿತವಾದ ಒಂದು ಬಗೆಯ ನಿಲವಿನ ಭಂಗಿ, ಮುಖದಲ್ಲಿ ಕಣ್ಣಿನಲ್ಲಿ ಕಡೆದ ಏನೋ ಒಂದು

ಬಗೆಯಾದ ನಿಂತ ನಿಲವಿನ ನಗೆ, ಹಾಗೇ ನೋಡುವವನ ಕಣ್ಣಿಗೆ ಕಣ್ಣು ನೆಟ್ಟು ದುರುಗುಟ್ಟಿಕೊಂಡು ನೋಡುತ್ತದೆ.— ಇಲ್ಲ, ಒಮ್ಮೊಮ್ಮೆ ಆಡುವಂತೆಯೂ ಕಾಣುತ್ತದೆ. ಮೈಯೆಲ್ಲಾ ಮುಸುಕಿದ ದಪ್ಪವಾದ ಹಳೆಯ ಜರತಾರಿಯ ವಸ್ತ್ರ; ಉಸಿರು ಬಿಗಿದು ಎದೆ ಹೊಯ್ಯಲಾರಳು;—ಎದೆ ಪದರುತ್ತಿದೆಯೋ ? ಬರಿಯ ನೆಮ್ಮದಿಯ ಪದರಾಟವೇಯೋ ? ಎಚ್ಚತ್ತಿರುವಳೋ, ನಿದ್ದೆ ಹೋಗುತ್ತಿರುವಳೋ ? ಬನ್ನಿ, ಆಕೆಯನ್ನು ಎಚ್ಚರಿಸೋಣ. ಕಿರೀಟದ, ಜವಾಹಿರಿಯ, ಶಿಲ್ಪನಿಯಮದ, ಜರತಾರಿಯ, ಭಾರವನ್ನೂ ಬಿಗುವನ್ನೂ ಬಿಡಿಸೋಣ. ವಿಶ್ವವಾಣಿಯ, ದಿವ್ಯವಾಣಿಯ, ಸಂಜೀವನಮಣಿಯ ಸ್ಪರ್ಶದಿಂದ ಶಾಪಗ್ರಸ್ತಳಾದ ಶಿಲಾಮೂರ್ತಿಯನ್ನು ಜೀವವುಳ್ಳ ಚೆಲುವೆಯನ್ನಾಗಿ ಮಾಡೋಣ. ಆ ಉನ್ನತ ಪೀಠದಿಂದ ಆಗ ಆಕೆ ಇಳಿಯುವಳು, ನಾಡಿನಲ್ಲೆಲ್ಲಾ ಸುಳಿಯುವಳು. ಸ್ವಾತಂತ್ರ್ಯದಿಂದ ಸಹಜವಾಗಿ ಆಕೆಯ ಹೃದಯ ಆಡುವುದು. ಕಣ್ಣು ಒಲಿದ ಹೆಣ್ಣಿನ ಕಣ್ಣ ಬಿನ್ನಾಣವನ್ನೆಲ್ಲಾ ಬೆಳಗಿ ಬೀರುವುದು. ಗಾಳಿಗೆ ಕೆದರಿದ ಕೂದಲು ಕನ್ನಡನಾಡಿನ ಬಯಲುಗಳ ಮೊಲ್ಲೆ ಮಲ್ಲಿಗೆಗಳನ್ನು ಧರಿಸಿ ಕಂಪುಸೂಸುವುದು. ನಗುನಗುತ ಆಕೆ ನಮ್ಮೊಡ ನಾಡಿಯಾಗಿ, ಮನುಷ್ಯರೊಡನೆ ಮನುಷ್ಯಳಾಗಿ, ದಿವ್ಯಾತ್ಮರೊಡನೆ ದೇವಿಯಾಗಿ, ತಾನೂ ನಲಿದು, ನಮ್ಮನ್ನೂ ನಲಿಸುವಳು. ಆಗ್ಗೆ ಆಕೆಯೂ ಧನ್ಯಳು— ನಾವೂ ಧನ್ಯರು; ತಾಯಿ ಧನ್ಯಳಾದರೆ, ಮಕ್ಕಳೂ ಧನ್ಯರಲ್ಲವೆ ?

—ಶ್ರೀ.

## ಅಭ್ಯಸನಗಳು

**ಪ್ರಶ್ನೆಗಳು :—**

(೧) ನಮ್ಮ ಪ್ರಗತಿಗೆ ಆತಂಕವಾಗುವ ಸಂಗತಿಗಳಾವವು ?

(೨) ಕನ್ನಡ ನಾಡು ಸಮತಾಬುದ್ಧಿಯನ್ನು ಪೂರ್ವಕಾಲದಿಂದ ಹೇಗೆ ಕಾಯ್ದುಕೊಂಡು ಬಂದಿದೆ ?

(೩) ಕರ್ನಾಟಕ ಸರಸ್ವತೀದೇವಿಯು ಚಲನೆಯಿಲ್ಲದೆ ಏಕೆ ನಿಂತಿರುವಳು ?

(೪) ‘ ಭಾರವಾದ ಕಿರೀಟಗಳು, ಮುಳ್ಳುಗಳಂತೆ ಹೇರಿರುವ ಜವಾಹಿರಿ, ಮೈಯೆಲ್ಲಾ ಮುಸುಕಿದ ಜರತಾರಿ ವಸ್ತ್ರ ’ ಎಂದರೇನು ?

**ಭಾಷಾಭ್ಯಾಸ :—**

(೧) ಈ ಪಾಠದಲ್ಲಿರುವ ಕೊನೆಯ ಎರಡು ವಾಕ್ಯವೃಂದಗಳಲ್ಲಿ ಮೂಡಿದ ಮಾತುಗಾರಿಕೆಯ ಶೈಲಿಯನ್ನು ನೀವು ನಿರೀಕ್ಷಿಸಬೇಕು. ಒಮ್ಮೊಮ್ಮೆ ಚಿಕ್ಕ ಚಿಕ್ಕ ವಾಕ್ಯಗಳಿಂದ, ಇನ್ನೊಮ್ಮೆ ಪ್ರಶ್ನೆಗಳಿಂದ, ಮತ್ತೊಮ್ಮೆ ಉದ್ಗಾರ ವಾಕ್ಯಗಳಿಂದ ಜನಮನವನ್ನು ಆಕರ್ಷಿಸುವ ಶೈಲಿಯನ್ನು ಇಲ್ಲಿ ನೋಡಬೇಕು.

ಆಧುನಿಕ ಕನ್ನಡ ಸಾಹಿತ್ಯದ ಹಿರಿಮೆಯನ್ನು ಪರಿಣಾಮಕಾರಿಯಾಗಿ ಹೇಳಿರಿ.

(೨) 'ಎಲ್ಲಾ ಪ್ರದೇಶಗಳಿಂದಲೂ ಗಾಳಿಯನ್ನೂ, ಬೆಳಕನ್ನೂ, ಆಹಾರವನ್ನೂ, ತೇಜಸ್ಸನ್ನೂ ಹೀರಿಕೊಳ್ಳುವದು' ಎಂದರೇನು?

(೩) 'ವಿಲಾಸವತಿಯ ಕೊರಳಿನ ಪುಷ್ಪಮಾಲಿಕೆಯೇ ಅಲ್ಲ ಸಾಹಿತ್ಯ; ಮಾನವ ಜೀವನದ ಪುನರ್ನಿರ್ಮಾಣ ಕಾರ್ಯದಲ್ಲಿ ಬದ್ಧಕಂಕಣನಾಗಿರುವ ವೀರನ ಖಡ್ಗವೂ ಆಹುದೆಂದು ತಿಳಿದಿರುವೆವು' ಇದರ ಅರ್ಥ ಸ್ಪಷ್ಟವಾಗುವಂತೆ ಹೇಳಿರಿ.

(೪) 'ಎಲ್ಲವೂ ಕನ್ನಡವೇ ಆಗಿಹೋಗುವದು' ಎಂದರೇನು ?

(೫) 'ಗುಣವಿದ್ದಲ್ಲಿ ಗಾತ್ರವನ್ನು ಯಾರು ನೋಡುವರು ? ವೀರ್ಯವಿದ್ದಲ್ಲಿ ವೇಷಭಾಷೆಗಳನ್ನು ಯಾರು ಕೇಳುವರು ?'

ಈ ವಾಕ್ಯಗಳಲ್ಲಿಯ ವಿಚಾರವನ್ನು ಸ್ಪಷ್ಟೀಕರಿಸಿರಿ.

(೬) 'ಆಕೆ ಸವ್ಯೋಡನಾಡಿಯಾಗಿ ಮನುಷ್ಯರೊಡನೆ ಮನುಷ್ಯಳಾಗಿ' ಎಂದರೇನು?

**ಶಬ್ದ ವಿಚಾರ :—**

(೧) ಕಲಾರಾಧಕ, ಸ್ವಪ್ರಕೃತಿ, ಸ್ವಪ್ರತಿಭೆ, ದೇಶವತ್ಸಲ, ಆರಂಭ, ಆರಂಬ — ಇವುಗಳ ಅರ್ಥವನ್ನು ಹೇಳಿರಿ.

(೨) ಬೇರೂರು, ಮನದಟ್ಟಾಗು, ಆಡಿಕೊಳ್ಳು, ಮೈಮುರಿ — ಇವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.

**ವಾಕ್‌ಶಿಕ್ಷಣ :—**

(೧) ಈ ಪಾಠದಲ್ಲಿಯ ಬೇಕಾದ ಒಂದು ವಾಕ್ಯವೃಂದವನ್ನು ಪಾಠ ಮಾಡಿರಿ.

(೨) ಆಧುನಿಕ ಕವಿಗಳಲ್ಲಿ ನಿಮ್ಮ ಮೆಚ್ಚಿನ ಕವಿ ಯಾರು ? ನಿಮಗೆ ಆನಂದವನ್ನು ಕೊಟ್ಟ ಒಂದು ಕವಿತೆಯನ್ನು ಹೇಳಿರಿ.

**ಚರ್ಚೆ :—**

ಶ್ರೀರಾಮಚಂದ್ರನು (ಮಾನವೇಂದ್ರನು) ಶ್ರೇಷ್ಠನೋ ? ವಾಲ್ಮೀಕಿಯು (ಕವಿಯು) ಶ್ರೇಷ್ಠನೋ ?

**ಬರೆಹ :-**

ಕನ್ನಡ ಸಾಹಿತ್ಯವು ಮುಂದುವರಿಯಬೇಕಾದರೆ ಕನ್ನಡಿಗರು ತಮ್ಮ ಮನಸ್ಸಿನ ರೀತಿಯಲ್ಲಿ ಯಾವ ಸುಧಾರಣೆಗಳನ್ನು ಮಾಡಿಕೊಳ್ಳಬೇಕೆಂಬುದನ್ನು ಬರೆಯಿರಿ.

# ೭. ಹನಿಗಳು

[ ಹನಿಗಳು ಕಥೆಯ ಜಾತಿಯಲ್ಲಿ ಒಂದು ಪ್ರಕಾರ. ಇದರಲ್ಲಿ ವಿವರಣೆಗೆ ಹೆಚ್ಚು ಅವಕಾಶವಿಲ್ಲ. ವರ್ಣನೆಗೆ ಹೆಚ್ಚು ಇಂಬು ಇರುವದಿಲ್ಲ. ಯಾವದಾದರೊಂದು ಘಟನೆಯ ರೂಪರೇಷೆಯನ್ನು ಕೊಟ್ಟು ಓದುಗರಲ್ಲಿ ಒಂದು ವಿಚಾರವನ್ನು ಜಾಗ್ರತಗೊಳಿಸುವದೇ ಹನಿಗಳ ಮುಖ್ಯ ಗುರಿ. ಚಿತ್ರಗಾರನು ಬಾಹ್ಯರೇಷೆಯಿಂದಲೇ ಸಂಪೂರ್ಣ ಚಿತ್ರದ ಭಾವ-ಭಂಗಿ ಯನ್ನು ಪರಿಣಾಮಕಾರಿಯಾಗಿ ಸೂಚಿಸಬಹುದು. ಇಲ್ಲವೆ ಅವನು ಸಂಪೂರ್ಣ ವಿವರಣ ಗಳೊಂದಿಗೆ ಅದೇ ಚಿತ್ರವನ್ನು ಬರೆಯಬಹುದು. ' ಹನಿ ' ಎಂಬುದು ಮೊದಲನೆಯ ಬಗೆಯ ಚಿತ್ರಕಲೆಯ ಮಾದರಿ. ]

ಹನಿ : ೧

## ಫಲಿತಾಂಶ

ಪರೀಕ್ಷೆಯ ಫಲಿತಾಂಶ ಬಂತು. ನಮ್ಮ ಮನೆಯ ವಾರದ ಹುಡುಗ ವೆಂಕಟರಾಮು ಎಂ. ಎ. ಪರೀಕ್ಷೆಯಲ್ಲಿ ಮೊದಲನೆಯ ತರಗತಿಯಲ್ಲಿ ಪಾಸು ಮಾಡಿದ. ಅವನನ್ನು ಕಂಡರೆ ನಮಗೆಲ್ಲಾ ಪ್ರೀತಿ. ಅವನಿಗೆ ಪಾಸಾಯಿತೆಂದು ನಮಗೆ ಹೆಮ್ಮೆ. ಅವನಿಗೆ ಕಾಗದ ಬರೆದೆ.

ಕಾಗದ ಬರೆದ ಮಾರನೆಯ ದಿನ ವೆಂಕಟರಾಮು ಮನೆಗೆ ಬಂದ.

" ಏನಯ್ಯಾ ಗಿಟ್ಟಿಸಿಬಿಟ್ಟೆ ! " ಎಂದೆ.

ವೆಂಕಟರಾಮು ಅಳುತ್ತಿದ್ದ !

ನನಗೆ ಹೆದರಿಕೆ ಆಯ್ತು.

" ಮನೆಯಲ್ಲಿ ಎಲ್ಲ ಆರೋಗ್ಯ ತಾನೆ ? " ಎಂದೆ.

" ಎಲ್ಲ ಚೆನ್ನಾಗಿದಾರೆ, ಸಾರ್. "

" ಮತ್ತೆ ಅಳೋದು ? "

" ಪರೀಕ್ಷೆ ಸಾರ್........ "

ನನಗೊಂದು ಯೋಚನೆ ಬಂದು ಮೈ ಝುಮ್ಮೆಂದಿತು. ಮೊದಲೇ ಬಡವರ ಹುಡುಗ ! ನಮ್ಮ ವಿಶ್ವವಿದ್ಯಾಲಯದವರು " ಕಣ್ಣು ಕಾಣದೆ ನಿನಗೆ ಫಸ್ಟ್‌ಕ್ಲಾಸ ಎಂದೆವು. ನೀನು ಫೇಲು " ಎಂದು ಏನಾದರೂ ಹೊಸ ಪಟ್ಟಿ ಹಾಕಿರುವರೋ ಎನಿಸಿತು.

" ಏನಾದರೂ ಸೆಕಂಡ ಲಿಸ್ಟು.... ? ಫೇಲ್.... ? " ಎಂದೆ.

" ಇಲ್ಲ ಸಾರ್. ಫಸ್ಟ್‌ಕ್ಲಾಸಿನಲ್ಲೆ...."

" ಮತ್ತೆ ? "

" ಫೇಲಾಗಿದ್ದರೆ ಚೆನ್ನಾಗಿದ್ದಿರುತ್ತಿತ್ತು, ಸಾರ್. ಹಾಳು ಪಾಸು ಮಾಡಿ ಸಿದರು........"

" ಏನಯ್ಯ ಹೀಗೆನ್ನುವೆ! ವರುಷವೆಲ್ಲಾ ಕಷ್ಟಪಟ್ಟು........ ?"

ವೆಂಕಟರಾಮು ಕಣ್ಣೀರನ್ನು ಅದುಮಿ ಹೇಳಿದ :

" ಅಲ್ಲ ಸಾರ್, ಈಗ ನೋಡಿ. ಇದುವರೆಗೂ ಓದುವ ಹುಡುಗ ಎಂದು ಅವರು ಇವರು ವಾರ ಕೊಡುತ್ತ ಇದ್ದರು. ಈಗ ಪಾಸಾಗಿ ಓದು ಮುಗಿಯಿತೆಂದ ಮೇಲೆ ಯಾರು ಸಾರ್, ವಾರ ಕೊಡುವವರು ? ಈ ಪಾಸು ಮಾಡಿಸಿದವರು ನಮಗೆ ಕೆಲಸ ಕೊಡುವ ಹಾಗಿಲ್ಲ... ಈ ಕಡೆ ವಾರ.... ನಾವು ಬಡವರು...ಏನು ಮಾಡಬೇಕು ಸಾರ್ ?...."

ನಾನೇನು ಹೇಳುವುದು ?

—ಜಿ. ಪಿ. ರಾಜರತ್ನಂ

'ಹನಿಗಳು' ಎಂಬ ಸಂಗ್ರಹದಿಂದ

ಹನಿ : ೨

## ಯಾರು ಸರಿ ?

ನನಗೆ ಮಕ್ಕಳೊಡನೆ ಆಡುವುದೆಂದರೆ ಬಲು ಆಶೆ. ಅವಕಾಶವಾದಾಗಲೆಲ್ಲ ಮಕ್ಕಳೊಡನೆ ಆಡುವದೇ ನನಗೆ ಕೆಲಸ. ಹೀಗೆ ನನ್ನ ಕೆಲಸದಲ್ಲಿ ನಾನಿರಲು ಒಂದು ದಿನ ಒಂದು ಪಾರಿವಾಳವು ಹಾರಿ ಬಂದಿತು. ನೋಡಿದರೆ ನೆತ್ತರು ಸುರಿಯುತ್ತಿದೆ. ಹಕ್ಕಿಯು ಬಾಯ್ಬಿಟ್ಟುಕೊಂಡು ಭೀತಿಯಿಂದ ನಡುಗುತ್ತಿದೆ. ಕಣ್ಣುಗಳು ಹಿರಿದಾಗಿ ಹಿಗ್ಗಿ ಕಾತರತೆಯಿಂದ ಕೆಟ್ಟಿವೆ. ಮೃತ್ಯುವು ಎದುರು ನಿಂತಾಗ ಅರಳುವಂತೆ ಅರಳಿವೆ. ನೋಡಿದವರಿಗೂ ಎದೆ ನಡುಗುವಂತಿದೆ. ಇದೇಕೆಂದು ಸುತ್ತುಮುತ್ತು ನೋಡಿದರೆ ಕಾಳಭೈರಿಯೊಂದು ಗರಗರನೆ ನೆತ್ತಿಯ ಮೇಲೆ ತಿರುಗುತ್ತಿದೆ.

ಸರಿ. ತಿಳಿಯಿತು. ಪಾಪ ! ಬಡಹಕ್ಕಿ ! ಸಾವಿಗೆ ಅಂಜಿ ಮಾನವನ ಮೊರೆ ಹೊಕ್ಕಿದೆ. " ನಾನು ಅದನ್ನು ಉಳಿಸಬಾರದೇನು ? ಒಂದು ಗಳಿಗೆಯಾದರೂ ಮಾನವನು ದೇವನಾಗಿ ಕಾರುಣ್ಯದ ಕಿರಣವನ್ನು ಬೀರಿ ಪ್ರಕೃತಿಯ ಅಪೂರ್ಣತೆಯ ಅಂಧಕಾರವನ್ನು ಕುಗ್ಗಿಸಬಾರದೇನು ?" ಎಂದುಕೊಂಡು ಹಕ್ಕಿಯನ್ನು ಆದರಿಸಿದೆನು. ಬಲವಂತ ಏಟಿನಿಂದ ಹರಿದುಹೋದ ಹೊಟ್ಟೆಯನ್ನು ಹೊಲಿದೆನು. ಹಕ್ಕಿಯು ಹಾರಾಡಿತು. ಆದರೂ ಅದರ ಸುಖಕ್ಕೆಂದು ಮಾಡುವ ಕೆಲಸವೆಂದು ನಾನು ಹಿಂದೆಗೆಯಲಿಲ್ಲ.

ಕೆಲವು ದಿನವಾಯಿತು. ಹಕ್ಕಿಗೆ ಗುಣವಾಯಿತು. ಆ ವೇಳೆಗಾಗಲೇ ನನಗಂತೂ ಹೇಳತೀರದು, ಹಗಲಿರುಳೂ ಅದರ ಯೋಚನೆಯೆ ! " ಬೆಕ್ಕು ಬಂದಿತು. ಮಕ್ಕಳು ನೋಯಿಸಾರು !" ಇದು ಬಿಟ್ಟು ನನಗೆ ಬೇರೆ ಯೋಚನೆಯೇ ಇಲ್ಲ. ಮಾತನಾಡದ ಮೂಕ ಹಕ್ಕಿಯೂ ತನ್ನ ನೋಟದಿಂದಲೇ ಹೃದಯದ ಹೊತ್ತಿಗೆಯನ್ನು ಬಿಚ್ಚಿ ನನ್ನ ಬಗೆಗಣ್ಣಿನ ಎದುರಿಗೆ ಹಿಡಿವುದು. ಮಾತಿಗೆ ಸಿಕ್ಕದ ಆ ಭಾವದ ಬೆಡಗನ್ನು ಬಗೆಯರಿವುದು. ನಾನೂ ಹಿಗ್ಗಿ ಹೋಗುವೆನು.

ಕೊನೆಗೆ ಹಕ್ಕಿಯ ಗಾಯ ಮಾಯ್ದು ಹಾರಬಲ್ಲುದಾಯಿತು. ಹಕ್ಕಿಯ ನ್ನಿಟ್ಟುಕೊಳ್ಳಬೇಕೆಂದು ಒಂದು ಆಶೆ. ಹಾರುವ ಹಕ್ಕಿಯನ್ನು ಹಿಡಿಯಲ್ಲಿಡುವುದು ಅನ್ಯಾಯವೆಂದು ಒಂದು ದಿಗಿಲು. ಏನು ಮಾಡಲಿ ? ಕೊನೆಗೆ ದಿಗಿಲಿಗೇ ಗೆಲುವಾಗಿ ಹಕ್ಕಿಯು ಹಾರಿಹೋಯಿತು.

ಮಕ್ಕಳಿಗೆ, " ಹಕ್ಕಿಯಿದ್ದರೆ ಆಡುವುದಕ್ಕೆ ಆಗುತ್ತಿದ್ದಿತು. ಮಾವ ಬಿಟ್ಟು ಬಿಟ್ಟನೆ"ಂದು ಕೋಪ. ಹಿರಿಯರಿಗೆ, " ಮಾರಿದ್ದರೆ ದುಡ್ಡಾಗುತ್ತಿದ್ದಿತು " ಎಂದು ಅಸಮಾಧಾನ. ನನಗೇನೊ ನಾನು ಮಾಡಿರುವದೇ ಸರಿಯೆಂದು ಬಹುತೃಪ್ತಿ. ಆದರೂ ನಡುವೊಂದು ಸಣ್ಣದನಿ ಆಗಾಗ, " ಯಾರದು ಸರಿ ? " ಎಂದು ಕೇಳುವುದು. ಉತ್ತರವು ಮಾತ್ರ ತೋರದು.

—ದೇವುಡು ನರಸಿಂಹಶಾಸ್ತ್ರಿ
'ದೇವುಡು ಕಥೆಗಳು' ಇದರಿಂದ

## ಅಭ್ಯಸನಗಳು

ಪ್ರಶ್ನೆಗಳು:—

(೧) ಪಾಸಾದುದಕ್ಕೆ ಅಭಿನಂದಿಸಿದರೆ ವೆಂಕಟರಾಮನಿಗೆ ಅಳುವು ಬಂದ ಕಾರಣ ವೇನು ?

(೨) ಆತನಿಗೆ ವಾರ ಕೊಟ್ಟ ಮನೆಯವರಿಗೆ ಆತನ ಅಳು ನೋಡಿ ಬಂದ ಸಂದೇಹ ಗಳೇನು ?

ಭಾಷಾಭ್ಯಾಸ:—

(೧) ಇಲ್ಲಿ ಈ ಹನಿಯ ಕಥನ ಪದ್ಧತಿಯೊಳಗಿನ ಸಂಕ್ಷೇಪ ಅಭ್ಯಸನೀಯವಾಗಿದೆ. ಇದನ್ನೇ ಕಥೆಯಾಗಿ ಸ್ವಲ್ಪ ದೊಡ್ಡದಾಗಿಯೂ ಹಿಗ್ಗಿಸಿಕೊಳ್ಳಬಹುದು-

[೧] 'ವೆಂಕಟರಾಮನನ್ನು ಕಂಡರೆ ನಮಗೆಲ್ಲ ಪ್ರೀತಿ' ಎಂಬ ಮಾತನ್ನು ಮನಗಾಣಿಸಿಕೊಡುವ ಪ್ರಸಂಗವನ್ನು ಕಲ್ಪಿಸಿ ಚಿತ್ರಿಸಬಹುದು.

[೨] ಮೊದಲನೆಯ ತರಗತಿಯಲ್ಲಿ ಪಾಸಾಗುವ ಯೋಗ್ಯತೆಯ ಹುಡುಗ, ಇಂತಹನು ವಾರದ ಮನೆಯಲ್ಲಿ ಎಷ್ಟು ನಯವಿನಯದಿಂದ ನಡ ಕೊಳ್ಳುತ್ತಿದ್ದ.

[೩] ಮನೆಯ ವಿಪರೀತ ಪರಿಸ್ಥಿತಿ, ಆದುದರಿಂದ ವಾರಕ್ಕೆ ನಿಲ್ಲಬೇಕಾದ ಪ್ರಸಂಗ, ಕೆಲ ಕಾಲ ವಾರದ ಮನೆಗಳಲ್ಲಿ ಅನುಭವಿಸಬೇಕಾಗುತ್ತಿದ್ದ ಅವಮಾನ ಪ್ರಸಂಗ.

[೪] ವೆಂಕಟರಾಮನು ಕೇವಲ ಅಭ್ಯಾಸಕ್ಕೆ ಮನಸ್ಸು ಹಾಕಿದವನಾದ್ದರಿಂದ ಹೊರಗಿನ ಜಗತ್ತಿನ ಪರಿಚಯವೇ ಇಲ್ಲದವನಾಗಿದ್ದ. ಆದ್ದರಿಂದ ಮೊದಲನೆಯ ತರಗತಿಯಲ್ಲಿ ಪಾಸಾದರೂ ತನ್ನ ಕಾಲಮೇಲೆ ತಾನು ನಿಲ್ಲಬಹುದೆಂಬ ಆತ್ಮವಿಶ್ವಾಸವು ಇಲ್ಲದಾದವ ....

ಇಂತಹ ಎಲ್ಲ ವಿವರಗಳನ್ನು ಬಿಟ್ಟು ಕೊಟ್ಟು ಕೊನೆಗೆ ಆತನ ಮನಃಸ್ಥಿತಿ ಯನ್ನು ಸೂಚಿಸುವ ಪರಾವಲಂಬನ ವೃತ್ತಿ .... ಅಳು ಮಾತ್ರ ಹೇಳ ಬಿಟ್ಟುದಾಗಿದೆ.

ಶಬ್ದ ವಿಚಾರ:—

ಇಲ್ಲಿ ಗ್ರಾಂಥಿಕ ಭಾಷೆಯ ಬದಲು ಬಳಕೆಯ ಮಾತನ್ನು ಉಪಯೋಗಿಸಲಾಗಿದೆ.

(೧) ಪೆರ್ಮೆ—ಹೆಮ್ಮೆ ; ಹೀಗೆ 'ಪ' ಕಾರವು 'ಹ' ಕಾರವಾದ ಐದು ಶಬ್ದಗಳನ್ನು ಹೇಳಿರಿ.

(೨) ಪಿರಿದು + ಮೆ_ಪೆರ್ಮೆ ಇದರಂತೆ — ಪಿರಿದು — ಇದರೊಡನೆ ಮರ, ತೊರೆ, ಪುಲಿ ಈ ಶಬ್ದಗಳಿಂದಾಗುವ ಕೂಡು-ನುಡಿಗಳನ್ನು ಹೇಳಿರಿ.

(೩) ಹಿರಿದು ಶಬ್ದವು ಪೂರ್ವಪದವಾಗಿರುವ ಐದು ಶಬ್ದಗಳನ್ನು ಬರೆಯಿರಿ.

ವಾಕ್‌ಶಿಕ್ಷಣ:—

ವೆಂಕಟರಾಮು ತನ್ನ ಕೋಣೆಯಲ್ಲಿ ಎಂ. ಎ. ಪಾಸಾಗಿ ಬಂದ ಪೀಕಲಾಟಕ್ಕಾಗಿ ಮಿಡುಕುತ್ತಿದ್ದಾನೆ. ತನ್ನ ಸುತ್ತಲಿನ ಪರಿಸ್ಥಿತಿಯನ್ನು ಹಳಿಯುತ್ತಿದ್ದಾನೆ. ಒಂದು ಕಾಲಕ್ಕೆ ಮ್ಯಾಟ್ರಿಕ್ ಪಾಸಾದವರಿಗೆ ಸಿಕ್ಕಬಹುದಾಗಿದ್ದ ನೌಕರಿ ಎಂ. ಎ. ಆಗಿಯೂ ದೊರೆಯದಾಗಿದ್ದುದಕ್ಕೆ ನೊಂದುಕೊಳ್ಳುತ್ತಿದ್ದಾನೆ, ಎಂಬುದರ ಏಕಪಾತ್ರಾಭಿನಯ ಮಾಡಿರಿ.

ಚರ್ಚೆ—

ಬುದ್ಧಿ ವಿಕಾಸದ ಹಿಂದೆ ದುರ್ಬಲತೆ ಬೆಳೆಯುವದು; ಕೆಲಸ ಕೀಳೆಂಬ ಭಾವನೆ ಬರುವುದು. ಆದ್ದರಿಂದ ಕಾಲೇಜುಗಳನ್ನೆಲ್ಲ ನಿಲ್ಲಿಸಿಬಿಡಬೇಕು. ರಾಷ್ಟ್ರಕ್ಕೆ ಕಾರ್ಮಿಕರೇ ಸಾಕು.

ಬರೆಹ:—

ಪುಕ್ಕಟೆ ಊಟದ ಋಣದಿಂದ ಸ್ವಾಭಿಮಾನಕ್ಕೆ ಹೇಗೆ ಎರವಾಗ ಬೇಕಾಗುತ್ತದೆ ಎಂಬುದನ್ನು ತೋರಿಸುವ ಪ್ರಸಂಗವೊಂದನ್ನು ಚಿತ್ರಿಸಿರಿ.

೨

ಪ್ರಶ್ನೆಗಳು:—

(೧) ಪಾರಿವಾಳದ ವಿಷಯಕ್ಕೆ ಕನಿಕರ ಉಂಟಾಗಲು ಕಾರಣವೇನು ?

(೨) ಹಕ್ಕಿಯು ಕೃತಜ್ಞತೆಯನ್ನು ಹೇಗೆ ವ್ಯಕ್ತಪಡಿಸಿತು ?

(೩) ಪಾರಿವಾಳವನ್ನು ಬಿಟ್ಟುದುದು ಸರಿಯೆ ? ತಪ್ಪೆ ?

ಭಾಷಾಭ್ಯಾಸ:—

(೧) ಇಲ್ಲಿಯ ಸಂಕ್ಷೇಪ ಸ್ಥಳಗಳನ್ನು ಎತ್ತಿ ಹೇಳಿರಿ.

(೨) ಗಿಡಗವು ಪಾರಿವಾಳವನ್ನು ಬೆನ್ನಟ್ಟಿ ಗಾಯಗೊಳಿಸಿದ ಪ್ರಸಂಗವನ್ನು ಕಲ್ಪಿಸಿ ವರ್ಣಿಸಿರಿ.

(೩) 'ಪ್ರಕೃತಿಯ ಅಪೂರ್ಣತೆಯ ಅಂಧಕಾರವನ್ನು ಕುಗ್ಗಿಸಬಾರದೇನು?' ಇದನ್ನು ಸ್ಪಷ್ಟೀಕರಿಸಿರಿ.

ಶಬ್ದ ವಿಚಾರ:—

(೧) ಅರಳು, ಬಾಯಿ, ಕಾಡು — ಈ ಶಬ್ದಗಳಿಗೆ ಇರುವ ಅರ್ಥಗಳನ್ನು ವ್ಯಕ್ತಪಡಿಸುವ ಬೇರೆ ವಾಕ್ಯಗಳನ್ನು ಬರೆಯಿರಿ.

(೨) ಕಣ್ಣಿನ ( ಗುಳ್ಳಿಗಣ್ಣು, ಮೆಳ್ಳಗಣ್ಣು ಇ. ) ವಿವಿಧ ಪ್ರಕಾರಗಳನ್ನು ಸೂಚಿಸುವ ಹತ್ತು ಶಬ್ದಗಳನ್ನು ಬರೆಯಿರಿ.

**ವಾಕ್ ಶಿಕ್ಷಣ:—**

ಸಿಂಧದ ನಿರ್ವಾಸಿತರಲ್ಲಿ ಏಳೆಂಟು ವರ್ಷದ ಹುಡುಗ ಒಬ್ಬ ಸಿರಿವಂತ ದಂಪತಿಗಳ ಪಾಲನದಲ್ಲಿ ಎರಡು ವರ್ಷಗಳವರೆಗೆ ಮಗನಂತೆ ಜೋಪಾನವಾಗಿರುವನು. ಆ ಬಾಲಕನ ತಂದೆ ತಾಯಿಗಳಿಗೆ ಹೇಗೋ ಗೊತ್ತಾಗಿ ತಮ್ಮ ಮಗನನ್ನು ಕೇಳಲು ಬರುತ್ತಾರೆ.

ಈ ಪ್ರಸಂಗವನ್ನು ಏಕಾಂಕ ನಾಟಕದಲ್ಲಿ ಬರೆದು ಅಭಿನಯಿಸಿರಿ.

**ಚರ್ಚೆ—**

ಪ್ರಾಣಿಸಂಗ್ರಹಾಲಯಗಳು ಇರಕೂಡದು.

**ಬರಹ:—**

ಬೆಕ್ಕು ತನ್ನ ಮರಿಗಳೊಡನೆ ಚಿನ್ನಾಟವಾಡುತ್ತ ಒಂದು ಜೀವಂತ ಇಲಿಯನ್ನು ಹಿಡಿದುಕೊಂಡು ತಂದು ಮರಿಗಳ ಎದುರಿಗೆ ಬಿಟ್ಟಿದೆ. ಅದಕ್ಕೆ ಲೀಲೆಯಾದರೂ ‘ ಬೆಕ್ಕಿಗೆ ಆಟ, ಇಲಿಗೆ ಪ್ರಾಣ ಸಂಕಟ ’ ಎಂಬ ಗಾದೆಯನ್ನು ವಿವರಿಸುವ ಕರುಣ ಪ್ರಸಂಗವನ್ನು ಚಿತ್ರಿಸಿರಿ.



# ೮. ಕೂಲಿ.

[ ಇದೊಂದು ಹರಟೆಯ ಮಾದರಿ. ಇದು ಹನಿಯಂತೆ ಕಾಣುವುದು. ಏಕೆಂದರೆ ಹನಿಯಲ್ಲಿ ಕಥೆಯ ಪ್ರಸಂಗವು ಅತಿ ಚಿಕ್ಕ ರೂಪವನ್ನು ತಾಳಿದಂತೆ ಇಲ್ಲಿಯೂ ಚಿಕ್ಕದೊಂದು ಪ್ರಸಂಗದ ಕಥನವಿದೆ. ಈ ದೃಷ್ಟಿಯಿಂದ ಇದು ಹನಿಯಂತೆ ಕಂಡರೂ ಹನಿಯಲ್ಲಿ ಸಿಗದ ವಿವಾದಗಳು ಇಲ್ಲಿ ಕಂಡುಬರುತ್ತವೆ; ಕೊನೆಯಲ್ಲಿ ಲೇಖಕನು ತನ್ನ ಅಂತರಂಗದಲ್ಲಿ ಆದ ಪ್ರತಿಕ್ರಿಯೆಯನ್ನು ಆತ್ಮೀಯ ದೃಷ್ಟಿಯಿಂದ ಬಹಿರಂಗಪಡಿಸಿದ್ದಾನೆ. ಈ ದೃಷ್ಟಿಯಿಂದ ವೈಯಕ್ತಿಕ ನಿಬಂಧದ ಅಂಶವೂ ಇಲ್ಲಿ ಸೇರಿದೆ. ಹೀಗೆ ಸಣ್ಣ ಕತೆ, ಹನಿ, ವೈಯಕ್ತಿಕ ನಿಬಂಧ ಇವುಗಳ ಒಂದೊಂದು ಅಂಶವನ್ನು ತನ್ನಲ್ಲಿ ಅಳವಡಿಸಿಕೊಂಡ ಮಿಶ್ರ ಸ್ವರೂಪದ ‘ ಹರಟೆ ’ ಇದಾಗಿದೆ. ]

ರೈಲು ನಿಂತಾಗ ಸಣ್ಣಗೆ ಮಳೆ ಹನಿಯುತ್ತಿತ್ತು. ಒಂದೇ ದಿವಸದ ಕೆಲಸಕ್ಕಾಗಿ ಹೋಗಿದ್ದುದರಿಂದ ಒಂದೇ ಒಂದು ಕೈಪೆಟ್ಟಿಗೆಯನ್ನು ತೆಗೆದುಕೊಂಡು ಹೋಗಿದ್ದೆ. ಗಾಡಿಯೊಳಕ್ಕೆ ಹದ್ದುಗಳಂತೆ ನುಗ್ಗಿದ ಕೂಲಿಯವರು ಅದನ್ನು ತೆಗೆದುಕೊಳ್ಳಲು ಬಿಡದೆ, ಅದನ್ನು ನಾನೇ ಕೈಯಲ್ಲಿ ಹಿಡಿದುಕೊಂಡು ಗಾಡಿಯಿಂದಿಳಿದೆ. ಬಾಗಿಲಿನಲ್ಲಿ ಕಿಕ್ಕಿರಿದಿದ್ದ ಗಲಾಟೆಯಿಂದ ಪಾರಾಗಿ ಹೊರಗಡೆ ಬಂದು ಮನೆಯ ಕಡೆ ಹೊರಟೆ. ಮಳೆ ಬೀಳುತ್ತಲೇ ಇತ್ತು. ಒಂದು ಕೈಯಲ್ಲಿ ಛತ್ರಿ, ಇನ್ನೊಂದರಲ್ಲಿ ಪೆಟ್ಟಿಗೆ ಹಿಡಿದು ಸ್ವಲ್ಪದೂರ ಸಾಗಿದೆ. ಕಷ್ಟವೇನೂ ತೋರಲಿಲ್ಲ. ರೇಲ್ವೆ ಆಫೀಸನ್ನು ಸಮೀಪಿಸುವ ವೇಳೆಗೆ ಪಕ್ಕದಿಂದ ಒಬ್ಬ ಗೌಡನು ಬಂದು ‘ ಪೆಟ್ಟಿಗೆ ತೆಗೆದು

ಕೊಳ್ಳಲೇ, ಬುದ್ಧಿ ?" ಎಂದ. 'ಬೇಕಿಲ್ಲ, ಹೋಗೊ' ಎಂದೆ —'ಇಷ್ಟ ಬಂದಷ್ಟು ಕೊಡಿ, ಬುದ್ಧಿ, ಗರೀಬ; ಹೊಟ್ಟೆಗೇನೂ ಇಲ್ಲ' ಎಂದ. ಮುಖದಲ್ಲಿ ನಟನೆ ಕಾಣ ಲಿಲ್ಲ; ಅದು ಹಸಿವಿನಿಂದಲೋ, ಆಯಾಸದಿಂದಲೋ ಕಳೆಗುಂದಿತ್ತು. ತೊಟ್ಟಿದ್ದ ಚಡ್ಡಿ, ಷರಟು, ತಲೆಗೆ ಸುತ್ತಿದ್ದ ಕೆಂಪು ವಸ್ತ್ರ ಎಲ್ಲವೂ ಸ್ವಲ್ಪ ಹರಿದಿದ್ದವು. 'ಇವನಿಗೆ ಕೊಡಬೇಕಾದ ಆರು ಕಾಸನ್ನು ಉಳಿಸಿಕೊಂಡು ಮನೆಗೆ ಶಿಖರ ಹಾಕುವುದು ಅಷ್ಟರಲ್ಲೇ ಇದೆ!' ಎಂದುಕೊಂಡು ಹಿಂತಿರುಗಿ, 'ಆರು ಕಾಸು ಕೊಡಲೇನೋ?' ಎಂದೆ. 'ತಮ್ಮಿಷ್ಟ, ಬುದ್ಧಿ' ಎಂದು ಪೆಟ್ಟಿಗೆಯನ್ನು ಕೈಯಿಂದ ತೆಗೆದುಕೊಂಡ. ಮನೆ ಸೇರಲು ಇಪ್ಪತ್ತು ನಿಮಿಷಬೇಕು; ದಾರಿ ಉದ್ದಕ್ಕೂ ಮಾತನಾಡುತ್ತಾ ಬಂದೆವು.—

'ನಿನ್ನ ಹೆಸರೇನೋ ?'

'ನಿಂಗ, ಬುದ್ದಿ.'

'ಯಾವ ಜನವೋ, ನೀವು ?'

'ಒಕ್ಕಲುಮಕ್ಕಳು, ಬುದ್ದಿ.'

'ಇದೇ ಊರೇನೋ, ನಿನ್ನದು ?'

'ಇಲ್ಲ ಬುದ್ದಿ; ನಾಗಮಂಗಲದ ತಾಲ್ಲೋಕು.'

'ಮತ್ತೆ ಇಲ್ಲಿಗೆ ಏಕೋ ಬಂದೆ ?'

'ಮಳೇನೇ ಇಲ್ಲ ಬುದ್ದಿ; ಕಂದಾಯ ಕೊಡೋದು ಆಗಲಿಲ್ಲ. ಜಮೀನು ಬಿಟ್ಟುಬಿಟ್ಟೆ. ಕೂಲಿನಾಲಿ ಮಾಡಿಕೊಳ್ಳುವಾ, ಎಂದು ಬಂದುಬಿಟ್ಟೆ.'

'ಎಷ್ಟು ದಿನ ಆಯಿತೋ ?'

'ಆರು ವರ್ಷ ಆಯಿತು, ಬುದ್ದಿ.'

'ಎಲ್ಲೋ ಮನೆ ?'

'ಹಳೆ ಅಗ್ರಹಾರದಲ್ಲಿ ಸ್ವಲ್ಪ ಕೊಟ್ಟವ್ರೆ, ಬುದ್ದಿ, ಅಂಗಡಿಯವರು; ಅದಕ್ಕೂ ಎಂಟಾಣೆ ಬಾಡಿಗೆ, ಬುದ್ದಿ.'

'ಹೆಂಡತಿ ಇದಾಳೇನೋ ?'

'ಊರಲ್ಲೇ ತೀರಿಕೊಂಡಳು, ಬುದ್ದಿ; ನಮ್ಮ ತಾಯಿ ಇದಾಳೆ, ತುಂಬ ಮುದುಕಿ, ಬುದ್ದಿ; ಹಾಗೇ ಒಸಿ ಬೇಯಿಸಿ ಹಾಕುತಾಳೆ.'

'ತಿರುಗಿ ಮದುವೆ ಆಗಲಿಲ್ಲವೇನೋ ?'

'ಎಲ್ಲಿ ಬುದ್ದಿ, ಹೊಟ್ಟೆಗೇ ಇಲ್ಲ! ಮದುವೆ ಆಗಲಿಕ್ಕೆ ದುಡ್ಡೇ ಇಲ್ಲವಲ್ಲ, ಬುದ್ದಿ.'

'ಮಕ್ಕಳು ಮರಿ ಇದಾರೇನೋ ?'

'ಒಂದು ಹೆಣ್ಣು ಮಗು ಅಯ್ತೆ, ಬುದ್ದಿ; ಹತ್ತು ವರ್ಷ ವಯಸ್ಸು; ಸಾಹೆ ಅಂಗಡಿ ದಂಡೆಯಲ್ಲಿ ನಿಂತಿರುತ್ತದೆ. ನಿಮ್ಮಂಥ ದೊಡ್ಡ ಮನುಷ್ಯರು ನಾಕಾಣೆ,

ಎಂಟಾಣೆ ಕಟ್ಟಿಗೆ ತೆಗೆದುಕೊಂಡರೆ, ತೆಗೆಸಿಕೊಂಡು ಹೋಗುತ್ತಾರೆ; ಮೂರು ಕಾಸು, ಆರು ಕಾಸು ಕೊಡುತ್ತಾರೆ. ದಿನಾನೂ ಒಂದಾಣೆ ಎರಡಾಣೆ ತಂದು ಕೊಡ್ತ್ಯೆಯ್ತಿ, ಬುದ್ದಿ'.

'ನೀನೆಷ್ಟು ಸಂಪಾದಿಸುತ್ತೀಯ ?'

'ಬುದ್ದೀ, ನಾಕಾಣೆ ಸಿಕ್ಕೋದಿನ ಸಿಕ್ತ್ಯೆಯ್ತಿ, ಆರಾಣೇನೂ ಸಿಕ್ತ್ಯೆಯ್ತಿ, ಗಲಾಟೆ ಕಾಲದಲ್ಲಿ ಎಂಟಾಣೇನೂ ಸಿಕ್ತ್ಯೆಯ್ತಿ; ಬಿಲ್ಲೆಯವರು, ಪೋಲೀಸಿನವರು ನೋಡಿದರೆ, ಒಂದಾಣೆ, ಎರಡಾಣೆ ಕಿತ್ತುಕೊಂಡುಬಿಡುತ್ತಾರೆ. ಇಲ್ಲದಿದ್ದರೆ ರೋಜಿನಾ ನಾಕಾಣೇಗೇನೂ ಮೋಸ ಇಲ್ಲ, ಬುದ್ದಿ.'

'ಕೆಲಸ ಗಿಲಸಕ್ಕೆ ಸೇರಲಿಲ್ಲವೇನೋ ?'

'ಯಾರು ಬುದ್ದಿ ಕೊಡಿಸುವವರು ? ನಮಗೆ ಯಾರೂ ಗೊತ್ತಿಲ್ಲ.'

'ಬರುವ ಕೂಲಿ ಸಾಕಾಗುತ್ತದೆಯೇನೋ ?'

'ಬುದ್ದೀ, ಕಾಯಿಲೆ ಗೀಯಿಲೆ ಇಲ್ಲದಿದ್ದರೆ ಹೇಗೋ ತಳ್ಳಿಕೊಳ್ಳುತ್ತೇವೆ. ಒಂದು ಸೇರು ರಾಗಿ, ಅರಪಾವು ಅಕ್ಕಿ ಬೇಕು, ಬುದ್ದಿ, ದಿನಾನೂ. ಬಟ್ಟೆಗಿಟ್ಟೆ ತೆಗೆದುಕೊಂಡುಬಿಟ್ಟರೆ ಎಟಕುವದಿಲ್ಲ. ನಮ್ಮ ತಾಯಿ ಮುದುಕಿ; ಒಂದೇ ಹರಕುಬಟ್ಟೆ ಉಟ್ಟುಕೊಂಡು ಕಾಲಾ ಹಾಕ್ತಾ ಇದ್ದಳು; ಒಂದು ರೂಪಾಯಿ ಆರಾಣೆ ಮಡಗಿಕೊಂಡಿದ್ದೆ; ನಿನ್ನೆ ಎರಡುರೂಪಾಯಿ ಎರಡಾಣೆ ಕೊಟ್ಟು ಒಂದು ಸೀರೆ ತಕ್ಕೊಟ್ಟೆ. ನಿನ್ನೆಯಿಂದ ಊಟವಿಲ್ಲ ಬುದ್ದಿ.'

ಗೌಡನ ನಿಷ್ಕಪಟವಾದ ಮಾತು ನನ್ನ ಹೃದಯವನ್ನು ಚುಚ್ಚಿ, ಮನಸ್ಸನ್ನು ಸೂರೆಗೊಂಡಿತ್ತು. 'ರೈಲಿನಲ್ಲಿ ಕುಳಿತು, ತುಂಬಿದ ಹೊಟ್ಟೆಗೆ ಆರಾಣೆಯನ್ನು ತುರುಕಿದ್ದೆ. ಆ ದುಡ್ಡನ್ನು ಇವನಿಗೆ ಕೊಡಬಾರದಾಗಿತ್ತೇ?' ಎನಿಸಿತು.

ಮನೆ ಸಿಕ್ಕಿತು. ಗೌಡನು ಪೆಟ್ಟಿಗೆಯನ್ನು ಒಳಗೆ ತಂದಿಟ್ಟನು. ನಿಂಗನ ವಿಷಯ ನಮ್ಮ ತಾಯಿಗೆ ಹೇಳಿದೆ. ಹೆಂಗರುಳಲ್ಲವೇ ? ಮಿಕ್ಕಿದ್ದ ಮಧ್ಯಾಹ್ನದ ಅನ್ನ, ಹುಳಿ ಕಲಸಿ, ಒಂದು ಎಲೆಯನ್ನು ತಂದುಕೊಟ್ಟು ಅವನ ಮಡಲಿಗೆ ಹೊಯ್ದರು. ಎಲೆ, ಅಡಿಕೆ, ಒಂದೂವರೆ ಆಣೆ ಅವನ ಕೈಯಲ್ಲಿಕ್ಕಿದೆ. ಏನೋ ಅಪಾರ ಅದೃಷ್ಟ ಒದಗಿದಂತೆ ಅವನ ಮುಖವು ಅರಳಿತು. ತುಟಿಗಳು ಕೃತಜ್ಞತೆಯನ್ನು ಸೂಚಿಸಿ ನಕ್ಕವು.

'ಊರಿನಿಂದ ಬಂದಾಗ ನನಗೇ ಕೂಲಿ ಕೊಡಬೇಕು, ಬುದ್ದಿ,' ಎಂದ.

'ನಾನೇನು ಕೊಡಬಲ್ಲೆ ? ದೇವರಿದಾನೆ, ಹೋಗು' ಎಂದೆ.

ಇದು ನಡೆದು ನಾಲ್ಕೈದು ತಿಂಗಳಾಗಿವೆ. ಆದರೂ ನಿಂಗನ ಚಿತ್ರ ಈಗಲೂ ನನ್ನ ಕಣ್ಣಿಗೆ ಕಟ್ಟಿದಂತಿದೆ. ಈಗ ಯಾವನೊಬ್ಬ ಹಳ್ಳಿಯವನನ್ನು ನೋಡಿದರೂ

ಅವನೊಡನೆ ಮಾತನಾಡೋಣವೆನಿಸುತ್ತದೆ. ಯಾವದೋ ಕಾರಣಗಳಿಂದ ಕೈಗೆ ಕಟ್ಟು ಇರಬಹುದು; ಆದರೆ ಬಾಯಲ್ಲಿ ಒಂದೆರಡು ಉಪಚಾರದ ಮಾತುಗಳಾಡಿದರೆ ನಷ್ಟವೇನು ?

—ಜಿ. ಆರ್. ರಂಗಸ್ವಾಮಿ

## ಅಭ್ಯಸನಗಳು

ಪ್ರಶ್ನೆಗಳು :—

(೧) ನಿಂಗನು ಪಟ್ಟಣಕ್ಕೆ ಬಂದ ಕಾರಣವೇನು ?

(೨) ಅವನ ಮತ್ತು ಅವನ ಮನೆಯವರ ಉಪಜೀವನ ಹೇಗೆ ಸಾಗಿತ್ತು ?

(೩) ಹರಟೆಗಾರನು ನಿಂಗನ ಬಗೆಗಿರುವ ತನ್ನ ಸಹಾನುಭೂತಿಯನ್ನು ಯಾವ ಬಗೆಯಿಂದ ವ್ಯಕ್ತಗೊಳಿಸುವನು ?

ಭಾಷಾಭ್ಯಾಸ :—

(೧) ಪ್ರಶ್ನೋತ್ತರ ರೂಪದಲ್ಲಿಯೇ ನಿಂಗನ ಬಾಳಿನ ಚಿತ್ರವನ್ನು ಇಲ್ಲಿ ಚಿತ್ರಿಸಲಾಗಿದೆ. ಇದರಂತೆ ನಮ್ಮ ಸಾಹಿತ್ಯ ಪ್ರವೇಶದ ೨ನೆಯ ಭಾಗದಲ್ಲಿ 'ವೋಚಿ' ಎಂಬ ಕಥೆಯೂ ಪ್ರಶ್ನೋತ್ತರದಲ್ಲಿರುವದೆಂಬದನ್ನು ನೋಡಬೇಕು.

(೨) 'ಕೈಗೆ ಕಟ್ಟು ಇರಬಹುದು; ಆದರೆ ಬಾಯಲ್ಲಿ ಒಂದೆರಡು ಉಪಚಾರದ ಮಾತುಗಳಾಡಿದರೆ ನಷ್ಟವೇನು ?' ಈ ವಿಚಾರವನ್ನು ಸ್ಪಷ್ಟಗೊಳಿಸಿರಿ.

(೩) ಸಂಭಾಷಣೆಯನ್ನು ಬಿಟ್ಟು ಇದನ್ನು ಕತೆಯ ರೂಪದಲ್ಲಿ ಬರೆಯಿರಿ.

ಶಬ್ದವಿಚಾರ :—

ಹೊಟ್ಟೆಗೆ ಇರು, ಹೊಟ್ಟೆಯ ಮೇಲೆ ಕಾಲು ಕೊಡು, ಹೊಟ್ಟೆಯಲ್ಲಿ ಹಾಕಿಕೊ — ಇವುಗಳನ್ನು ಒಂದೊಂದು ವಾಕ್ಯದಲ್ಲಿ ಉಪಯೋಗಿಸಿರಿ.

ವಾಕ್ ಶಿಕ್ಷಣ :—

ನಿಂಗನೊಡನೆ ನಡೆದ ಸಂಭಾಷಣೆಯನ್ನು ಅಭಿನಯಿಸಿ ತೋರಿಸಿರಿ.

ಚರ್ಚೆ :—

ನಿಂಗನಂತಹ ಚಿತ್ರಗಳು ನಮ್ಮ ಸಮಾಜದಲ್ಲಿರುವವು.
ಈ ಬಗೆಯ ವೈಷಮ್ಯಕ್ಕೆ ಕಾರಣವೇನು ?

ಬರೆಹ :—

(೧) ನಿಂಗನ ಬಡತನದ ಚಿತ್ರವನ್ನು ಚಿತ್ರಿಸಿರಿ.

(೨) ಸಹಾನುಭೂತಿಯ ಮಹತ್ತ್ವದ ಬಗೆಗೆ ಒಂದು ವಾಕ್ಯವೃಂದವನ್ನು ಬರೆಯಿರಿ.

# ೯. ರತ್ನಮಣಿ.

[ ಕೋನನ್ ದಾಯಲ್ ಎಂಬುವನು ಸುಪ್ರಸಿದ್ಧ ಅಂಗ್ಲ ಪತ್ತೇದಾರಿ ಕಥೆಗಾರನು. ಇದು ಅವನದೊಂದು ಕಥೆಯ ಅನುವಾದವಾಗಿದೆ. ಇಲ್ಲಿ ಮಾನವನ ಸೂಕ್ಷ್ಮ ನಿರೀಕ್ಷಣ ಬುದ್ಧಿಯು ಅನೇಕ ಸಂಗತಿಗಳನ್ನು ಅರಿಯಲು ಹೇಗೆ ಸಹಾಯಮಾಡುವುದು, ಎಂಬುದನ್ನು ತಿಳಿಯಬೇಕು. ಪತ್ತೇದಾರಿ ಕಥೆ-ಕಾದಂಬರಿಗಳು ಅನೇಕರಿಗೆ ತುಂಬಾ ಸೇರುತ್ತವೆ. ಆದರೆ ಇವುಗಳಲ್ಲಿ ಕೋನನ್ ದಾಯಲ್‌ನ ಕತೆಗಳಂತೆ ಓದುಗರ ಮನಸ್ಸನ್ನು ವಿಶಾಲಗೊಳಿಸು ವಂತಹವು ತೀರ ಕಡಿಮೆ.]

ಪ್ರಕಾಶನ ಶಾಸ್ತ್ರೋಕ್ತ ತನಿಖೆಯ ರೀತಿಗಳನ್ನು ಮೊದಲಿನಿಂದ ಕೊನೆಯ ವರೆಗೂ ತಿಳಿದುಕೊಳ್ಳಬೇಕೆಂಬ ಆಸೆ ನನಗೆ ತುಂಬಾ ಇದೆ. ಆದರೆ ಯಾವಾಗ ಏನು ಕೆಲಸ ಬಂದರೂ, ಸಮಸ್ಯೆಗೆ ಸಿಕ್ಕಿಕೊಂಡರೂ, ಪ್ರಕಾಶನು ಅದನ್ನು ಸಮರ್ಪಕವಾಗಿ ಪೂರಯಿಸಿದ ನಂತರವೆ ನನಗೆ ಅರ್ಥವಾಗುತ್ತಿದ್ದಿತು. ಇದಕ್ಕೆ ಬುದ್ಧಿ ಮತ್ತು ಗ್ರಹಣ ಶಕ್ತಿಗಳ ಭೇದಭಾವವೇ ಕಾರಣ. ಪ್ರಕಾಶನ ಅದ್ವಿತೀಯ ವಾದ ಸೂಕ್ಷ್ಮ ದೃಷ್ಟಿಯೂ, ಮೆದುಳಿನಲ್ಲಿಯ ಬುದ್ಧಿಯೂ ಇತರರಿಗೆ ಸಾಮಾನ್ಯ ವಾಗಿ ಬರಲಾರವು. ಆದುದರಿಂದಲೆ ಅವನು ಅಷ್ಟು ಹೆಸರುವಾಸಿಯಾದ ಪತ್ತೆ ದಾರನಾದ. ಇಷ್ಟಾದರೂ ತನಗೆ ಏನೂ ತಿಳಿಯದೆಂದೂ, ಪ್ರತಿಮಾನವನಿಗೂ ಇರುವಂತೆಯೆ ತನಗೂ ಬುದ್ಧಿಯಿರುವದೆಂದೂ ಮೇಧಾವಿಗಳು ಹೇಳುವಂತೆ ಬಾಹ್ಯಾಡಂಬರಕ್ಕೆ ಒಳಗಾಗದೆ ಇರುತ್ತಿದ್ದನೆ ವಿನಾ ತನ್ನ ಹೆಸರನ್ನು ಹೊಗಳಿದ ರಾಗಲಿ, ಕೊಂಡಾಡಿದರಾಗಲಿ, ಅವನಿಗೆ ಸ್ವಲ್ಪವೂ ಒಗ್ಗುತ್ತಿರಲಿಲ್ಲ. ಆತನ ಭಾವಮೈದುನನೂ, ಬಾಲ್ಯಮಿತ್ರನೂ ನಾನಾಗಿರುವದರಿಂದ, ಅವನ ರೀತಿಯನ್ನೂ ಶಾಸ್ತ್ರವನ್ನೂ ಅರಿಯಲು ನನಗೆ ತುಂಬಾ ಅನುಕೂಲ. ತಾನಾಗಿ ತನ್ನ ಹೆಸರನ್ನು ಹೊರಗೆಡಹಲು, ಪ್ರಕಾಶನು ಇಷ್ಟಪಡುವದಿಲ್ಲವಾದುದರಿಂದ, ಸಮಯ ದೊರೆ ತಾಗಲೆಲ್ಲ, ನಾನೆ ಅವನ ಕಾರ್ಯಗಳನ್ನು ಬರೆದು ಇಡುತ್ತಿದ್ದೇನೆ.

ಹೋದ ವರ್ಷ ಕ್ರಿಸ್‌ಮಸ್ ಹಬ್ಬದ ದಿವಸ ರಜಾ ಇದ್ದುದರಿಂದ, ಬೆಳಗಿನ ೭ ಗಂಟೆಗೆ ಪ್ರಕಾಶನ ಮನೆಗೆ ಹೋದೆ. ನನ್ನ ಭಾವ ತನ್ನ ಕೋಣೆಯಲ್ಲಿ ಸಿಗರೇಟು ಸೇದುತ್ತಾ, ಕಾಲು ಚಾಚಿಕೊಂಡು ಸೋಫಾದ ಮೇಲೆ ಕುಳಿತಿದ್ದ. ಅವನ ಎದುರಿಗೆ ಒಂದು ಚಿಕ್ಕ ಮೇಜು; ಅದರ ಮೇಲೆ ಒಂದು ಹಳೆಯ ಟೋಪಿ. ಪಕ್ಕದಲ್ಲಿ ಭೂತ ಕನ್ನಡಿ, ಸಿಗರೇಟು ಪೆಟ್ಟಿಗೆ ಇತ್ಯಾದಿ ಸಾಮಾನುಗಳು ಬಿದ್ದಿದ್ದುವು. ಟೋಪಿಯನ್ನು ಮೇಜಿನ ಮೇಲೆ ಇಟ್ಟಿದ್ದ ರೀತಿಯನ್ನು ನೋಡಿದರೆ 'ಅದು ಪ್ರಕಾಶನ ಪರೀಕ್ಷೆಗೆ ಸಿಕ್ಕಿದೆ' ಎಂದು ಕೂಡಲೆ ನನಗೆ ಭಾಸವಾಯಿತು. "ಏನಪ್ಪಾ ಬೆಳಗಿನಲ್ಲಿ ಏಳುತ್ತಲೂ ಯಾವುದೋ ಹರಕಲು ಟೋಪಿಯನ್ನು ಮುಂದಿಟ್ಟುಕೊಂಡು ಪರಿಶೋಧನೆ ಮಾಡ್ತು

ತ್ತಿರುವಂತೆ ಕಾಣುತ್ತದೆ ?" ಎಂದು, ಅವನ ಪಕ್ಕದಲ್ಲಿ ಕುಳಿತುಕೊಂಡೆ. ಅವನು ನಗುತ್ತಾ "ಪ್ರಭೂ, ಈ ಟೋಪಿಯೂ ಒಂದು ಚೆನ್ನಾಗಿ ಬಲಿತಿದ್ದ ಕೋಳಿಯೂ ನಮ್ಮ ಡ್ರೈವರ ತಿಮ್ಮನಿಗೆ ಪೇಟೆಯಲ್ಲಿ ಸಿಕ್ಕಿವೆ. ಅವನು ಅವೆರಡನ್ನೂ ನನ್ನ ಹತ್ತಿರಕ್ಕೆ ತೆಗೆದುಕೊಂಡು ಬಂದ. ಆ ಕೋಳಿಯ ಕಾಲಿಗೆ ನೋಡು, ಈ ಚೀಟಿಯನ್ನು ಕಟ್ಟಿತ್ತು." ಎಂದು, ಒಂದು ಸಣ್ಣ ರಟ್ಟಿನ ತುಂಡನ್ನು ಮೇಜಿನಿಂದ ತೆಗೆದು ನನ್ನ ಕೈಗೆ ಕೊಟ್ಟ. ಅದರಲ್ಲಿ "ನಂ. ೨೪ ಡೇವಿಡ್ ಲೋಕಸಾಥನ್" ಎಂದು ಬರೆದಿತ್ತು. ನಾನು ಅದನ್ನು ಎರಡು ಬಾರಿ ನೋಡಿ, ಪುನಃ ಮೇಜಿನಮೇಲೆ ಬೀಸಾಡಿದೆ. ಅನಂತರ ನನ್ನ "ಭಾವನು ಕೋಳಿಯನ್ನು ಬಹುಶಃ ಆತನು ಕ್ರಿಸ್‌ಮಸ್ ಹಬ್ಬಕ್ಕಾಗಿ ತೆಗೆದುಕೊಂಡು ಹೋಗುತ್ತಿದ್ದನೆಂದು ತೋರುತ್ತದೆ. ದಾರಿಯಲ್ಲಿ ಯಾರೋ ಕೆಲವು ಜನ ಹುಡುಗರು ಗಲಾಟೆ ಮಾಡುತ್ತಾ, ಈ ಕೋಳಿಯನ್ನು ತೆಗೆದುಕೊಂಡು, ಹೋಗುತ್ತಿದ್ದವನ ಮೇಲೆ ಬಿದ್ದರಂತೆ. ಅವನು ಹುಡುಗರನ್ನು ಹೊಡೆಯಬೇಕೆಂದು ಕೈಯಲ್ಲಿದ್ದ ಬೆತ್ತವನ್ನು ಎತ್ತಲು ಹಿಂದೆ ಇದ್ದ ಒಂದು ಅಂಗಡಿಯ ಕಿಟಕಿಯ ಗಾಜು ಒಡೆದುಹೋಯಿತು. ಅಷ್ಟು ಹೊತ್ತಿಗೆ ಕಾರು ಬಿಟ್ಟುಕೊಂಡು ಹೋಗುತ್ತಿದ್ದ ತಿಮ್ಮನು, ಗಲಾಟೆ ಏನೆಂಬುದನ್ನು ವಿಚಾರಿಸಬೇಕೆಂದು ಅವರ ಹತ್ತಿರಕಾರನ್ನು ನಿಲ್ಲಿಸಿದ. ಇವನನ್ನು ನೋಡಿ ಆ ಹುಡುಗರು, ಎಲ್ಲಿಯೋ ಪೋಲೀಸಿನವನಿರಬೇಕೆಂದು ಓಡಿದರು. ಕೋಳಿಯನ್ನು ಇಟ್ಟುಕೊಂಡಿದ್ದ ಮನುಷ್ಯನು ಕೂಡ, ಅಂಗಡಿಯ ಗಾಜು ಒಡೆದದ್ದಕ್ಕೆ ಇವನೇನು ಮಾಡುವನೋ ಎಂಬ ಭಯದಿಂದ ಓಡಿಹೋಗುವ ಅವಸರದಲ್ಲಿರುವಾಗ, ಕೈಯಲ್ಲಿದ್ದ ಕೋಳಿಯೂ, ತಲೆಯ ಮೇಲಿದ್ದ ಟೋಪಿಯೂ ಕೆಳಕ್ಕೆ ಬಿದ್ದುಹೋಯಿತು. ತಿಮ್ಮನು ಕೋಳಿಯನ್ನೂ ಟೋಪಿಯನ್ನೂ ಮನೆಗೆ ತಂದ. ನಾನು ಕೋಳಿಯನ್ನು ಅವನಿಗೇ ಕೊಟ್ಟು ಟೋಪಿಯನ್ನು ಮೇಜಿನ ಮೇಲಿಟ್ಟೆ. ಯಾವ ವಸ್ತುವನ್ನೇ ಆಗಲಿ ಸರಿಯಾಗಿ ನೋಡಿದರೆ, ಎಷ್ಟು ವಿಷಯಗಳು ಕಣ್ಣಿಗೆ ಬೀಳುತ್ತವೆ ಎನ್ನುವುದನ್ನು, ಈ ಟೋಪಿಯ ದೃಷ್ಟಾಂತದಿಂದ ತಿಳಿದುಕೊಳ್ಳಬಹುದು. ಪ್ರಭೂ, ನೀನೂ ನೋಡು, ಈ ಟೋಪಿಯಿಂದ ಆ ಮನುಷ್ಯನ ವಿಷಯಗಳೇನು ತಿಳಿಯುತ್ತವೆ?" ಎಂದು ಪ್ರಕಾಶನು ಟೋಪಿಯು ಸಿಕ್ಕಿದ ಬಗೆಯನ್ನು ಹೇಳಿ, ಅದರ ವಿಷಯವಾಗಿ ನನ್ನನ್ನು ಪ್ರಶ್ನಿಸಿದ. ನಾನು ಟೋಪಿಯನ್ನು ತಿರುಗಿಸಿ, ತಿರುಗಿಸಿ ನೋಡಿದೆ. ಅದು ಮಹಮ್ಮದೀಯರು ಹಾಕಿಕೊಳ್ಳುವ ಫೇಜ (Fez) ಟೋಪಿ. ಹಳೆಯದೇ ಎನ್ನಬಹುದು. ತುಂಬಾ ಕೊಳೆಯಾಗಿತ್ತು. ಎಷ್ಟು ಹೊತ್ತು ನೋಡಿದರೂ, ಹೆಚ್ಚಿಗೆ ಏನು ಹೇಳಲೂ ನನಗೆ ತೋರಲಿಲ್ಲ. ತಿಳಿದುದನ್ನು ಪ್ರಕಾಶನಿಗೆ ಹೇಳಿದೆನು. ಅವನು ಸ್ವಲ್ಪ ಹೊತ್ತು ಯೋಚಿಸಿ "ಪ್ರಭೂ, ನೀನು ಹೇಳಿದುದು ಸಾಲದು. ಅದನ್ನು ಹಾಕಿಕೊಳ್ಳುವ ಮನುಷ್ಯನ ವಿಷಯವಾಗಿ ಕೆಲವು ಸಂಗತಿಗಳನ್ನು ಹೇಳಬಹುದು; ನೋಡು. ಇದನ್ನು ಉಪಯೋಗಿಸುವ ಮನುಷ್ಯನಿಗೆ ಸುಮಾರು ೩೦-೩೫ ವರ್ಷಗಳಾಗಿರಬಹುದು. ಈಗ ೪-೫ ದಿವಸಗಳ ಹಿಂದೆ ಕ್ರಾಪ್ ಕತ್ತರಿಸಿಕೊಂಡಿದ್ದಾನೆ. ಬುದ್ಧಿಯಲ್ಲಿ ಚುರುಕಾ

ಗಿದ್ದರೂ, ಈಗ ಬೇಜಾರಿನಿಂದಲೊ ಅಥವಾ ಜುಗುಪ್ಸೆಯಿಂದಲೊ ಸ್ವಲ್ಪ ಸೋಮಾರಿಯಾಗಿದ್ದಾನೆ. ಆದರೆ ಆತ್ಮಗೌರವವು ಸಂಪೂರ್ಣವಾಗಿದೆ. ಒಳ್ಳೆ ಆರೋಗ್ಯದ ದೇಹವುಳ್ಳವನು. ಈಗ ೪-೫ ವರ್ಷಗಳ ಹಿಂದೆ ಒಳ್ಳೆಯ ಸ್ಥಿತಿಯಲ್ಲಿದ್ದವನು. ಸದ್ಯ ಹಣವಿಲ್ಲದೆ ತಾಪತ್ರಯದಲ್ಲಿದ್ದಾನೆ" ಎಂದು ಉದ್ದಕ್ಕೆ ತರ್ಕವನ್ನು ಮಾಡುತ್ತಾ ಉಪನ್ಯಾಸವನ್ನು ಕೊಡುತ್ತಿರುವಂತೆ ಹೇಳಿದ. ನನಗೆ ಆಶ್ಚರ್ಯವುಂಟಾಯಿತು. ಒಂದು ಹಳೆಯ ಟೋಪಿಯನ್ನು ನೋಡಿದ ಮಾತ್ರದಿಂದಲೆ ಇವೆಲ್ಲಾ ಹೇಗೆ ತಿಳಿಯುತ್ತವೆ ಎಂದು ವಿಸ್ಮಿತನಾಗಿ, "ಪ್ರಕಾಶ!" ಎಂದೆ. ಯೋಚನೆಯಲ್ಲಿಯೇ ಮಗ್ನನಾಗಿದ್ದವನು ನನ್ನ ಕಡೆಗೆ ತಿರುಗಿ "ಅವನ ಹೆಂಡತಿ ಅವನನ್ನು ಅಷ್ಟಾಗಿ ಪ್ರೀತಿಸುತ್ತಿಲ್ಲ ಮತ್ತು...." ಎಂದು ಹೇಳುತ್ತಿರುವಷ್ಟರಲ್ಲಿ "ಸರಿಹೋಯ್ತು, ಟೋಪಿಯಿಂದ ಅವನ ಸಂಸಾರಾನೂ ತಿಳಿದುಕೊಂಡುಬಿಟ್ಟೆಯಾ?"

"ಅದಿರಲಿ, ಈಗ ನೀನು ಹೇಳಿದುದಕ್ಕೆ ಆಧಾರಗಳು?" ಎಂದು ಒಂದು ಸಿಗರೇಟನ್ನು ಹಚ್ಚಿದೆ. ಪ್ರಕಾಶನು ಮೇಜಿನ ಮೇಲೆ ಇದ್ದ ಭೂತ ಕನ್ನಡಿಯಿಂದ ಟೋಪಿಯನ್ನು ನೋಡುತ್ತಾ, "ಇಲ್ಲಿ ನೋಡು, ಪ್ರಭೂ, ಒಳಗೆ ಹೊಸದಾಗಿ ಕತ್ತರಿಸಿದ ಸಣ್ಣ ಸಣ್ಣ ಕೂದಲು ಅಂಟಿಕೊಂಡು, ಒಳ್ಳೇ ಅತ್ತರ ವಾಸನೆ ಬರುತ್ತಾ ಇದೆ. ಇದಕ್ಕೆ ಕಾರಣ ೩-೪ ದಿನಗಳ ಹಿಂದೆ ಕ್ರಾಪ್ ಕತ್ತರಿಸಿಕೊಂಡಾಗ, ಸೆಲೂನಿನವನು ವ್ಯಾಸ್‌ಲೈನ್ ಹಾಕಿ ಬಾಚಿದ್ದುದು. ಬುದ್ಧಿಯಲ್ಲಿ ಚುರುಕು ಎನ್ನುವದಕ್ಕೆ, ಈ ಟೋಪಿ ಸ್ವಲ್ಪ ದೊಡ್ಡದು. ಅವನು ಸೋಮಾರಿ ಎನ್ನಲು ಟೋಪಿಯ ಕಡೆಗೆ ಲಕ್ಷ್ಯ ಕೊಡದೆ ಬಿಟ್ಟಿರುವುದೊಂದೇ ಸಾಕು. ಇನ್ನು ೪-೫ ವರ್ಷಗಳ ಹಿಂದೆ ಹಣವಂತನಾಗಿದ್ದನೆನ್ನುವುದು, ಈ ಟೋಪಿಯನ್ನು ನೋಡುತ್ತಲೆ ಹೇಳಬಹುದು. ಟೋಪಿಯ ಒಳಗಡೆ ಕೊಂಡ ತಾರೀಖೂ ಅಂಗಡಿಯ ಹೆಸರೂ ಇದೆ. ಅಂಗಡಿಯು ಬಹಳ ಉತ್ತಮವಾದದ್ದು. ಟೋಪಿಯು ಸಹ ಸಾಧಾರಣವಾದುದಲ್ಲ. ಸುಮಾರು ೮-೧೦ ರೂಪಾಯಿಗಳದಾಗಬಹುದು. ಈಗ ನಾಲ್ಕೈದು ವರ್ಷಗಳ ಹಿಂದೆ ಇಷ್ಟು ಬೆಲೆ ಬಾಳುವ ಟೋಪಿಯನ್ನು ಕೊಳ್ಳಬೇಕಾದರೆ ಅವನ ಆರ್ಥಿಕ ಸ್ಥಿತಿ ಚೆನ್ನಾಗಿದ್ದೇ ಇರಬೇಕು. ಇಷ್ಟು ವರ್ಷಗಳಾಗಿ ಅದು ಕೆಟ್ಟಿದ್ದರೂ ಈಗಲೂ ಅದನ್ನೇ ಧರಿಸಬೇಕಾಗಿರುವುದಕ್ಕೆ ಅವನ ಈಗಿನ ಬಡತನವೇ ಕಾರಣ. ಆತ್ಮಗೌರವವಿದೆ ಎನ್ನಲಿಕ್ಕೂ ಇಲ್ಲಿ ನೋಡು, ಟೋಪಿಯು ಒಂದು ಕಡೆ ಸ್ವಲ್ಪ ಹರಿದು ಬಿಳಿಯ ಬಣ್ಣ ಕಾಣುತ್ತದೆ; ಅದು ಕಾಣದೆ ಇರಲಿ ಎಂದು ಕೆಂಪು ಮಸಿಯನ್ನು ಬಳಿದಿದ್ದಾನೆ. ಅವನು ಟೋಪಿಯನ್ನು ನಿತ್ಯವೂ ಒರಸಿ ಶುಭ್ರವಾಗಿ ಇಟ್ಟುಕೊಳ್ಳದೆ ಹೋದರೆ, ಅವನ ಹೆಂಡತಿಯಾದರೂ ನಿತ್ಯವೂ ಆ ಕೆಲಸವನ್ನು ಮಾಡಬಹುದಾಗಿತ್ತು. ಮಾಡದೆ ಇರುವುದಕ್ಕೆ ಅವಳ ಅಲಕ್ಷ್ಯ ಮತ್ತು ಪ್ರೀತಿ ಇಲ್ಲದುದೇ ಕಾರಣ. ಪ್ರಭೂ, ಒಂದು ವೇಳೆ ನೀನು ಕೊಳಕು ಬಟ್ಟೆ ಹಾಕಿಕೊಂಡು ಹೊರಗೆ ಹೊರಟಾಗ ನಿನ್ನ ಹೆಂಡತಿಯೂ ಸುಮ್ಮನೆ ಇದ್ದರೆ ಆಗ ಈ ಮಾತನ್ನು ನಿನಗೂ

ಹೇಳಬೇಕಾಗುತ್ತೆ" ಎಂದ. ಅವನ ಮಾತುಗಳನ್ನು ಕೇಳಿ ನನಗೆ ಏನನ್ನೂ ಹೇಳಲಾರದಂತೆ ಆಯಿತು.

ಅಷ್ಟರಲ್ಲಿ ತಿಮ್ಮನು ಗಾಬರಿಯಿಂದ ನಾವಿದ್ದ ಕೋಣೆಗೆ ಓಡಿಬಂದು, "ರಾಯ್ರೆ.... ರಾಯ್ರೆ.... ಕೋಳಿ" ಎಂದ. ಪ್ರಕಾಶನು "ಏನೋ? ಕೋಳಿ ಕತ್ತರಿಸಿದ ಮೇಲೆ ಜೀವ ಬಂದು ಹಾರಿಹೋಯ್ತೇನೊ?" ಎಂದ. ಅವನು "ಇಲ್ಲರಾಯ್ರೆ, ಕೋಳಿ ನನ್ನ ಹೆಂಡತಿ ಕತ್ತರಿಸಿದ್ಲು; ಒಳಗೆ ನೋಡಿ" ಎನ್ನುತ್ತಾ ತನ್ನ ಕೈಯಲ್ಲಿದ್ದ ಒಂದು ಮಣಿಯನ್ನು ತೋರಿಸಿದ. ಅದು ಬಹಳ ಪ್ರಕಾಶಮಾನವಾಗಿತ್ತು. ನನ್ನ ಭಾವನು ತಕ್ಷಣ ಅದನ್ನು ಅವನ ಕೈಯಿಂದ ತೆಗೆದುಕೊಂಡು, ಚೆನ್ನಾಗಿ ನೋಡಿ "ಓಹೋ! ಇದು ಸಾಮಾನ್ಯ ಕೋಳಿಯಲ್ಲ. ತಿಮ್ಮ, ನೀ ಹೋಗು, ಮಣಿ ಇಲ್ಲೇ ಇರಲಿ" ಎಂದು ನನ್ನ ಹತ್ತಿರ ಬಂದು "ಪ್ರಭೂ, ನೋಡಿದೆಯಾ? ಈ ಮಣಿ ನಮ್ಮ ಕೈಗೆ ಸಿಕ್ಕಿದ ಬಗೆ. ಇದರಲ್ಲಿ ಏನೋ ಸ್ವಾರಸ್ಯವಿದ್ದೇ ಇರಬೇಕು" ಎಂದು ಹೇಳುತ್ತಾ ಮಣಿಯನ್ನು ಮೇಜಿನ ಮೇಲಿಟ್ಟು, ತನ್ನ ಬೀರುವಿನ ಬಾಗಿಲನ್ನು ತೆಗೆದು ವೃತ್ತಪತ್ರಿಕೆಗಳನ್ನು ಹುಡುಕಲಾರಂಭಿಸಿದನು. ನಾನು ಉತ್ಸುಕತೆಯಿಂದ ಮಣಿಯನ್ನು ತೆಗೆದುಕೊಂಡೆ. ಒಳ್ಳೆಯ ಜಾತಿಗೆ ಸೇರಿದುದೇ ಎಂದು ನನಗೆ ತೋರಿತು. ಆದರೆ ಅದೇನು ವಜ್ರವೇ ವೈಡೂರ್ಯವೇ ಎನ್ನುವುದು ಮಾತ್ರ ತಿಳಿಯಲಿಲ್ಲ. "ಪ್ರಕಾಶ, ಇದೇನು ವಜ್ರವೇ?" ಎಂದೆ. ಅವನು ಒಂದು ಹಳೆಯ ಪತ್ರಿಕೆಯನ್ನು ನೋಡಿ, "ಪ್ರಭೂ, ಇದು ಸಾಮಾನ್ಯವಾದುದಲ್ಲ. ಸುಮಾರು ೫೦, ೬೦ ಸಾವಿರ ರೂಪಾಯಿಗಳ ಬೆಲೆಯುಳ್ಳದ್ದು. ಇದರ ಹೆಸರು 'ರತ್ನಮಣಿ'. ಸ್ವಲ್ಪ ಹೆಚ್ಚುಕಡಿಮೆ 'ಕೊಹಿನೂರ್' ಎಂಬ ವಜ್ರದಷ್ಟೇ ಹೆಸರುವಾಸಿಯಾದುದು. ಪ್ರಪಂಚದಲ್ಲಿ ಎಲ್ಲೋ ೪-೫ ಇಂತಹ ಮಣಿಗಳಿರಬಹುದು. ಇದನ್ನು .... ಪುರದ ಮಹಾರಾಣಿಯವರು ಪರದೇಶಕ್ಕೆ ಹೋಗಿದ್ದಾಗ ತೆಗೆದುಕೊಂಡರಂತೆ. ಇದು ಇದ್ದ ಕಡೆಗಳಲ್ಲೆಲ್ಲಾ ಕೊಲೆ, ದರೋಡೆಗಳಿಗೆ ಲೆಕ್ಕವೇ ಇರುವುದಿಲ್ಲ. ಈ ಬೆಲೆ ಬಾಳುವ ಆಭರಣಗಳ ಗತಿಯೇ ಹೀಗೆ. ಎಷ್ಟು ರಕ್ತಪಾನ ಮಾಡಿದರೂ ತೃಪ್ತಿಯಾಗುವುದಿಲ್ಲ." ಎಂದು ಪ್ರಕಾಶನು ರತ್ನಮಣಿಯ ಚರಿತ್ರೆಯನ್ನು ಸೂಕ್ಷ್ಮವಾಗಿ ಹೇಳಿ, "ಆ! ಇಲ್ಲಿ ನೋಡಯ್ಯಾ" ಎಂದು ಒಂದು ವೃತ್ತಪತ್ರಿಕೆಯನ್ನು ನನ್ನ ಮುಂದೆ ಎಸೆದ. ಪತ್ರಿಕೆ ಕೇವಲ ಒಂದು ವಾರಕ್ಕೆ ಹಿಂದಿನದು. ಅದರಲ್ಲಿ ಒಂದು ಕಡೆ ಈ ರೀತಿ ಇತ್ತು.

"ಕಳವಾಗಿದೆ. ಪತ್ತೆ ಹಚ್ಚಿಕೊಟ್ಟವರಿಗೆ ೨೦೦ ರೂ. ಗಳ ಬಹುಮಾನ. ನಿನ್ನೆಯ ರಾತ್ರಿ ೯ ಘಂಟೆಯ ಹೊತ್ತಿನಲ್ಲಿ ........ ಪುರದ ಮಹಾರಾಣಿಯವರ 'ರತ್ನಮಣಿಯು' ಹಿಂದೂ ಹೋಟೆಲಿನಲ್ಲಿ ಕಳವಾಗಿಹೋಗಿದೆ. ಮಣಿಯು ಸಿಕ್ಕಿದರೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಬಹುಮಾನ ಹೊಂದಬಹುದು.

—ಪ್ರೊಪ್ರಾಯಿಟರ್ ಹಿಂದೂ ಹೋಟೆಲ್"

ನಾನು ಓದಿ ಮುಗಿಸುವಷ್ಟರಲ್ಲಿ, ಪ್ರಕಾಶನು ಪುನಃ ಇನ್ನೊಂದು ಪತ್ರಿಕೆಯನ್ನು ನನ್ನ ಕೈಗೆ ಕೊಟ್ಟ. ಅದರಲ್ಲಿ:

"ನಿನ್ನೆ 'ರತ್ನಮಣಿ' ಯ ಕಳವಿನ ಸಂಬಂಧವಾಗಿ ಅರ್ಮುಗಂ ಎಂಬ ವಿದ್ಯುಚ್ಛಕ್ತಿ ಕೆಲಸಗಾರನ ಮೇಲೆ ಅನುಮಾನ ಬಂದು, ಪೋಲೀಸಿನವರು ಅವನನ್ನು ಬಂಧಿಸಿರುತ್ತಾರೆ. ಮಹಾರಾಣಿಯವರು 'ರತ್ನಮಣಿ'ಯನ್ನು ತಾವು ಮಲಗುವ ಕೋಣೆಯಲ್ಲಿಟ್ಟು, ಸ್ನಾನಕ್ಕೆಂದು ಬೇರೆ ಕೊಠಡಿಗೆ ಹೋಗಿದ್ದಾಗ, ಅರ್ಮುಗಂ ವಿದ್ಯುಚ್ಛಕ್ತಿ ದೀಪವನ್ನು ಸರಿ ಮಾಡಲು ಆ ಕೋಣೆಗೆ ಹೋಗಿದ್ದನಂತೆ. ೫ ನಿಮಿಷಗಳ ನಂತರ ಮಹಾರಾಣಿಯವರು ಹೋಗಿ ನೋಡಲು, ರತ್ನಮಣಿಯು ಮಾಯವಾಗಿ ಪೆಟ್ಟಿಗೆ ಮಾತ್ರ ಕೆಳಗೆ ಬಿದ್ದಿತ್ತು. ಕೂಡಲೆ ಪೋಲೀಸಿನವರಿಗೆ ವರ್ತಮಾನ ತಿಳಿಸಿದರು. ಅರ್ಮುಗಂನನ್ನು ಬಂಧಿಸಿ ವಿಚಾರಿಸಲು, ಆತನು ತಪ್ಪಿತಸ್ಥನಲ್ಲವೆಂದೂ ಮಣಿಯ ವಿಷಯವಾಗಿ ತನಗೇನೂ ತಿಳಿಯದೆಂದೂ ತಾನು ೮–೫೦ ಗಂಟೆಯ ಹೊತ್ತಿನಲ್ಲಿ, ಹೋಟೇಲು ಮಾಲಿಕರ ಅಪ್ಪಣೆಯ ಮೇರೆಗೆ ದೀಪವನ್ನು ಸರಿಮಾಡಿ ಕೆಳಗೆ ಬಂದೆನೆಂದೂ, ಮೆಟ್ಟಲಿನ ಹತ್ತಿರ ರಾಣಿಯವರ ಸೇವಕಿಯು ಸಿಕ್ಕಿದಳೆಂದೂ ತಿಳಿಸಿರುತ್ತಾನೆ. ಅರ್ಮುಗಂ ಹಿಂದೆ ಒಂದು ಬಾರಿ ಯಾವುದೋ ಕಳವಿಗಾಗಿ ಶಿಕ್ಷೆ ಹೊಂದಿದವನಾದುದರಿಂದ, ಪೋಲೀಸಿನವರು ಅವನೇ ಈ ಕಳ್ಳತನ ಮಾಡಿರುವನೆಂದು ದೃಢವಾಗಿ ನಂಬಿ ಆತನನ್ನು ಲಾಕಪ್ಪಿನಲ್ಲಿಟ್ಟು ಮಣಿಯು ಎಲ್ಲಿದೆ ಎಂಬುದನ್ನು ಹುಡುಕುತ್ತಿದ್ದಾರೆ. ಮಣಿಯು ಮಾತ್ರ ಅವನ ಹತ್ತಿರವಾಗಲಿ ಆತನ ಮನೆಯಲ್ಲಾಗಲಿ ಇನ್ನೂ ಸಿಕ್ಕಿಲ್ಲ" ಎಂದು, ನಡೆದ ಸಂಗತಿಯೆಲ್ಲಾ ವಿಶದವಾಗಿತ್ತು. ಎರಡು ಮೂರು ವಾರಗಳಿಂದ ಪತ್ರಿಕೆಗಳನ್ನು ನಾನು ನೋಡಿರಲಿಲ್ಲ. ಬಹು ಬೆಲೆಯುಳ್ಳ ರತ್ನಮಣಿಯು ಕಳವಿನ ವಿಚಾರ ನನಗೆ ಆಗಲೇ ತಿಳಿದದ್ದು. ಪ್ರಕಾಶನು ಮೇಜಿನ ಮೇಲಿದ್ದ ಟೆಲಿಫೋನಿನ ಮುಖಾಂತರ ಹಿಂದೂ ಹೋಟೇಲಿನ ಯಜಮಾನನಿಗೂ ಮಹಾರಾಣಿಯವರಿಗೂ ರತ್ನಮಣಿಯು ಸಿಕ್ಕಿರುವುದೆಂದೂ, ಅದನ್ನು ಕಳುಹಿಸಿ ಕೊಡಲಾಗುವುದೆಂದೂ ತಿಳಿಸಿದ.

ನಾನು ಸ್ವಲ್ಪ ಹೊತ್ತು ಯೋಚಿಸಿ " ಪ್ರಕಾಶ, ರತ್ನಮಣಿ ಹಿಂದೂ ಹೋಟೇಲಿನಲ್ಲಿ ಕಳವಾಗಿದ್ದು, ಈ ಕೋಳಿಯ ಹೊಟ್ಟೆಯಲ್ಲಿ ಹೇಗೆ ಬಂದಿತು ? ಈ ಡೇವಿಡ್ ಲೋಕನಾಥನ್ ಎಂಬವನೇ ಕದ್ದು, ಯಾರಿಗೂ ತಿಳಿಯದಿರಲೆಂದು ಕೋಳಿಯಿಂದ ನುಂಗಿಸಿರಬಹುದೇ ? " ಎಂದು ಪ್ರಶ್ನಿಸಿದೆ. ಅವನು " ಪ್ರಭೂ, ನನಗೆ ಈ ಡೇವಿಡ್ ಎಂಬವನ ಮೇಲೆ ಸ್ವಲ್ಪವೂ ಸಂಶಯವಿಲ್ಲ. ಯಾಕೆಂದರೆ ತಾನು ಹೊತ್ತಿರುವ ಕೋಳಿಯು ಅಷ್ಟು ಬೆಲೆ ಬಾಳುವಂತಹದು ಎಂದು ಅವನಿಗೆ ತಿಳಿದಿದ್ದರೆ, ಅದನ್ನೆಂದಿಗೂ ತನ್ನ ಪ್ರಾಣ ಹೋಗುವಂತಿದ್ದರೂ ಕೆಳಗೆ ಬಿಟ್ಟು ಹೋಗುತ್ತಿರಲಿಲ್ಲ. ಇದು ಬಹಳ ಸ್ವಾರಸ್ಯವಾಗಿದೆ. ಇದನ್ನು ತಿಳಿಯಲೇಬೇಕು. ಹೇಗಾದರೂ ಆಗಲಿ, ಡೇವಿಡ್ ಎಂಬುವನನ್ನು ಮೊದಲು ಪತ್ತೆ ಮಾಡಿ, ಅನಂತರ ಎಲ್ಲವನ್ನೂ ತಿಳಿದು

ಕೊಳ್ಳೋಣ. ನೀನು ಮನೆಗೆ ಹೋಗುವಾಗ ಈ ಜಾಹೀರಾತನ್ನು 'ತಾಯಿನಾಡು' ಪೇಪರಿಗೆ ಕೊಟ್ಟು ಹೋಗು" ಎಂದು ಒಂದು ಚೀಟಿಯಲ್ಲಿ ಹೀಗೆ ಬರೆದುಕೊಟ್ಟ.

"'ಡೇವಿಡ್ ಲೋಕನಾಥನ್‌ರವರಿಗೆ' ಎಂದು ಬರೆದಿದ್ದ ಚೀಟಿಯೊಡನೆ ಒಂದು ಕೋಳಿಯೂ, ಒಂದು ಟೋಪಿಯೂ ಸಿಕ್ಕಿದೆ. ಮಾಲಿಕರು ಬಂದು ಸಾಯಂಕಾಲ ೯ ಗಂಟೆಯ ಹೊತ್ತಿಗೆ ತೆಗೆದುಕೊಂಡು ಹೋಗಬಹುದು.

ಪ್ರಭಾಕರ್,

—ಅಡ್ವೋಕೇಟ್, ಮಲ್ಲೇಶ್ವರಮ್."

ಜಾಹೀರಾತನ್ನು ನಾನೊಂದು ಬಾರಿ ಓದಿ "ಪ್ರಕಾಶ, ಒಂದು ವೇಳೆ ಅವನು ಜಾಹೀರಾತನ್ನು ನೋಡದಿದ್ದರೆ ?" ಎಂದೆ. ಅದಕ್ಕೆ ಅವನು "ನೋಡಿಯೆ ನೋಡುತ್ತಾನೆ. ಈಗಿನ ಕಾಲದಲ್ಲಿ ಏನು ಕಳೆದುಹೋದರೂ ಪತ್ರಿಕೆಗಳಲ್ಲಿ ನೋಡುವುದು ಪದ್ಧತಿ. ಅದೂ ಅಲ್ಲದೆ ಹಬ್ಬಕ್ಕೆಂದು ಕೂಡಿಟ್ಟ ಹಣದಿಂದ ತಂದಿದ್ದ ಒಳ್ಳೆಯ ಜಾತಿಯ ಕೋಳಿಯು ಕಳೆದುಹೋಗಿರುವಾಗ, ಅವನೆಂದಿಗೂ ಪತ್ರಿಕೆಗಳನ್ನೂ ಪ್ರಕಟನೆಗಳನ್ನೂ ನೋಡದೆ ಇರುವುದಿಲ್ಲ" ಎಂದು ತಿಮ್ಮನನ್ನು ಕೂಗಿ ೨ ರೂಪಾಯಿಗಳನ್ನು ಕೊಟ್ಟು, ಒಂದು ಒಳ್ಳೆಯ ಜಾತಿಯ ಕೋಳಿಯನ್ನು ತರುವಂತೆ ಹೇಳಿ ಕಳುಹಿಸಿದ. ನಾನು ಆಶ್ಚರ್ಯದಿಂದ ಅವನನ್ನು ನೋಡಿದೆ. ನಗುತ್ತಾ ಪ್ರಕಾಶನು "ತಿನ್ನುವುದಕ್ಕಲ್ಲಪ್ಪಾ; ಡೇವಿಡ್ ಬಂದರೆ ಕೊಡುವುದಕ್ಕೆ" ಎಂದ. ನಾನು ರಾತ್ರಿ ೯ ಗಂಟೆಗೆ ಬರುವೆನೆಂದು ಹೇಳಿ ಹೊರಟೆ. ದಾರಿಯಲ್ಲಿ ಹಾಗೆಯೆ ಜಾಹೀರಾತನ್ನು ಪತ್ರಿಕೆಗೆ ಕೊಟ್ಟು, ಮನೆಗೆ ಹಿಂದಿರುಗುವಷ್ಟು ಹೊತ್ತಿಗೆ ಮಧ್ಯಾಹ್ನವಾಗಿತ್ತು.

ರಾತ್ರಿ ಊಟಮಾಡಿಕೊಂಡು ಪ್ರಕಾಶನ ಮನೆಗೆ ಹೋದೆ. ಅವನು ವರಂಡಾದಲ್ಲಿ ಕುಳಿತುಕೊಂಡು, ನನ್ನ ತಂಗಿಯೊಡನೆ ಮಾತನಾಡುತ್ತಿದ್ದ. "ಏನಯ್ಯಾ ಸಮಾಚಾರ ?" ಎಂದು ಪ್ರಶ್ನಿಸಿದೆ. ಪ್ರಕಾಶನು ಮೇಜಿನ ಮೇಲಿದ್ದ ಕಾಫಿಯನ್ನು ತೆಗೆದುಕೊಳ್ಳುವಂತೆ ಸೂಚಿಸಿ "ಇನ್ನೂ ೯ ಗಂಟೆ ಆಗಿಲ್ಲ" ಎಂದ. ಸ್ವಲ್ಪ ಹೊತ್ತು ಆ ಮಾತು ಈ ಮಾತು ಆಡುತ್ತಿದ್ದು ಹೊತ್ತು ಕಳೆದೆವು. ಹೊರಗಿನಿಂದ "ಪ್ರಭಾಕರ್ ಎಂಬುವರು ಇಲ್ಲಿದ್ದಾರೆಯೇ ? ಅವರ ಮನೆ ಎಷ್ಟು ಹುಡುಕಿದರೂ ಸಿಕ್ಕಲಿಲ್ಲ. ಬಹುಶಃ ಈ ಮನೆಯಲ್ಲಿರಬಹುದೆಂದು ಯಾರೋ ಹೇಳಿದರು." ಎಂದು ಯಾರೋ ತಿಮ್ಮನೊಡನೆ ಮಾತಾಡುತ್ತಿರುವಂತೆ ಕೇಳಿಸಿತು. ನಾನು ಎದ್ದು ಹೋಗಿ ಬಾಗಿಲನ್ನು ತೆರೆದು 'ಒಳಗೆ ಬನ್ನಿ' ಎಂದೆ. ಆಗಂತುಕನು ದೂರದಲ್ಲಿಯೆ ನಿಂತುಕೊಂಡು ನಮಸ್ಕರಿಸಿ "ನನ್ನ ಟೋಪಿ ಮತ್ತು ಕೋಳಿ ಸಿಕ್ಕಿದೆ, ಎಂಬ ಜಾಹೀರಾತನ್ನು ನೋಡಿದೆ; ದಯವಿಟ್ಟು ವಾಪಸು ಕೊಟ್ಟರೆ ತುಂಬಾ ಉಪಕಾರವಾಗುತ್ತದೆ." ಎಂದ. ಪ್ರಕಾಶನನ್ನು ನಾನು ನೋಡಿದೆ. ಅವನು "ನಿಮ್ಮ ಕೋಳಿಯನ್ನು ನಮ್ಮ ತಿಮ್ಮ ಕತ್ತರಿಸಿದ" ಎಂದು ಹೇಳಿ ಅವನ ಮುಖದಲ್ಲಿ ಏನಾದರೂ ಬದಲಾವಣೆ ಆಗುವದೋ ಏನೋ ಎಂದು ನಿರುಕಿಸತೊಡಗಿದ. ಆಗಂತುಕನು ಯಾವ ವಿಧವಾದ

ಆಶ್ಚರ್ಯವನ್ನಾಗಲಿ, ಭಯವನ್ನಾಗಲಿ ತೋರ್ಪಡಿಸದೆ "ಮತ್ತೆ ನನಗ್ಯಾಕೆ ಬರುವಂತೆ ಜಾಹೀರಾತನ್ನು ಪ್ರಕಟಿಸಿದಿರಿ ? ನನ್ನ ಹೆಸರು ಇದ್ದುದನ್ನು ನೋಡಿ ನಾನು ತುಂಬಾ ಆಶೆಯಿಂದ ಬಂದೆ." ಎಂದು ಉತ್ತರವಿತ್ತ. ಪ್ರಕಾಶನು ಮುಗುಳುನಗೆ ನಗುತ್ತಾ "ನಿಮ್ಮ ಕೋಳಿಗೆ ಬದಲು ಬೇರೆ ಕೋಳಿಯನ್ನು ತರಿಸಿದ್ದೇನೆ; ಬೇಕಾದರೆ ನಿಮ್ಮ ಮೊದಲನೆಯ ಕೋಳಿಯ ಪಕ್ಕಗಳನ್ನೂ ರೆಕ್ಕೆಗಳನ್ನೂ ಹಾಗೆಯೇ ಇಟ್ಟಿರುವಂತೆ ತಿಮ್ಮನಿಗೆ ಹೇಳಿದ್ದೇನೆ" ಎಂದು ಒಂದು ಸಿಗರೇಟನ್ನು ಹಚ್ಚಿದ. ಡೇವಿಡ್ ಸ್ವಲ್ಪ ಸಮಾಧಾನ ಹೊಂದಿ "ಕೋಳಿ ಹೋದ ಮೇಲೆ ಪಕ್ಕ ರೆಕ್ಕೆಗಳಿಂದೇನು ಪ್ರಯೋಜನ ? ನನಗೆ ಬೇರೆ ಕೋಳಿಯನ್ನು ಕೊಟ್ಟರೆ ಸಾಕು" ಎಂದ. ನಾನು ಕೋಳಿಯನ್ನು ತರುವಂತೆ ತಿಮ್ಮನಿಗೆ ಹೇಳಿದೆ. ಪ್ರಕಾಶನು ಸಿಗರೇಟಿನ ಹೊಗೆಯನ್ನು ಅಂತರಿಕ್ಷಕ್ಕೆ ಬಿಡುತ್ತಾ "ಮಿಸ್ಟರ್ ಡೇವಿಡ್, ನಿಮ್ಮ ಕೋಳಿ ತುಂಬಾ ಚೆನ್ನಾಗಿತ್ತು. ನನಗೂ ಕೋಳಿಗಳ ವಿಷಯ ಸ್ವಲ್ಪಮಟ್ಟಿಗೆ ಗೊತ್ತಿದೆ. ಅದನ್ನು ನೀವು ಎಲ್ಲಿಂದ ತಂದಿರಿ ? ನಿಮಗೋಸ್ಕರ ಆ ಕೋಳಿಯನ್ನು ಇಟ್ಟಿದ್ದಂತೆ ತೋರುತ್ತದೆ" ಎಂದು ಕೇಳುತ್ತಿರುವಷ್ಟರಲ್ಲಿ ತಿಮ್ಮನು ಕೋಳಿಯನ್ನು ತೆಗೆದುಕೊಂಡು ಬಂದ. ನಾನು ಅದನ್ನು ಡೇವಿಡ್‌ಗೆ ತೋರಿಸಿ "ಇದು ಇರಲೀ ?" ಎಂದೆ. ಡೇವಿಡ್ ಕೋಳಿಯನ್ನು ನೋಡಿ ಸಂತುಷ್ಟನಾಗಿ "ಮೊದಲನೆಯ ಕೋಳಿಗಿಂತ ಇದೇ ತೂಕ ಜಾಸ್ತಿ ಇದೆ." ಇದೇ ಇರಲಿ. ಮೊದಲು ನಾನು ತಂದಿದ್ದ ಕೋಳಿ ಲಾಲ್‌ಬಾಗಿನ ಹತ್ತಿರವಿರುವ ಮಹಮ್ಮದ ಇಸ್ಮಾಯಿಲ್ ಅಂಗಡಿಯದು. ಕ್ರಿಸ್‌ಮಸ್ ಹಬ್ಬಕ್ಕೋಸ್ಕರ ಅದನ್ನು ತೆಗೆದುಕೊಂಡಿದ್ದೆ." ಎಂದು ಹೇಳಿ, ಕೋಳಿಯನ್ನು ತೆಗೆದುಕೊಂಡು ನಮಗೆ ವಂದಿಸಿ ಹೊರಟುಹೋದ.

ಪ್ರಕಾಶನು ನಗುತ್ತಾ "ಪ್ರಭೂ, ನಾನು ಮೊದಲೇ ಹೇಳಲಿಲ್ಲವೇ ? ಇವನಿಗೇನೂ ತಿಳಿಯದೆಂದು. ಎಲ್ಲೋ ತಪ್ಪಿ ಇವನ ಕೈಗೆ ಕೋಳಿ ಸಿಕ್ಕಿದೆ. ಅದು ಹೇಗೆ ಸಿಕ್ಕಿತು ಎನ್ನುವುದನ್ನು ನಾವು ಪತ್ತೆ ಹಚ್ಚಲೇಬೇಕು. ನಾಳೆ ಸಾಯಂಕಾಲ ಲಾಲ್‌ಬಾಗಿಗೆ ಹೋಗಿ ಅಂಗಡಿಯವನನ್ನು ವಿಚಾರಿಸೋಣ" ಎಂದ. "ಆಗಲಿ" ಎಂದು ಒಪ್ಪಿ ಮನೆಗೆ ಹಿಂದಿರುಗಿದೆ.

ಮಾರನೆಯ ದಿವಸ ಮಹಮ್ಮದ ಇಸ್ಮಾಯಿಲ್ ಅಂಗಡಿಯ ಹತ್ತಿರ ಸಾಯಂಕಾಲ ೫ ಗಂಟೆಯ ಹೊತ್ತಿಗೆ ಹೋದೆವು. ಅವನೊಬ್ಬ ಕೋಳಿಗಳ ವ್ಯಾಪಾರಿ. ಕೋಳಿಗಳನ್ನು ಒಟ್ಟಿಗೆ ತಂದು ಚಿಲ್ಲರೆಯಾಗಿ ಮಾರುವುದೇ ಅವನ ಕಸುಬು. ಅವನೊಡನೆ ಸ್ವಲ್ಪ ಹೊತ್ತು ಪ್ರಕಾಶನು ಮಾತನಾಡಿ, ಕೋಳಿಗಳನ್ನು ಹಲಸೂರ ಪೇಟೆಯ ಹನುಮಂತನಿಂದ ತಂದೆನೆಂದು ಅವನ ಬಾಯಿಂದ ಹೊರಡಿಸಿದ. ಅಲ್ಲಿಂದ ಹಲಸೂರ ಪೇಟೆಗೆ ಹೋಗಿ ಹನುಮಂತಪ್ಪನ ಅಂಗಡಿಯನ್ನು ಪತ್ತೆ ಹಚ್ಚಿ, ಅವನನ್ನು ಕಂಡೊಡನೆ "ಮೊನ್ನೆ ನೀವು ಮಹಮ್ಮದ ಇಸ್ಮಾಯಿಲಗೆ ಕೊಟ್ಟ ಕೋಳಿ

ಯನ್ನು ಎಲ್ಲಿಂದ ತಂದಿರಿ ? " ಎಂದು ಪ್ರಶ್ನಿಸಿದೆವು. ಹನುಮಂತಪ್ಪನು ಕುಡುಕ, ಮೇಲಾಗಿ ತನ್ನ ವ್ಯಾಪಾರದ ಗುಟ್ಟನ್ನು ಬಿಡುವವನಲ್ಲ. ನಮ್ಮ ಪ್ರಶ್ನೆಗೆ ಅವನು ರೇಗಿ "ಹೋಗಯ್ಯಾ ಎಲ್ಲಿಂದ ತಂದ್ರೆ ನಿಮಗೇನು, ವ್ಯಾಪಾರ ಮಾಡೋದು ಬಿಟ್ಟು, ಎಲ್ಲಿಂದ ತಂದ್ರಿ, ಎಷ್ಟಕ್ಕೆ ತಂದ್ರಿ ಎಂದು ಪ್ರಶ್ನೆ ಹಾಕೋಕೆ ನೀವ್ಯಾರು ? " ಎಂದ. ಪ್ರಕಾಶನು ಅವನ ಇಂಗಿತವನ್ನು ಅರಿತುಕೊಂಡು "ಅದಕ್ಕಲ್ಲಾ ನಾವು ಕೇಳಿದ್ದು; ನೀವು ಅವರಿಗೆ ಕೊಟ್ಟ ಕೋಳಿ ಜಾತೀದು ಅಲ್ಲಾ, ಕಂಟ್ರೀದು! ಬೇಕಾದರೆ ೫ ರೂಪಾಯಿ ಪಂದ್ಯ" ಎಂದ. ಹನುಮಂತಪ್ಪನು "ಜಾತೀದಲ್ಲಾ? ಯಾರು ನಿಮಗೆ ಹೇಳಿದ್ದು ! ೫ ರೂಪಾಯಿ ಸುಮ್ನೆ ಕಳೆದುಕೊಳ್ಳುತ್ತೀರಿ" ಎಂದ. ಅಷ್ಟಕ್ಕೆ ಸುಮ್ಮನೆ ಇರದೆ ಪ್ರಕಾಶನು "ನನಗೂ ಕೋಳಿಯ ವಿಷಯ ಗೊತ್ತಿದೆ, ಅದೆಂದಿಗೂ ಜಾತೀದಲ್ಲಾ. ೫ ರೂಪಾಯಿ ಹೋದ್ರೂ ಚಿಂತೆಯಿಲ್ಲ" ಎಂದು ಉತ್ತರ ಕೊಟ್ಟ. ಹನುಮಂತಪ್ಪನು ಮೇಜಿಯ ಮೇಲೆ ಕೈಹಾಕಿ, ಒಂದು ದೊಡ್ಡ ಪುಸ್ತಕವನ್ನು ತೆಗೆದು "ನೋಡಯ್ಯಾ ಇಲ್ಲಿ, ಜಾತೀದು ಅಲ್ವೇನೋ ೨೫ ಜಾತೀ ಕೋಳಿಗಳು ದಂಡಿನ ರೂತಮ್ಮನಿಂದ ೧೩ ರೂಪಾಯಿ. ...... ಆಮೇಲೆ ಹಾಗೆ ನೋಡು ೧೨ ಕೋಳಿಗಳು ದಾಸಪ್ಪನಿಗೆ ೧೨ ರೂಪಾಯಿ. ೧೨ ಕೋಳಿಗಳು ಮಹಮ್ಮದ ಇಸ್ಮಾಯಿಲಗೆ ೧೨ರೂಪಾಯಿ ಒಂದು ಕೋಳಿ. ಮನೆಗೆ........ನೋಡಿದೆಯೇನಯ್ಯಾ ಜಾತೀ ಕೋಳಿ ಅಲ್ವೇ ? ರೂತಮ್ಮನ ಹತ್ತಿರ ಜಾತೀಕೋಳಿ ಬಿಟ್ಟರೆ ಕಂಟ್ರೀ ಕೋಳಿ ಒಂದು ಪಿಳ್ಳೇನೂ ಸಿಗೋಲ್ಲ. ಬಿಸಾಕು ೫ ರೂಪಾಯಿ" ಎಂದು ಪುಸ್ತಕವನ್ನು ಮುಚ್ಚಿದ. ಪ್ರಕಾಶನು ೫ ರೂಪಾಯಿಗಳನ್ನು ಕೊಟ್ಟು ನನ್ನೊಡನೆ ಹೊರಗೆ ಬಂದು, "ಪ್ರಭೂ, ಈ ರೀತಿಯ ಮನುಷ್ಯರಿಗೆ ಜೂಜು, ಪಂದ್ಯಗಳೆಂದರೆ ಪ್ರಾಣ ! ಅದಕ್ಕೋಸ್ಕರ ಏನು ಬೇಕಾದರೂ ಮಾಡುತ್ತಾರೆ. ನಾವು ಸುಮ್ಮನೆ ಕೇಳಿದ್ರೆ.... ಅವನೆಂದಿಗೂ ಹೇಳುತ್ತಿರಲಿಲ್ಲ." ಎಂದು ದಂಡಿನ ಕಡೆಗೆ ತಿರುಗಿದ. ನಾನು ಅವನನ್ನು ಹಿಂಬಾಲಿಸಿದೆ.

ದಂಡಿನಲ್ಲೆಲ್ಲಾ ರೂತಮ್ಮ ಹೆಸರುವಾಸಿಯಾದ ಕೋಳಿಯ ವ್ಯಾಪಾರಗಾರ್ತಿ. ಅದರಿಂದ ಅವಳು ಬೇಕಾದಷ್ಟು ಆಸ್ತಿಯನ್ನೂ ಮಾಡಿದ್ದಳಂತೆ. ಅವಳ ಮನೆಗೆ ಹೋಗುವಷ್ಟು ಹೊತ್ತಿಗೆ ಒಳಗಿನಿಂದ ಒಬ್ಬನು ಹೊರಗೆ ವೇಗವಾಗಿ ಬಂದು ಗಾಡಿಯನ್ನು ಹತ್ತಿ "ಹನುಮಂತಪ್ಪನ ಅಂಗಡಿಗೆ ಹೊಡಿ" ಎಂದ. ಪ್ರಕಾಶನು ಮನೆಯ ಒಳಗೆ ಹೋಗದೆ ಅಲ್ಲಿಯೇ ನಿಂತಿದ್ದ ಒಂದು ಗಾಡಿಯನ್ನು ಹತ್ತಿ ನನ್ನನ್ನು ಕುಳಿತುಕೊಳ್ಳುವಂತೆ ಹೇಳಿ "ಆ ಗಾಡಿಯ ಹಿಂದೆ ಬಿಡು" ಎಂದ. ಮುಂದಿನ ಗಾಡಿಯು ಹನುಮಂತಪ್ಪನ ಅಂಗಡಿಯ ಹತ್ತಿರ ಒಂದೆರಡು ನಿಮಿಷಗಳು ನಿಂತಿದ್ದು, ಪುನಃ ಲಾಲ್‌ಬಾಗಿನ ಕಡೆ ತಿರುಗಿತು. ಒಳಗೆ ಮಹಮ್ಮದ ಇಸ್ಮಾಯಿಲ್ ಕೂಗಾಡುತ್ತಿದ್ದ. ಅವನ ಜತೆಯಲ್ಲಿ ಮಾತನಾಡುತ್ತಿದ್ದವನು "ನಿನಗೇನು ಬೇಕಾದರೂ ಕೊಡುತ್ತೀನಿ. ನಿನಗೆ ಹನುಮಂತಪ್ಪ ಕೊಟ್ಟ ಕೋಳಿಗಳ ಪೈಕಿ ಹಸುರು ಪಕ್ಕಗಳಿದ್ದ ಕೋಳಿಯನ್ನು ನೀನು ಯಾರಿಗೆ ಕೊಟ್ಟೆ ? " ಎಂದು ಪ್ರಶ್ನಿಸುತ್ತಿದ್ದನು.

ಪ್ರಕಾಶನು ತಕ್ಷಣ ಅವನನ್ನು ಉದ್ದೇಶಿಸಿ, "ಓಹೋ ಹಸಿರು ಪುಚ್ಛ ಇದ್ದದ್ದೇ ನನಗೆ ಸಿಕ್ಕಿತು. ಕೋಳಿ ಬಹಳ ಚೆನ್ನಾಗಿರುವದರಿಂದ ಮನೆಯಲ್ಲಿ ಸಾಕಿಕೊಂಡಿದ್ದೇನೆ" ಎಂದ. ಅವನು "ಅದು ನನಗಾಗಿ ನಮ್ಮಕ್ಕ ಸಾಕಿದ್ದಳು. ಅದನ್ನು ನನಗೆ ಕೊಟ್ಟು ಬಿಡಿ. ಅದರ ಎರಡರಷ್ಟು ಬೆಲೆಯನ್ನು ಕೊಡುತ್ತೇನೆ." ಎಂದು ಆತುರದಿಂದ ಕೇಳಿಕೊಂಡ. ಪ್ರಕಾಶನು "ಆಗಬಹುದು. ನೀವು ಆ ಕೋಳಿಯ ಮೇಲೆ ಅಷ್ಟು ವಿಶ್ವಾಸ ಇಟ್ಟುಕೊಂಡಿದ್ದರೆ ನನಗ್ಯಾಕೆ ? ನಾನು ಬೇರೆ ತೆಗೆದುಕೊಳ್ಳುತ್ತೇನೆ. ಬನ್ನಿ ನನ್ನ ಜತೆಯಲ್ಲಿ !" ಎಂದು ಹೇಳಿ ಅವನನ್ನು ಗಾಡಿಯಲ್ಲಿ ಕೂರಿಸಿಕೊಂಡು 'ಮಲ್ಲೇಶ್ವರದ ಕಡೆಗೆ ಹೊಡೆ' ಎಂದು ಗಾಡಿಯವನಿಗೆ ಹೇಳಿದನು. ಮನೆಯನ್ನು ಸೇರಿದ ಮೇಲೆ ಗಾಡಿಯವನಿಗೆ ದುಡ್ಡು ಕೊಟ್ಟು ಕಳುಹಿಸಿ ನಾವು ಮೂವರೂ ಮಹಡಿಯ ಮೇಲಿನ ಕೋಣೆಗೆ ಹೋದೆವು.

ಪ್ರಕಾಶನು ಕೋಟನ್ನು ಬಿಚ್ಚಿ ನನ್ನ ಎದುರಿನ ಕುರ್ಚಿಯ ಮೇಲೆ ಕುಳಿತುಕೊಂಡ. ನಾನು ನನ್ನ ಪಕ್ಕದಲ್ಲಿಯೇ ಕುಳಿತಿದ್ದ ವ್ಯಕ್ತಿಯನ್ನುದ್ದೇಶಿಸಿ, "ನಿಮ್ಮ ಹೆಸರೇನು" ಎಂದೆ. ಅವನು ಒಂದು ಬಾರಿ ನನ್ನನ್ನೂ ಇನ್ನೊಂದು ಬಾರಿ ಪ್ರಕಾಶನನ್ನೂ ನೋಡುತ್ತ 'ನನ್ನ ಹೆಸರು ಕನ್ನಸಾಮಿ' ಎಂದ. ಪ್ರಕಾಶನು 'ಕೆಲಸವೆಲ್ಲಿ' ಎಂದು ಕೇಳಿದ ಪ್ರಶ್ನೆಗೆ "ಹಿಂದೂ ಹೋಟೆಲಿನಲ್ಲಿ; ನನ್ನ ಕೋಳಿಯನ್ನು ಬೇಗನೆ ಕೊಟ್ಟರೆ ತುಂಬಾ ಅನುಕೂಲ. ನನಗೆ ಇನ್ನೂ ಬೇರೆ ಕೆಲಸ ಇದೆ" ಎಂದ. ಪ್ರಕಾಶನು ಜೇಬಿನಲ್ಲಿದ್ದ ರಿವಾಲ್ವರನ್ನು ತಕ್ಷಣ ತೆಗೆದು "ನಿನ್ನ ನಾಟಕವೆಲ್ಲ ಹಾಗಿರಲಿ. ಮೊದಲು ಹೇಳು, ಕೋಳಿಯ ಹೊಟ್ಟೆಯಲ್ಲಿ ಮಣಿ ಹೇಗೆ ಬಂತು ? ಹೇಳಿದಿಯೊ ಬದುಕಿದೆ; ಇಲ್ಲದೆ ಹೋದರೆ ಸುಟ್ಟುಬಿಡುತ್ತೇನೆ." ಎಂದ. ಕನ್ನಸಾಮಿಯು ನಡುಗುತ್ತಾ "ನನಗೇನೂ ತಿಳಿಯದು" ಎಂದು ಗೋಳಾಡಿದ. ಅಲ್ಲಿಗೂ ಪ್ರಕಾಶನು ಅವನನ್ನು ಬಿಡದೆ, "ಇನ್ನು ಮೂರು ನಿಮಿಷಗಳ ಕಾಲ ಕೊಟ್ಟಿದ್ದೇನೆ. ಅಷ್ಟರಲ್ಲಿ ಎಲ್ಲಾ ಸಮಾಚಾರಗಳನ್ನು ತಿಳಿಸಿದೆಯೋ ಸರಿ. ಇಲ್ಲವೋ ! ಗೋಲಿ ನಿನ್ನ ಎದೆಯನ್ನು ಸೇರುತ್ತದೆ." ಎಂದ. ಕನ್ನಸಾಮಿಯು ಮುಖವನ್ನು ಕೈಗಳಿಂದ ಮುಚ್ಚಿಕೊಂಡು "ಇನ್ನೇನು ಹೇಳುತ್ತೇನೆ, ಹೇಗಿದ್ದರೂ ಸಿಕ್ಕಿಬಿದ್ದಿದ್ದೇನೆ. ಆದರೆ ನನ್ನ ತಪ್ಪೇನೂ ಇದರಲ್ಲಿಲ್ಲ" ಎಂದ. ಪ್ರಕಾಶನು "ಅದೆಲ್ಲಾ ಇರಲಿ, ನೀನು ಹೇಗೆ ಈ ಕೋಳಿಯ ಹೊಟ್ಟೆಯಲ್ಲಿ ಮಣಿಯನ್ನು ಇಟ್ಟೆ? ಅದು ಹೇಗೆ ನಿನ್ನ ಕೈಯಿಂದ ಬದಲಾಯಿಸಿತು ?" ಎಂದು ಪ್ರಶ್ನಿಸಿದ. ಕನ್ನಸಾಮಿಯು ಸರಿಯಾಗಿ ಕುಳಿತುಕೊಂಡು "ನನಗೆ ಈ ಮಣಿಯನ್ನು ಕದಿಯಬೇಕೆಂಬ ಇಷ್ಟವಿರಲಿಲ್ಲ. ಇದಕ್ಕೆ ಮುಂಚೆ ಈ ರೀತಿಯ ಕೆಲಸವನ್ನು ನಾನೆಂದಿಗೂ ಮಾಡಿಲ್ಲ. ಹಿಂದೂ ಹೋಟೆಲಿನಲ್ಲಿ ನಾನು ತಿಂಡಿ ಮಾಡುತ್ತೇನೆ. ಮಹಾರಾಣಿಯವರು ಬಂದು ಇಳಿದುಕೊಂಡ ದಿವಸವೇ ಅವರ ದಾದಿಗೂ ನನಗೂ ಸ್ನೇಹವಾಯಿತು. ಅವಳು ಮಣಿಯ ವಿಷಯವನ್ನೆಲ್ಲಾ ನನಗೆ ಸವಿಸ್ತಾರವಾಗಿ ಹೇಳಿದಳು. ಮತ್ತು ಅದನ್ನು ಉಪಾಯದಿಂದ ಕಳವು ಮಾಡಿ ಓಡಿಹೋಗೋಣವೆಂದೂ ಹೇಳಿದಳು.

ನನಗೆ ಮಣಿಯನ್ನು ಹೊಂದಬೇಕೆಂಬ ಕೆಟ್ಟ ಆಸೆಯೂ ಪ್ರಬಲವಾಯಿತು. ನಾಲ್ಕು ದಿವಸಗಳ ವರಿಗೆ ಉಪಾಯವನ್ನು ಯೋಚಿಸಿ, ಕೊನೆಗೆ ರಾಣಿಯವರ ಕೊಠಡಿಯ ದೀಪವನ್ನು ಕೆಡಿಸಿ, ಸರಿಮಾಡುವುದಕ್ಕೆ ಅರ್ಮುಗಂ ಬರುವಂತೆ ಮಾಡಿದೆ. ಅರ್ಮುಗಂ ಹಿಂದೆರಡು ಬಾರಿ ಸಣ್ಣ ಪುಟ್ಟ ಕಳ್ಳತನ ಮಾಡಿದ್ದುದರಿಂದ ಮಣಿಯು ಆದಿನ ಕಳವಾದರೆ ಅವನ ಮೇಲೆಯೆ ಗುಮಾನಿ ಬರುತ್ತದೆ ಎಂದು ನನಗೆ ಗೊತ್ತಿತ್ತು. ಹಾಗೆಯೆ ದಾದಿಗೂ ಈ ವಿಷಯವನ್ನು ಹೇಳಿ ಅರ್ಮುಗಂ ಕೊಠಡಿಗೆ ಹೋಗುವುದಕ್ಕೆ ಮುಂಚೆಯೆ ದಾದಿಯ ಸಹಾಯದಿಂದ ಮಣಿಯನ್ನು ಅಪಹರಿಸಿ ಜೇಬಿನಲ್ಲಿಟ್ಟು ಕೊಂಡೆ. ಸ್ವಲ್ಪ ಹೊತ್ತಿನಲ್ಲಿಯೆ ಅದರ ಕಳವಿನ ಮೂಲಕ ದೊಡ್ಡ ಗಲಾಟೆಯಾಗಿ ಪೋಲೀಸಿನವರು ಬಂದು ಹೋಟೆಲನ್ನು ಶೋಧಿಸತೊಡಗಿದರು. ನನಗೆ ದಿಕ್ಕೇ ತೋಚದಂತಾಯ್ತು. ಮಣಿಯು ನನ್ನ ಜೇಬಿನಲ್ಲಿರುವುದು, ಭೂಮಿಯೇ ನನ್ನ ಮೇಲೆ ಇದ್ದ ಹಾಗೆ ಇತ್ತು. ಯಾರಾದರೂ ನನ್ನನ್ನು ಶೋಧನೆ ಮಾಡಿದರೆ ಗತಿಯೇನು ?........ ಎಂದು ಎದೆಯು ಡವಡವನೆ ಹೊಡೆದುಕೊಂಡಿತು. ಅಷ್ಟು ಹೊತ್ತಿಗೆ ರಾತ್ರಿ ೯॥ ಗಂಟೆಯಾದುದರಿಂದ ನನ್ನ ಕೆಲಸದ ವೇಳೆಯು ಮುಗಿಯಿತು. ಕೂಡಲೆ ಜೇಬನ್ನು ಭದ್ರವಾಗಿ ಕೈಯಲ್ಲಿ ಹಿಡಿದುಕೊಂಡು ವೇಗವಾಗಿ ಹೊರಟೆ. ದಾರಿಯಲ್ಲಿ ಯಾರನ್ನು ನೋಡಿದರೂ ಪೋಲೀಸಿನವರ ಹಾಗೆ ಕಾಣುತ್ತಿದ್ದರು. ಸ್ವಲ್ಪ ಹೊತ್ತು ನಡೆದ ಮೇಲೆ ಮಣಿಯನ್ನು ಎಲ್ಲಿಡಬೇಕೆಂಬ ದೊಡ್ಡ ಯೋಚನೆ ನನ್ನನ್ನು ಆವರಿಸಿತು. ತಕ್ಷಣ ಮಾರಲು ಹೋದರೆ ಯಾರಿಗಾದರೂ ಅಪನಂಬಿಕೆ ಬಂದು ಹಿಡಿದುಬಿಡುತ್ತಾರೆ. ನನ್ನಲ್ಲಿಯೇ ಇಟ್ಟುಕೊಂಡರೆ, ಪೋಲೀಸಿನವರು ತನಿಖೆ ಮಾಡಿದರೂ ಮಾಡಬಹುದು. ಬೇರೆ ಊರಿಗೆ ಹೋಗೋಣವೆಂದರೆ ನಾನೇ ಕಳ್ಳ ಎಂಬುದು ಸಿದ್ಧವಾಗುತ್ತದೆ. ಇದೆಲ್ಲವನ್ನೂ ನಾನು ಯೋಚಿಸುತ್ತಾ ನಮ್ಮ ಅಕ್ಕನ ಮನೆಗೆ ಹೋದೆ. ನಮ್ಮಕ್ಕ ಕೋಳಿಯ ವ್ಯಾಪಾರಗಾರ್ತಿ. ನನ್ನನ್ನು ನೋಡಿದ ಕೂಡಲೆ " ಏಕೆ ಹೇಗಿದ್ದೀ ? " ಎಂದು ಪ್ರಶ್ನಿಸಿದಳು. ನನ್ನ ಸ್ಥಿತಿಯೇ ಬದಲಾಯಿಸಿತ್ತು. 'ಏನೂ ಇಲ್ಲ' ಎಂದು ಹೇಳಿ ಹಿಂದೆ ಅಂಗಳಕ್ಕೆ ಬಂದು ನಿಂತುಕೊಂಡೆ. ನಮ್ಮಕ್ಕ ಕ್ರಿಸ್‌ಮಸ್ ಹಬ್ಬಕ್ಕೆ ನನಗೆ ಕೊಡಬೇಕೆಂದು ಒಂದು ಒಳ್ಳೆಯ ಜಾತಿಯ ಕೋಳಿಯನ್ನು ಸಾಕುತ್ತಿದ್ದಳು. ಇತರ ಎಲ್ಲಾ ಕೋಳಿಗಳಿಗಿಂತಲೂ ಅದು ತುಂಬಾ ಚೆನ್ನಾಗಿಯೂ ತೂಕವಾಗಿಯೂ ಇತ್ತು. ಅದೂ ಅಲ್ಲದೆ ಅದಕ್ಕೆ ಹಸುರು ಬಣ್ಣದ ಪಕ್ಕಗಳೇ ಹೆಚ್ಚಾಗಿದ್ದವು. ನಾನು ಯೋಚಿಸುತ್ತಾ ನಿಂತಿರುವಾಗ ಕೋಳಿಗಳ ಗುಂಪು ಕಾಳುಗಳನ್ನು ತಿನ್ನುತ್ತಾ ಗಲಾಟೆ ಮಾಡುತ್ತಿತ್ತು. ಅವುಗಳನ್ನು ನೋಡುತ್ತಲೆ ನನಗೆ ಥಟ್ಟನೆ ಒಂದು ಉಪಾಯವು ಹೊಳೆಯಿತು. ಹಾಗು, ಪ್ರಸಿದ್ಧ ಕಳ್ಳರು ಬಂಗಾರ, ವಜ್ರ ಮುಂತಾದವುಗಳನ್ನು ಕೋಳಿ, ಬಾತುಗೋಳಿಗಳಿಂದ ನುಂಗಿಸಿ ಅನಂತರ ಬೇಕಾದಾಗ ಕುಯಿದು ತೆಗೆದುಕೊಳ್ಳುವರೆಂದು ಹೇಳಿದ್ದ ನನ್ನ ಸ್ನೇಹಿತನ ಮಾತೂ ಜ್ಞಾಪಕಕ್ಕೆ ಬಂತು. ಕಾಲವನ್ನು ಕಳೆಯದೆ ನನಗಾಗಿ ಮೀಸಲಾಗಿದ್ದ ಕೋಳಿಯನ್ನು ಹಿಡಿದುಕೊಂಡು, ಮಣಿಯನ್ನು ಅದರ ಗಂಟಲಲ್ಲಿಟ್ಟು, ಬೆರಳಿನಿಂದ

ಒಳಕ್ಕೆ ನೂಕಿದೆ. ಅದು ಕ್ಕೊ, ಕ್ಕೊ ಎಂದು ಶಬ್ದ ಮಾಡುತ್ತಾ ನುಂಗಿತು. ಶಬ್ದವನ್ನು ಕೇಳಿದ ನಮ್ಮಕ್ಕ ಒಳಗಿನಿಂದ ಬಂದು "ಕೋಳಿಗಳನ್ನು ಏನು ಮಾಡ್ತೀಯಾ?" ಎಂದಳು. ನಾನು ತಕ್ಷಣ ಕೈಯಲ್ಲಿದ್ದ ಕೋಳಿಯನ್ನು ಕೆಳಕ್ಕೆ ಹಾಕಿ "ನನಗೆ ಕೊಡುವ ಕೋಳಿ ಹೇಗೆ ಇದೆ ಎಂದು ನೋಡಿದೆ" ಎಂಬುದಾಗಿ ಉತ್ತರಿಸಿದೆ. ಸುಮಾರು ೫೦, ೬೦ ಕೋಳಿಗಳ ಗುಂಪಿನಲ್ಲಿ ಎರಡಕ್ಕೆ ಮಾತ್ರ ಹಸುರು ಪುಕ್ಕ ಇದ್ದು ಒಂದೇ ರೀತಿ ಇತ್ತು. "ಏನಕ್ಕಾ, ಈ ಎರಡು ಕೋಳಿಗಳೂ ಒಂದೇ ರೀತಿ ಇವೆ !" ಎಂದೆ. "ಹೌದು, ಒಂದು ನಿನಗೆ, ಇನ್ನೊಂದು ಹನುಮಂತಪ್ಪನ ಅಂಗಡಿಗೆ. ಜಾತಿ ಕೋಳಿ ಬೇಕೆಂದು ಅವನು ೫ ರೂಪಾಯಿಗಳನ್ನು ಮುಂಗಡ ಕೊಟ್ಟಿದ್ದಾನೆ" ಎಂದಳು. ನನಗೆ ಆಕಾಶ ಕಳಚಿಬಿದ್ದ ಹಾಗೆ ಆಯಿತು. ನಾನು 'ಯಾವ ಕೋಳಿಗೆ ಮಣಿಯನ್ನು ನುಂಗಿಸಿದೆ' ಎಂಬುದು ತಿಳಿಯದೆ ತುಂಬಾ ಪೇಚಾಡಿದೆ. ಕೊನೆಗೆ ನನ್ನ ಕೋಳಿಯನ್ನು ಈಗಲೇ ತೆಗೆದುಕೊಳ್ಳುತ್ತೇನೆಂದು ಹೇಳಿ, ಕೋಳಿಯನ್ನು ತೆಗೆದುಕೊಂಡು ಹೊರಟು ಹೋದೆ. ಅಷ್ಟು ಹೊತ್ತಿಗೆ ಮಣಿಯ ಕಳವಿನ ವಿಷಯ ಸ್ವಲ್ಪ ಅಡಗಿ, ಅರ್ಮುಗಂಗೆ ಶಿಕ್ಷೆಯಾಗಿದ್ದುದರಿಂದ ಮೂರು ದಿನಗಳ ನಂತರ ನನ್ನ ಮನೆಯಲ್ಲಿ ಕೋಳಿಯನ್ನು ಕತ್ತರಿಸಿದೆ. ಹೊಟ್ಟೆಯಲ್ಲಿ ಮಣಿ ಇರಲಿಲ್ಲ. ಬೇರೆ ಕೋಳಿಯ ಹೊಟ್ಟೆಗೆ ಅದು ಸೇರಿದೆಯೆಂದು ತಿಳಿದು ಅದನ್ನು ಯಾವ ಹನುಮಂತಪ್ಪನ ಅಂಗಡಿಗೆ ನಮ್ಮಕ್ಕ ಕೊಟ್ಟಳು, ಎಂಬುದನ್ನು ವಿಚಾರಿಸಿಕೊಂಡು ಬಂದೆ. ಅವನು ಮಹಮ್ಮದ ಇಸ್ಮಾಯಿಲ್‌ಗೆ ಕೊಟ್ಟಿರುವುದಾಗಿ, ೧೦ ರೂಪಾಯಿಗಳನ್ನು ಕೊಟ್ಟ ಮೇಲೆ ತಿಳಿಸಿದ. ನೀವೂ ಇವರೂ ಅಲ್ಲಿಂದ ನಡೆದ ಸಂಗತಿಗಳನ್ನು ಅರಿತೇ ಇದ್ದೀರಿ. ನನ್ನನ್ನು ದಯವಿಟ್ಟು ಕ್ಷಮಿಸಿದರೆ, ಇನ್ನು ಮೇಲೆ ಎಂದಿಗೂ ಈ ರೀತಿ ಕೆಲಸಗಳನ್ನು ಮಾಡುವುದಿಲ್ಲ. ಇಲ್ಲದೆ ಇದ್ದರೆ ನಾನು ಪ್ರಪಂಚದಲ್ಲಿ ಬದುಕುವಂತೆ ಇಲ್ಲ !" ಎಂದು ತನ್ನ ಕತೆಯನ್ನು ಸಂಪೂರ್ಣವಾಗಿ ಹೇಳಿ, ಪ್ರಕಾಶನ ಕಾಲುಗಳ ಮೇಲೆ ಬಿದ್ದ.

ಪ್ರಕಾಶನು ರಿವಾಲ್ವರನ್ನು ಮೇಜಿನ ಮೇಲೆ ಬೀಸಾಡಿ 'ಇಲ್ಲಿಂದ ಹೊರಡು, ಆಚೆಗೆ ಹೊರಡು' ಎಂದು ಗದ್ದರಿಸಿ ಬಾಗಿಲನ್ನು ತೋರಿಸಿದ. 'ಸದ್ಯ ಬದುಕಿದೆ' ಯೆಂದುಕೊಂಡು, ಕನ್ನಸಾಮಿಯು ಹಿಂದಿರುಗದೆ ಓಡಿದ. ನಾನು ಆಶ್ಚರ್ಯದಿಂದ 'ಕಳ್ಳನನ್ನು ಬಿಟ್ಟೆಯಲ್ಲೋ' ಎಂದೆ. ಪ್ರಕಾಶನು ನಿದಾನವಾಗಿ ಒಂದು ಸಿಗರೇಟನ್ನು ಹಚ್ಚಿ "ಪ್ರಭೂ, ಯಾರು ಕಳ್ಳ ಆದರೆ ನಮಗೇನು ? .ನ್ಯಾಯ ಬರಬೇಕು ಅಷ್ಟೆ ತಾನೇ ! ಈಗ ಇವನನ್ನು ಪೋಲೀಸಿನವರಿಗೆ ಹಿಡಿದುಕೊಟ್ಟರೆ, ಇವನ ಜೀವನವನ್ನೇ ಕೆಡಿಸಿದಂತೆ ಆಗುತ್ತದೆ. ಅವನು ಆತ್ಮ ಗೌರವವುಳ್ಳ ಮನುಷ್ಯ. ತನ್ನ ತಪ್ಪಿಗಾಗಿ ಪಶ್ಚಾತ್ತಾಪ ಪಟ್ಟಿದ್ದಾನೆ. ಅವನಿಗೆ ಈ ಕೆಟ್ಟ ಬುದ್ಧಿ ಹುಟ್ಟುವುದಕ್ಕೆ ದುಷ್ಟರ ಸಂಗವೇ ಕಾರಣ. ಈ ಪ್ರಕರಣದಿಂದ ಅವನಿಗೆ ಸಾಕಾದಷ್ಟು ಶಿಕ್ಷೆ ಆದ ಹಾಗೆಯೆ ಸರಿ. ಇನ್ನು ಮುಂದೆ ಅವನೆಂದಿಗೂ ಕೆಟ್ಟ ಕೆಲಸಗಳನ್ನು ಮಾಡುವುದಿಲ್ಲ," ಎಂದ. ನಾನು ಸ್ವಲ್ಪ ಹೊತ್ತು ಅವನು ಹೇಳಿದುದನ್ನೆಲ್ಲ ಕೇಳಿ, "ಪ್ರಕಾಶ, ಅದೇನೋ

ಸರಿ. ಆದರೆ ತಪ್ಪಿತಸ್ಥನಲ್ಲದ ಅರ್ರುಮುಗಂನ ಗತಿ ? " ಎಂದೆ. "ಅವನ ಗತಿಯನ್ನು ನಾವು ನೋಡಿದರೆ ತಾನೇ, ನ್ಯಾಯ ದೊರಕಿದ ಹಾಗಾಯ್ತು ! " ಎಂದು ಹೇಳಿ ಮೇಜಿನ ಮೇಲಿದ್ದ ಟೆಲಿಫೋನಿನ ಮುಖಾಂತರ ಪೋಲಿಸ ಇನ್ಸಪೆಕ್ಟರರಿಗೆ ಮಣಿಯು ಸಿಕ್ಕಿದೆಯೆಂತಲೂ, ಅದನ್ನು ರಾಣಿಯವರಿಗೆ ತಲುಪಿಸಿದೆ ಎಂತಲೂ ಅರ್ರುಮುಗಂ ತಪ್ಪಿತಸ್ಥನಲ್ಲವೆಂತಲೂ ಅವನ ಬಿಡುಗಡೆ ಮಾಡಬೇಕೆಂತಲೂ ಹೇಳಿದ. ಪ್ರಕಾಶನ ಮಾತನ್ನು ಯಾರೂ ತೆಗೆಯುವಂತಿಲ್ಲ. ಇನ್ಸಪೆಕ್ಟರರು ಕೂಡ "ಆಗ ಬಹುದು, ಮುಂದಿನ ವಿಷಯಗಳನ್ನು ಸಮಕ್ಷಮ ಭೆಟ್ಟಿಮಾಡಿ ತಿಳಿದುಕೊಳ್ಳುತ್ತೇನೆ. ನಿಮ್ಮ ಮಾತಿನಂತೆ ಅರ್ರುಮುಗಂನನ್ನು ಬಿಡುಗಡೆ ಮಾಡಿರುತ್ತೇನೆ." ಎಂದು ತಿಳಿಸಿದರು.

ಅನುವಾದಕರು
—ಎನ್. ಸೂರಪ್ಪ (ಚಿತ್ರದುರ್ಗ)

## ಅಭ್ಯಸನಗಳು

**ಪ್ರಶ್ನೆಗಳು :—**

(೧) ಪ್ರಕಾಶನು ತನ್ನ ಕೈಗೆ ಸಿಕ್ಕ ಟೋಪಿಯಮೇಲಿಂದ ಅದನ್ನು ಧರಿಸಿದವನ ಬಗೆಗೆ ಯಾವ ಯಾವ ಸಂಗತಿಗಳನ್ನು ಊಹಿಸುವನು ?

(೨) ರತ್ನಮಣಿಯ ಬಗೆಗೆ ನಿಜ ಸಂಗತಿಯನ್ನು ಅರಿಯಲು ಪ್ರಕಾಶನು ಯಾವ ಯಾವ ಉಪಾಯಗಳನ್ನು ಕೈಕೊಂಡನು ?

(೩) ಕನ್ನಸಾಮಿಯು ರತ್ನವನ್ನು ಕೋಳಿಗೆ ಹಾಕಿದ ಕಾರಣವೇನು ?

(೪) ಪ್ರಕಾಶನು ಕನ್ನಸಾಮಿಯನ್ನು ಅಪರಾಧಿಯೆಂದು ಏಕೆ ಬಗೆಯಲಿಲ್ಲ?

(೫) ಈ ರತ್ನಮಣಿಯ ಸಂಶೋಧನವನ್ನು ಪ್ರಕಾಶನು ಕೈಕೊಂಡ ಕಾರಣ ವೇನು ?

(೬) ಅರ್ರುಮುಗಂ ಇವನ ಮೇಲೆ ಕಳವಿನ ಆರೋಪವು ಏಕೆ ಬಂದಿತು ?

**ಭಾಷಾಭ್ಯಾಸ :—**

(೧) [೧] ಪ್ರಕಾಶ ಮತ್ತು ಪ್ರಭಾಕರ ಇವರ ನಿರೀಕ್ಷಣ ಶಕ್ತಿಯಲ್ಲಿ ಇರುವ ಅಂತರ ವನ್ನು ಅರಿಯಿರಿ.

[೨] ಕೊನೆಯ ಬೆಂಚಿನ ಮೇಲೆ ಕೂಡುವ ಸ್ವಭಾವದ ಹುಡುಗರಲ್ಲಿ ಒಬ್ಬನ ಮನಸ್ಸನ್ನು ವರ್ಣಿಸಿರಿ.

(೨) ಚೈನಿ ಮನುಷ್ಯ, ಆಟಗುಳಿ ಹುಡುಗ, ಅಭ್ಯಾಸಿ ವಿದ್ಯಾರ್ಥಿ, ಮಾರ್ವಾಡಿ, ಶೆಟ್ಟರು, ಭಟ್ಟರು, ಡಾಕ್ಟರ, ಶಿಕ್ಷಕ, ವಕೀಲ — ಇವರಲ್ಲಿ ಬೇಕಾದ ಇಬ್ಬರ ಉಡುಪು, ತೊಡಪು, ಮುಖಭಾವ ಇಷ್ಟರಿಂದಲೇ ಆ ವ್ಯಕ್ತಿಗಳನ್ನು ಇಂತಹರೇ ಎಂದು ಊಹಿಸಲು ಬರುವಂತೆ ವರ್ಣಿಸಿರಿ.

**ಶಬ್ದವಿಚಾರ :—**

(೧) ವ್ಯಾಪಾರ — ವ್ಯಾಪಾರಗಾರ — ವ್ಯಾಪಾರಗಾರ್ತಿ
ಕನ್ನಡ — ಕನ್ನಡಿಗ — ಕನ್ನಡಿತಿ
ಕಬ್ಬ — —
ಗುಡಿ — —
ಮಾಟ — —
ಒಕ್ಕಲು — —

(೨) ವಾಕ್‌ಪಟು,-ಕ್ರೀಡಾಪಟು — ಹೀಗೆ 'ಪಟು' ಕೊನೆಗೆ ಬರುವ ೫ ಶಬ್ದಗಳನ್ನು

(೨) [ಅ] ತಲೆ — ಕಾಯು, ತಿರುಗು, ತೂಗು, ಬಾಗು, ಎತ್ತು, ತೋರು. ಇವುಗಳನ್ನು ಒಂದೊಂದು ವಾಕ್ಯದಲ್ಲಿ ಉಪಯೋಗಿಸಿರಿ.

ವಾಕ್‌ಶಿಕ್ಷಣ :—

(೧) ಮೊದಲು ವಿಮೆ ಇಳಿಸಲು ಒಪ್ಪದೆ ಇದ್ದವನು ಹಿಂದುಗಡೆ ವಿಮೆ ಇಳಿಸುವನು. ವಿಮೆಯ ಏಜಂಟನು ಯಾವ ಮಾತುಗಳಿಂದ ಇಂತಹನ ಮನವನ್ನು ಒಲಿಸಿರಬಹುದು ಎಂಬುದನ್ನು ಹೇಳಿರಿ.

(೨) ಹನುಮಂತಪ್ಪನಿಗೂ ಪ್ರಕಾಶನಿಗೂ ಆದ ಸಂಭಾಷಣೆಯನ್ನು ಅಭಿನಯಿಸಿ ತೋರಿಸಿರಿ.

ಚರ್ಚೆ :—

(೧) ಅನಾಯಾಸವಾಗಿ ಸಿಕ್ಕ ಮಣಿಯನ್ನು ಪ್ರಕಾಶನು ಹತ್ತಿರ ಇಟ್ಟುಕೊಂಡಿದ್ದರೆ ಅಪರಾಧವಾಗುತ್ತಿತ್ತೆ ?

(೨) ಕನ್ನಸಾಮಿಯು ಕಳ್ಳನಿದ್ದರೂ ಅವನನ್ನು ಶಿಕ್ಷಿಸದೆ ಬಿಟ್ಟದ್ದು ತಪ್ಪು.

ಬರೆಹ :—

(೧) ಕೆಳಗೆ ಕೊಟ್ಟವುಗಳಲ್ಲಿ ಯಾವ ನಾದ ನಿಮಗಿರುವದು ಅಥವಾ ನೀವು ಇವುಗಳಲ್ಲಿ ಯಾವುದನ್ನು ಹಚ್ಚಿಕೊಳ್ಳಲು ಅಪೇಕ್ಷಿಸುವಿರಿ ? ಎಂಬುದನ್ನು ಸಕಾರಣವಾಗಿ ಹೇಳಿರಿ.

[೧] ಹಾಡುಗಾರಿಕೆ, ಇಲ್ಲವೆ ಬಾರಿಸುವದು, ನುಡಿಸುವದು.
[೨] ಕೈಗಾರಿಕೆಯ ಕೆಲಸ.
[೩] ಚಿತ್ರ ಬರೆಯುವುದು.
[೪] ಮೂರ್ತಿಗಳನ್ನು ಮಾಡುವುದು.
[೫] ಆಟಗಳು.
[೬] ಪ್ರಾಣಿಗಳನ್ನು ಸಾಕುವುದು.
[೭] ಅಂಚೆ ತಿಕೀಟು ಮೊದಲಾದವುಗಳನ್ನು ಕಲೆಹಾಕುವದು.
[೮] ಹೂವಿನ ಗಿಡ ಹಚ್ಚುವುದು.

(೨) ಬಡಿಗತನದ ಉದ್ಯೋಗ, ಬಡಿಗತನದ ನಾದ ಇವುಗಳಲ್ಲಿ ಅಂತರವೇನೆಂಬುದನ್ನು ಬರೆಯಿರಿ.

# ೧೦. ರೇಲ್ವೆ ನಿಲ್ದಾಣ.

[ ನಾವು ಅನುದಿನವೂ ನೋಡುವ ರೇಲ್ವೆನಿಲ್ದಾಣವು ಸಾಹಿತಿಯ ಕಣ್ಣಿನಲ್ಲಿ ಜಗತ್ತಿನ ಜನ-ಜೀವನದ ಪಡಿನೆಳಲಾಗಿ ಕಂಗೊಳಿಸಿದೆ. ಇದು ಒಂದು ವರ್ಣನೆಯ ಒಳ್ಳೆಯ ಮಾದರಿಯಾಗಿದೆ.

ಶ್ರೀ ಆನಂದಕಂದರು ಬರೆದ 'ಸುದರ್ಶನ' ಎಂಬ ಕಾದಂಬರಿಯಿಂದ ಈ ಭಾಗ ವನ್ನು ಆಯ್ದುಕೊಳ್ಳಲಾಗಿದೆ. ]

ಬಗೆಬಗೆಯ ಜನರ, ಬಗೆಬಗೆಯ ಭಾವಗಳ ಪ್ರದರ್ಶನವನ್ನು ನೋಡ ಬೇಕಾದರೆ, ನಾವು ರೇಲ್ವೆ ಸ್ಟೇಷನ್ನಿಗೆ ಹೋಗಬೇಕು. ಜಗತ್ತಿನ ಮಾನವ ಕೋಟಿಯ ಸಂಕ್ಷಿಪ್ತ ಚಿತ್ರವೆಂದರೆ ರೇಲ್ವೆಸ್ಟೇಷನ್ನು. ಕಥೆ ಕಾದಂಬರಿಕಾರರು ಆಗಾಗ ಅಲ್ಲಿಗೆ ಹೋಗುತ್ತಲಿದ್ದರೆ, ಅನೇಕ ಕಥಾವಸ್ತುಗಳನ್ನವರು ಪಡೆಯ ಬಹುದು. ಕವಿಗಳು ಹೋಗಿ, ತಮ್ಮ ಹೃತ್ತರಂಗಿಣಿಗಳಲ್ಲಿ ಭಾವತರಂಗಗಳನ್ನು ಎಬ್ಬಿಸಿಕೊಳ್ಳಬಹುದು. ಉಪನ್ಯಾಸಕರಿಗೆ ಅಲ್ಲಿ—ಜನಸಾಮಾನ್ಯರ ಕಷ್ಟಮಯ ವಾದ ಬಾಳನ್ನು ಹೃದಯದ್ರಾವಕವಾಗಿ ಬಣ್ಣಿಸುವುದಕ್ಕೆ—ಸಾಕಷ್ಟು ಸಾಮಗ್ರಿ ಗಳು ಸಿಕ್ಕಬಹುದು. ಪ್ರಾಥಮಿಕ ಶಾಲೆಗಳ ಉಪಾಧ್ಯಾಯರು, ವಿಶೇಷ ಕ್ರಮ ವನ್ನು ವಹಿಸದೆ ತಮ್ಮ ವಿದ್ಯಾರ್ಥಿಗಳಿಗೆ ದೇಶವಿದೇಶಗಳ ಜನರನ್ನೂ ಅವರ ಉಡಿಗೆ, ತೊಡಿಗೆ, ನಡೆನುಡಿಗಳನ್ನೂ ಗುರುತು ಮಾಡಿಕೊಡಬಹುದು. ನಾಟಕ–ಸಿನೇಮಾ ಗಳನ್ನು ನೋಡುವ ಅಪೇಕ್ಷೆಯಿದ್ದು, ದುಡ್ಡಿಲ್ಲದೆ ಮಿಡುಕುವ ಬಡವರಾದ ರಸಿಕರು ರೇಲ್ವೆ ಸ್ಟೇಷನ್ನಿಗೆ ಹೋಗಿ, ಕೊಂಚವಾದರೂ ಮನಸ್ಸನ್ನು ಸಂತಯಿಸಿಕೊಳ್ಳ ಬಹುದು. ಸಾಹಿತ್ಯ ಪರಿಷತ್ತಿನವರು ಔತಣಕೊಟ್ಟು, ಹಣವೆಚ್ಚಮಾಡಿ ಕರೆಯಿಸಿ ದರೂ ನೆರೆಯದಂತಹ ಸಕಲ ಭಾಷಾ ಸಮ್ಮೇಲನವನ್ನೂ ಅಲ್ಲಿ ಕಾಣಬಹುದು.

ಅಭಿನಯ ಕೌಶಲ್ಯವನ್ನು ಪಡೆಯಬೇಕೆಂದು ಅಪೇಕ್ಷಿಸುವ ನೂತನ ನಟ ವರ್ಗವಂತೂ ರೇಲ್ವೆ ಸ್ಟೇಷನ್ನಿಗೆ ಅವಶ್ಯವಾಗಿ ಹೋಗಲೇಬೇಕು. ವಿಯೋಗ ಹೊಂದಲಿರುವ ಆತ್ಮೀಯರ—ಅದರಲ್ಲಿಯೂ ದಂಪತಿವೃಂದದ ಕಾತರಭಾವದ ವೈವಿಧ್ಯವು ಅಲ್ಲಿ ನೋಡಲು ದೊರೆಯುವುದು. ಬರಲಿರುವ ಬಂಧು—ಬಾಂಧ ವರ ದಾರಿಯನ್ನು ಕಾಯುತ್ತ—ನಿಮಿಷವನ್ನು ಗಂಟೆಯಾಗಿ ಕಾಣುವ—ಸ್ತ್ರೀ ಪುರುಷ ನಿರೀಕ್ಷಕರ ಆತುರತೆಯ ರೀತಿಗಳೂ ಕಣ್ಣಿಗೆ ಬೀಳುವುವು. ಬಹುಕಾಲ ದಿಂದ ಅಗಲಿದ ಆತ್ಮೀಯರನಿಂದು ಕಾಣಲಿರುವೆವೆಂಬ ಆನಂದದಿಂದ, ಕುಳಿತಲ್ಲಿ ನಿಂತಲ್ಲಿ ಸವಿಸವಿಯಾದ ಕನಸುಗಳನ್ನು ಕಾಣುತ್ತಿರುವ ಕನಸಿಗರ ಬಳಗವೂ ಅಲ್ಲಿ ಕಣ್ಣನ್ನು ಸೆಳೆಯುವುದು. ಆಪ್ತೇಷ್ಟರ ಮೈಯಲಸಿಕೆಯ ವಾರ್ತೆಯನ್ನು ಕೇಳಿ, ಅವರಿಗೆ ಬೇಗನೆ ನೆಮ್ಮದಿಯುಂಟಾಗಲೆಂದು ಮನದ ಒಂದು ಭಾಗವು ದೇವರನ್ನು ನೆನೆಯುತ್ತಿರುವಾಗಲೇ ಇನ್ನೊಂದು ಭಾಗವು 'ಏನಾದರೂ ಅನಿಷ್ಟವಾದರೆ ಮುಂದೇನು ?' ಎಂದು ಯೋಚಿಸಲು, ನಡುನಡುಗಿ ನಿಟ್ಟುಸಿರು ಹಾಕುವ ಜನ

ರಿಗೂ ಅಲ್ಲಿ ಕೊರತೆಯಿರುವುದಿಲ್ಲ. ಮರಣಶಯ್ಯೆಯ ಮೇಲೆ ಮಲಗಿದ ಪತಿರಾಜನಿಗಾಗಿ ಹೃದಯವನ್ನೇ ಕರಗಿಸಿ ಕಣ್ಣೀರನಾಗಿಸುತ್ತಿದ್ದ ನವವಧುವಿನ ಕರುಣಾಚಿತ್ರವು ಒಂದೆಡೆಯಲ್ಲಿ ಕಾಣುತ್ತಿದ್ದರೆ, ಇನ್ನೊಂದೆಡೆಯಲ್ಲಿ ಹೊಸ ಹಸುಮಗುವನ್ನೆತ್ತಿ ನಸುನಗೆಯ ತೆಳುದೆರೆಗಳನ್ನು ಹರಡುತ್ತ, ಇನಿಯನ ಮನೆಗೆ ಹೊರಟ ಪುತ್ರವತಿಯ ಸಂತಸದ ಚಿತ್ರವು ಕಾಣಲು ಸಿಕ್ಕಬಹುದು. ಮರುಳು ಗಂಡುಗಳನ್ನು ತಮ್ಮ ಕುಡಿನೋಟದ ಬಲೆಯನ್ನು ಬೀಸಿ ಸೆರೆಹಿಡಿಯುವ ಸೋಗಲಾಡಿಯರಂತೆಯೇ, ಗರತಿಯರಾದ ಹೆಣ್ಣುಮಕ್ಕಳನ್ನು ಕಾಮದ ಕಣ್ಣುಗಳಿಂದ ಮುಟ್ಟುತ್ತ ಅಲೆದಾಡುವ ಬೀದಿಯ ರಸಿಕರೂ ಅಲ್ಲಿ ಬೇಕಾದಷ್ಟು ಜನರು.

ಯೋಗ ವಿಯೋಗಗಳಲ್ಲಿಯೇ ವಿವಿಧ ಭಾವಗಳ ಬೆಳವಣಿಗೆಯಲ್ಲವೇ? ಹಾಗಾದರೆ ರೇಲ್ವೇ ಸ್ಟೇಷನ್ನು ತಂದೆ–ತಾಯಿ–ಮಕ್ಕಳ, ಗಂಡ–ಹೆಂಡತಿಯರ, ಅಣ್ಣ–ತಮ್ಮಂದಿರ, ಗೆಳೆಯ–ಗೆಳತಿಯರ, ಪ್ರವಾಸಿಕ–ಕೂಲಿಯವರ, ವ್ಯಾಪಾರಿ–ಗಿರಾಕಿಗಳ, ಭಿಕ್ಷುಕ–ದಾತೃವರ್ಗದ, ಯೋಗ–ವಿಯೋಗಗಳ ರಂಗಭೂಮಿಯು; ಎಂದ ಮೇಲೆ ಇಲ್ಲಿ ಎಷ್ಟೊಂದು ಭಾವಗಳು ಹುಟ್ಟಿ ಬೆಳವಣಿಗೆ ಹೊಂದಬೇಡ!

ಸುಮಾರು ಒಂಬತ್ತೂಕಾಲು ಗಂಟೆಯಾಗಿದ್ದಿತು. ಬೆಳಗಾವಿಯ ರೇಲ್ವೇ–ಸ್ಟೇಷನ್ನಿನ ಮೇಲೆ, ಮೇಲ್‌ಟ್ರೇನಿನ ಪ್ರವಾಸಿಕರ ಗಲಾಟೆಯೇ ಗಲಾಟೆ. ಸರಿಯಾದ ಸ್ಥಳವು ಸಿಕ್ಕೀತೋ ಇಲ್ಲವೋ–ಎಂಬ ಚಿಂತೆಯು ಪ್ರತಿಯೊಬ್ಬ ಪ್ರವಾಸಿಕನ ಮುಖದ ಮೇಲೆಯೂ ಸ್ಪಷ್ಟವಾಗಿ ಮೂಡಿಬುದು ತೋರುತ್ತಿದ್ದಿತು. ಹಣ ಸುರಿದು ಸುರಿದು ಪದವೀಧರರಾಗಲಿರುವ ವಿದ್ಯಾರ್ಥಿ–ತನಗೆ ಮುಂದೆ ಸರಿಯಾದ ನೌಕರಿ ದೊರೆತೀತೋ ಇಲ್ಲವೋ ಎಂದು ತಳೆಯುವ ಚಿಂತಾಭಾವವನ್ನು ವಿಾರಿಸುವಂತಹುದು, ಈ ಜನರ ಮುಖಭಾವ! 'ಏನಾದರೇನು? ನನಗೆ ದೊಡ್ಡ ದೊಡ್ಡ ಜನರ 'ವಸೀಲಿ'ಯಿದೆ. ಸರಿಯಾದ ನೌಕರಿ ಸಿಕ್ಕೇ ಸಿಕ್ಕುವುದು' ಎಂದು ನಿಶ್ಚಿಂತೆಯಿಂದ ತಿರುಗುವ ಸಿರಿವಂತ ವಿದ್ಯಾರ್ಥಿಗಳಂತೆ, ವಿಶೇಷ ಪ್ರವಾಸ ಮಾಡಿದ ಅನುಭವಿಕರು, ಯಾವ ಯೋಚನೆಯೂ ಇಲ್ಲದೆ, ಪ್ಲಾಟಫಾರ್ಮಿನ ಮೇಲೆ ಹಾಯಾಗಿ ಅಲೆದಾಡುತ್ತಲಿದ್ದಾರೆ. ಟ್ರೇನು ಬರುವುದಕ್ಕೆ ಇನ್ನು ಹದಿನೈದು ನಿಮಿಷಗಳಿದ್ದರೂ ಈಗಲೇ ಹತ್ತುವುದಕ್ಕೆ ಸಿದ್ಧರಾಗಿ ನಿಂತ ಹಳ್ಳಿಗರು 'ಯಾವುದಕ್ಕೂ ಪೂರ್ವಸಿದ್ಧತೆಯಿರಬೇಕು' ಎಂದು ಉಪದೇಶಿಸುವ ನಾಗರಿಕರಿಂದಲೇ 'ಹಳ್ಳಿಯ ಕೆಂಚರು' ಎಂಬ ಬಿರುದನ್ನು ಪಡೆದು ಸಗಿಸಿಕೊಳ್ಳುತ್ತಲಿದ್ದಾರೆ. ಹಸಿದ ಹೊಟ್ಟೆ ಅನ್ನದ ದಾರಿಯನ್ನು ಕಾಯುವಂತೆ ವೃತ್ತ–ಪತ್ರಿಕೆಗಳ ವ್ಯಾಪಾರಿಗಳೂ ತಿಂಡಿ–ತೀರ್ಥಗಳ ಮಾರಾಟದವರೂ ಟ್ರೇನಿನ ದಾರಿಯನ್ನು ಕಾಯುತ್ತಿದ್ದಾರೆ.

ಎರಡನೆಯ ತರಗತಿಯ ಪ್ರವಾಸಿಕರ 'ವೇಟಿಂಗ ರೂಮಿ'ನ ಮುಂಬದಿಯ ಬೆಂಚಿನ ಮೇಲೆ ಉಷಾ, ಪ್ರಭಾ ಕುಳಿತಿದ್ದಾರೆ; ಟ್ರೇನು ಬರುವುದಕ್ಕೆ ಇನ್ನೂ

ವೇಳೆಯಿದೆಯೆಂಬುದು ಗೊತ್ತಿದ್ದಿತಾದರೂ ಆಗಾಗ ಆತುರ ದೃಷ್ಟಿಯಿಂದ ಅತ್ತ ಕಡೆಗೆ ನೋಡುತ್ತಲಿದ್ದಾರೆ.

—ಆನಂದಕಂದ

## ಅಭ್ಯಸನಗಳು

ಪ್ರಶ್ನೆಗಳು:—

(೧) ರೇಲ್ವೆ ಸ್ಟೇಷನ್ನು ಮಾನವಕೋಟಿಯ ಸಂಕ್ಷಿಪ್ತ ಚರಿತ್ರವು ಹೇಗೆ ?

(೨) ಅಭಿನಯ ಕಲೆಯ ಅಭಿರುಚಿಯುಳ್ಳ ನಟರು ರೇಲ್ವೆ ನಿಲ್ದಾಣಕ್ಕೆ ಏಕೆ ಹೋಗಬೇಕು ?

(೩) ವಿವಿಧ ಜನರು ಗಾಡಿಯ ಹಾದೀ ಕಾಯುವ ಬಗೆಯನ್ನು ಬಣ್ಣಿಸಿರಿ.

ಭಾಷಾಭ್ಯಾಸ:—

(೧) [೧] ಇಲ್ಲಿಯ ವರ್ಣನೆಯ ಮನೋಹರ ಶೈಲಿಯನ್ನು ನಿರೀಕ್ಷಿಸಬೇಕು. ಅಭಿನಯ .... ಈ ವಾಕ್ಯವೃಂದದಲ್ಲಿ :— ನೋಡಲು ದೊರೆಯಬಹುದು, ಕಣ್ಣಿಗೆ ಬೀಳುವವು, ಕಣ್ಣನ್ನು ಸೆಳೆಯುವದು — ಒಂದೇ ಅರ್ಥದ ಬೇರೆ ಬೇರೆ ಕ್ರಿಯಾಪದಗಳನ್ನು ನೀವು ಪರೀಕ್ಷಿಸಬೇಕು. ಆಮೇಲೆ ಲೇಖಕರು ಶೈಲಿಯನ್ನು ಬದಲಿಸಿ ಬೇರೊಂದು ರೀತಿಯಿಂದ ಅಲ್ಲಿಯ ಜನರ ವರ್ಣನೆ ಮಾಡಿರುವರು.

[೨] ನೀವು ನೋಡಿದ ಒಂದು ಮದುವೆಯ ಸಮಾರಂಭವನ್ನು ಬಣ್ಣಿಸಿರಿ.

(೨) [೧] ನಿಮಿಷವನ್ನು ಗಂಟೆಯಾಗಿ ಕಾಣು.

[೨] ಯೋಗ — ವಿಯೋಗಗಳಲ್ಲಿಯೇ ವಿವಿಧ ಭಾವಗಳ ಬೆಳವಣಿಗೆಯಲ್ಲವೇ ? ಈ ವಾಕ್ಯಗಳಲ್ಲಿಯ ಅರ್ಥವನ್ನು ವಿವರಿಸಿರಿ.

ಶಬ್ದ ವಿಚಾರ :—

(೧) ಯೋಗ, ಭಿಕ್ಷುಕ, ಕಾಗೆ, ಚಿಂತೆ, ಮಾತುಗ, ಕೃತಜ್ಞತೆ — ಇವುಗಳ ಮಾರು ನುಡಿಗಳನ್ನು ಕೊಡಿರಿ.

(೨) ಕುಟುಂಬ, ಬಳಗ, ಸಮ್ಮೇಲನ — ಪ್ರತಿಯೊಂದರಲ್ಲಿ ಯಾರ ಯಾರ ಸಮಾವೇಶವಿರುವದೆಂಬುದನ್ನು ಹೇಳಿರಿ.

(೩) ಎದೆ — ಕರಗು, ಕೆಡು, ಹಣ್ಣಾಗು – ಇವುಗಳ ಉಪಯೋಗವನ್ನು ಅರಿಯಿರಿ. ‘ ಒಂದೆಡೆ — ಇನ್ನೊಂದೆಡೆ ’ ಇದನ್ನು ಉಪಯೋಗಿಸಿರಿ.

ವಾಕ್‌ಶಿಕ್ಷಣ:—

ಈ ವರ್ಣನೆಯಲ್ಲಿ ನೀವು ಮೆಚ್ಚಿದ ಒಂದು ವಾಕ್ಯವೃಂದವನ್ನು ಪಾಠಮಾಡಿರಿ.

ಚರ್ಚೆ—

‘ ರೇಲ್ವೆಗಳಿಂದ ದೇಶಕ್ಕೆ ಲಾಭಕ್ಕಿಂತ ಹಾನಿಯೇ ಹೆಚ್ಚು ’ ಈ ವಿಷಯವನ್ನು ನಿಮ್ಮೊಳಗೆ ಚರ್ಚಿಸಿರಿ.

ಬರೆಹ:—

(೧) ವಿದ್ಯಾರ್ಜನೆಗಾಗಿ ಪರದೇಶಕ್ಕೆ ಹೊರಟ ಮಗಳನ್ನು ಕಳುಹಿಸುವಾಗ ತಾಯಿ ಮತ್ತು ಮಗಳ ನಡುವೆ ನಡೆಯಬಹುದಾದ ಸಂಭಾಷಣೆಯನ್ನು ಬರೆಯಿರಿ.

(೨) ಎರಡನೆಯ ವಾಕ್ಯವೃಂದದ ಸಾರಾಂಶವನ್ನು ಆರು ಸಾಲುಗಳಲ್ಲಿ ಬರೆಯಿರಿ.

# ೧೧. ಬೂಕರ್ ಟಿ. ವಾಶಿಂಗ್ಟನ್

[ ಗುಲಾಮರ ವ್ಯಾಪಾರ ಮಾಡುವವರಿಗೆ ಶಿಕ್ಷೆ ವಿಧಿಸುವ ಕಟ್ಟಳೆಯಾಗಿ ಎಷ್ಟೋ ದಶಕಗಳು ಉರುಳಿದ್ದರೂ ಅಮೇರಿಕೆಯಲ್ಲಿ ನಿಗ್ರೋಗಳಿಗೆ ಇನ್ನೂ ಬಿಳಿಯರೊಂದಿಗೆ ಪೂರ್ಣ ಸಮಾನ ಸ್ಥಾನವು ದೊರೆತಿದೆಯೆಂದು ಹೇಳಲು ಬರುವಂತಿಲ್ಲ. ಯುನೈಟೆಡ್ ಸ್ಟೇಟದ ಕೆಲವು ಸಂಸ್ಥಾನಗಳಲ್ಲಿ ನಿಗ್ರೋಗಳಿಗೆ ಬಿಳಿಯರ ಶಾಲೆಗಳಲ್ಲಿ ಪ್ರವೇಶವಿಲ್ಲ. ಊಟ ಫಲಾಹಾರಗಳ ಅಂಗಡಿಗಳಲ್ಲಿ ಇಂಬಿಲ್ಲ. ಸೈನ್ಯದಲ್ಲಿ ನಿಗ್ರೋಗಳಿಗೆ ಮೇಲಿನ ಅಧಿಕಾರ ಸ್ಥಾನಗಳನ್ನು ಕೊಡುವದಕ್ಕೆ ಇದೀಗ ಪ್ರಾರಂಭವಾಗಿದೆ. ವಿಶ್ವಕುಟುಂಬತ್ವದ ಉದಾತ್ತ ಆದರ್ಶವನ್ನಿಟ್ಟುಕೊಂಡ ಶ್ವೇತವರ್ಣೀಯ ಅನೇಕ ಸಜ್ಜನರ ಪ್ರಯತ್ನದ ಫಲವಾಗಿ ಅಮೇರಿಕನ್ ನಿಗ್ರೋಗಳ ದುರ್ದಿನಗಳು ಬೇಗನೆ ಕೊನೆಗೊಳ್ಳಬಹುದೆಂಬ ಆಸೆಯು ಒಡಮೂಡಿದೆ. ಇಂತಹ ಆಶಾಂಕುರವು ಮೊಳೆತು ಬೆಳೆಯಲು ಯಾವಾತನು ತನ್ನ ದೇಹವನ್ನು ಮುಡುಪಾಗಿ ಇರಿಸಿದನೋ ಆ ಮಹಾತ್ಮನ ಚರಿತೆಯು ನಮ್ಮ ನಾಡಿನ ಹಲವು ಜಾತಿ ಜನಾಂಗದವರಿಗೂ ಅನುಕರಣೀಯವಾದ ಆದರ್ಶವಾಗಿದೆ. ]

ಯಾವದೊಂದು ಹಳೆಯ ಇತಿಹಾಸ ಪುಸ್ತಕದಲ್ಲಿ ನಿಗ್ರೋವಿನ ಚಿತ್ರವನ್ನು ನೀವು ನೋಡಿರಬಹುದು. ನಿಗ್ರೋಗಳ ಮೂಲಸ್ಥಾನ ಆಫ್ರಿಕಾ ಖಂಡ. ಆಫ್ರಿಕೆಯಿಂದ ಅನೇಕರನ್ನು ಅಮೇರಿಕೆಗೆ ಗುಲಾಮರೆಂದು ಒಯ್ಯಲಾಯಿತು. ದನಗಳಂತೆ ಇವರನ್ನು ಕೊಂಬ—ಮಾರುವ ವ್ಯಾಪಾರ ನಡೆಯುತ್ತಿತ್ತು. ಸಂಯುಕ್ತ ಸಂಸ್ಥಾನದಲ್ಲಿ ಹೋಗಿ ಒಕ್ಕಲಾದ ಯುರೋಪಿಯನ್ನರು ಈ ನಿಗ್ರೋಗಳನ್ನು ಕೊಂಡು ಅವರನ್ನು ದನಗಳಂತೆ ದುಡಿಸಿಕೊಳ್ಳುತ್ತಿದ್ದರು. ನಿಗ್ರೋಗಳಿಗೆ ವ್ಯಕ್ತಿ ಸ್ವಾತಂತ್ರ್ಯವೇ ಇದ್ದಿಲ್ಲ. ಅಬ್ರಹಾಮ್ ಲಿಂಕನ ಪ್ರಭೃತಿ ಉದಾತ್ತ ಆದರ್ಶದ ಮಹಾತ್ಮರಿಂದ ಗುಲಾಮರ ವ್ಯಾಪಾರವು ನಿಂತಿತು. ಆದರೂ ನಿಗ್ರೋಗಳ ಹೀನ ಸ್ಥಿತಿಯು ಹಾಗೇ ಉಳಿಯಿತು. ಶಿಕ್ಷಣದ ಸಂಸ್ಕಾರವಿಲ್ಲದ, ನಾಗರಿಕತೆಯ ಗಂಧವಿಲ್ಲದ ಕಾಡುಜನವಾಗಿತ್ತು. ಮಾನವತೆಯ ಅಸ್ತಿತ್ವವೇ ಅವರಿಗಿರಲಿಲ್ಲ; ಬಿಳಿಯರ ದಸ್ಯುಗಳಾಗಿ ಆಯುಷ್ಯ ಕಳೆಯುವದೇ ಅವರ ಜೀವನವಾಗಿತ್ತು. ಅಂತಹರನ್ನು ಎಚ್ಚರಿಸಿ, ತಿಳಿಹೇಳಿ ಅವರನ್ನು ಮನುಷ್ಯರನ್ನಾಗಿ ಮಾಡಿ ದಾರಿಗೆ ಹಚ್ಚಿದ ಮಹಾಪುರುಷನೇ ಬೂಕರ್ ಟಿ. ವಾಶಿಂಗ್ಟನ್. ಅಮೇರಿಕೆಯ ಸಾಮಾಜಿಕ ಚರಿತ್ರೆಯಲ್ಲಿ ಅವನ ಹೆಸರು ಅಜರಾಮರವಾಗಿದೆ; ವಿಶ್ವದ ಇತಿಹಾಸದಲ್ಲಿಯೇ ಶೋಭೆಗೊಂಡು ನಿಂತಿದೆ. ಅಮೇರಿಕೆಯ ‘ಟಸ್ಕೆಗೀಸಂಸ್ಥೆ’ಯ ಆವಾರದಲ್ಲಿ ಆ ಮಹಾಪುರುಷನ ಶಿಲಾವಿಗ್ರಹವೊಂದು ಆತನ ಸ್ಫೂರ್ತಿದಾಯಕವಾದ ಸಾಹಸ ಜೀವನವನ್ನು ನಿತ್ಯ ಸ್ಮರಣೆಗೆ ತಂದುಕೊಡುತ್ತ ಇಂದಿಗೂ ನಿಂತಿದೆ. ಆ ಭವ್ಯ ಮೂರ್ತಿಯ ಅಡಿಯಲ್ಲಿ ಕೆತ್ತಿದ ‘ತನ್ನ ಜನತೆಯನ್ನು ಅಜ್ಞಾನದ ಕತ್ತಲೆಯಿಂದ ಹೊರತಂದವನೀತ; ಶ್ರದ್ಧೆಯಿಂದಲೂ, ತಿಳಿವಿನಿಂದಲೂ ಮುಂದುವರಿಯಲು ದಾರಿ ತೋರಿದ ಹಿರಿಯನೀತ’—ಎಂಬರ್ಥದ ಮಾತುಗಳು ಆತನ ಹಿರಿಮೆಯನ್ನು ಸಾರುತ್ತಿವೆ.

ನಿಗ್ರೋಗಳ ಭಾಗ್ಯವಿಧಾತ ಬೂಕರ್ ಹುಟ್ಟಿದ್ದು ತೀರ ಬಡಮನೆತನದಲ್ಲಿ; ವರ್ಜೀನಿಯದ ಒಂದು ಕೂಲಿಕಾರ ಕುಟುಂಬದಲ್ಲಿ (೧೮೧೬). ಅವನ ವಾಸಸ್ಥಳದ ಪರಿಸರವೂ ಅಂತಹದೇ ಆಗಿತ್ತು. ಸುತ್ತುಮುತ್ತಲೆಲ್ಲೆಲ್ಲಿಯೂ ಬಡತನವೇ ಬಡತನ. ಎಲ್ಲರೂ ಅಕ್ಷರ ಶೂನ್ಯರು, ಜ್ಞಾನಶೂನ್ಯರು, ನಿರುತ್ಸಾಹವೇ ಮೈವೆತ್ತಂತೆ ಇದ್ದವರು; ಬನ್ನ ಬವಣೆಗಳು ಆ ಜನರ ಬಾಳಸಂಗಾತಿಗಳು. ಇಂತಹ ನೆಲೆವೀಡಿನ ಮಧ್ಯದಲ್ಲಿ ಬೂಕರ್ ಬೆಳೆದನು.



. ಬೂಕರ್ ಟಿ. ವಾಶಿಂಗ್ಟನ್

ಈ ಬಗೆಯ ಇರವು ಯಾವ ಜನಕ್ಕೆ ಎಷ್ಟು ದಿನ ತಡೆದೀತು ? ಸಮಾಜದಲ್ಲಿ ನಿಗ್ರೋಗಳಿಗೂ ಸಮಾನತೆ ಬೇಕು, ಎಂಬ ಎಚ್ಚರಿಕೆಯ ಕೂಗು ಎದ್ದಿತು; ಅಮೇರಿಕೆಯ ರಾಜಕೀಯ ರಂಗ ಕಲಕುಮಲಕಾಯಿತು. ಆಗ ಬೂಕರ್ ಒಂಬತ್ತು ವರ್ಷದ ಬಾಲಕ. ಅವನ ತಾಯಿ ಮಕ್ಕಳನ್ನು ಕಟ್ಟಿಕೊಂಡು ವರ್ಜೀನಿಯದ ಪಶ್ಚಿಮದಲ್ಲಿ ಹೋಗಿ ನೆಲಸಿದಳು. ಕುಟುಂಬದ ನಿರ್ವಾಹಕ್ಕಾಗಿ ಬೂಕರ್ ಆ ಚಿಕ್ಕ ವಯಸ್ಸಿನಲ್ಲಿಯೇ ಕಠಿಣವಾದ ಕೆಲಸಗಳನ್ನು ಕೈಕೊಳ್ಳಬೇಕಾಯಿತು. ಕಣಿಗಳಲ್ಲಿ ದುಡಿತ, ಮರಕೊರೆಯುವ ಹೋರಿ, ಹೊಲದ ಕಾಯಕಷ್ಟ—ಯಾವದನ್ನೂ ಅವನು ಒಲ್ಲೆನ್ನದೆ ಮಾಡಬೇಕಾಗಿತ್ತು. ಹೊಟ್ಟೆಯ ಸಲುವಾಗಿ ಈ ಹೋರಾಟ ನಡೆದಿರುವಾಗಲೇ ಆತನಲ್ಲಿ ತಾನು ವಿದ್ಯಾವಂತನಾಗಬೇಕು, ಎಂಬ ಹಿರಿಹಂಬಲ ಕುದಿಯುತ್ತಿತ್ತು. ನಿಗ್ರೋ ಕೆಲಸಗಾರರಿಗೆಂದು ಒಂದು ರಾತ್ರಿ ಶಾಲೆ ಇತ್ತು. ಅಲ್ಲಿ ಹೆಸರು ಹಚ್ಚಿಸಿ ತಪ್ಪದೆ ಹೋಗತೊಡಗಿದ. ಮೊದಲ ದಿನ ಉಪಾಧ್ಯಾಯರು

ಹೆಸರು ಕೇಳಿದಾಗ ಆ ಹುಡುಗನು ಗಂಭೀರ ಧ್ವನಿಯಲ್ಲಿ ಉತ್ತರವಿತ್ತ: 'ವಾಶಿಂಗ್ಟನ್.' ಹೌದು, ಕಾಲಕ್ರಮದಲ್ಲಿ ಈ ಬಾಲಕನು ತನ್ನ ಜನಾಂಗಕ್ಕೆ ಮಾರ್ಗದರ್ಶಕ ನಾದನು; ತನ್ನ ಹೆಸರಿಗೆ ಸಾರ್ಥಕ್ಯ ತಂದುಕೊಟ್ಟನು.

ವಿದ್ಯೆಯೆಂಬುದು ಒಂದು ರಾತ್ರಿ ಶಾಲೆಯಲ್ಲಿ ಮುಗಿಯುವದಲ್ಲ; ಬೂಕರ ನಂತಹರ ಕಲಿಯುವ ಹಸಿವು ಅಲ್ಲಿ ಹಿಂಗುವದಲ್ಲ. ಹ್ಯಾಂಪ್ಟನ್ ಎಂಬಲ್ಲಿ ನಿಗ್ರೋ ಗಳಿಗಾಗಿ ಒಂದು ಶಾಲೆಯುಂಟೆಂದು ಅವನು ಕೇಳಿದ. ಅಲ್ಲಿಗೆ ಹೋಗಿ ಕಲಿಯುವ ದೆಂದು ನಿರ್ಧರಿಸಿದ. ಹ್ಯಾಂಪ್ಟನ್ ಅಲ್ಲಿಂದ ೫೦೦ ಮೈಲು ದೂರ. ಅವನ ಹತ್ತಿರ ಹಣವಿರಲಿಲ್ಲ. ಇದ್ದಷ್ಟು ಹಣದಲ್ಲಿಯೇ ಹೊರಟುಬಿಟ್ಟನು. ಆ ಶಾಲೆಯಲ್ಲಿ ಅವನಿಗೆ ಸುಲಭವಾಗಿಯೇ ಪ್ರವೇಶ ದೊರೆಯಿತು. ಗುರುಗಳು ತಮ್ಮ ಕೋಣೆಯ ಕಸ ಉಡುಗಲು ಹೇಳಿದರು; ಬೂಕರ್ ಸ್ವಲ್ಪವೂ ಹಿಂದೆಗೆಯದೆ ಕಸ ಗೂಡಿಸಿ, ಧೂಳ ಝಾಡಿಸಿ, ಚೊಕ್ಕಟಗೊಳಿಸಿ, ಪ್ರವೇಶ ಪರೀಕ್ಷೆಯಲ್ಲಿ ಉತ್ತೀರ್ಣನಾದನು; ಅವರು ಮೆಚ್ಚಿ ಶಾಲೆಗೆ ಸೇರಿಸಿಕೊಂಡರು. ತನ್ನ ಊಟ ವಸತಿ ಶಿಕ್ಷಣಗಳ ವೆಚ್ಚಕ್ಕಾಗಿ ಬೂಕರನಿಗೆ ತನ್ನ ತೋಳುಗಳೇ ಆಧಾರವಾಗಿದ್ದವು. ಇಟ್ಟಿಗೆಗಳನ್ನು ಮಾಡುವ ದನ್ನು ಮುಖ್ಯ ಉದ್ಯೋಗವಾಗಿ ತೆಗೆದುಕೊಂಡು ಅವನು ಪದವೀಧರನಾದನು. ಮುಂದೆ ಆ ಶಾಲೆಯಲ್ಲಿಯೇ ಅವನಿಗೆ ಕೆಲಸ ದೊರೆಯಿತು.

ವಾಶಿಂಗ್ಟನ್ನನಂತಹ ವ್ಯಕ್ತಿಯ ಸಾಹಸಕ್ಕೆ, ಕರ್ತೃತ್ವಶಕ್ತಿಗೆ ಕೇವಲ ಒಂದು ಶಾಲೆಯ ಶಿಕ್ಷಕ-ವೃತ್ತಿ ಸಾಲದು; ದೊಡ್ಡ ಕ್ಷೇತ್ರ ಅದಕ್ಕೆ ಬೇಕು. ಹ್ಯಾಂಪ್ಟನ್ ಶಾಲಾಧ್ಯಕ್ಷನು ಅದನ್ನು ಗುರುತಿಸಿದನು. ಆ ಹೊತ್ತಿಗೆ ಶ್ವೇತವರ್ಣದ ಜಾರ್ಜ ಕ್ಯಾಂಪ್‌ಬೆಲ್ ಮತ್ತು ನಿಗ್ರೋ ಕೆಲಸಗಾರನಾದ ಲೂಯಿ ಅದಮ್ಸ ಎಂಬವರು ನಿಗ್ರೋಗಳಿಗಾಗಿ ಒಂದು ಶಾಲೆ ಸ್ಥಾಪಿಸುವ ಯೋಜನೆ ಮಾಡಿದರು. ಅದಕ್ಕೆ ಒಬ್ಬ ದಕ್ಷ ಅಧ್ಯಕ್ಷನು ಬೇಕಾಗಿದ್ದನು. ಹ್ಯಾಂಪ್ಟನ್ ಶಾಲಾಧ್ಯಕ್ಷನ ಸಲಹೆ ಮೇರೆಗೆ ಆ ಸ್ಥಳಕ್ಕೆ ಬೂಕರನನ್ನು ಅವರು ಕರೆದರು. ಅತ್ಯಂತ ಉತ್ಸಾಹದಿಂದ ಅವನು ಟಸ್ಕೆಗಿಗೆ ಹೋಗಿ 'ಶಾಲೆಯೆಲ್ಲಿ?' ಎಂದು ಕೇಳಿದನು. 'ಇನ್ನು ಮೇಲೆ ಆಗ ಬೇಕು' ಎಂದು ಯೋಜಕರು ನುಡಿದರು. ಅಷ್ಟಕ್ಕೆ ಇಳಿದು ಹೋಗುವ ಆಸಾಮಿ ಆಗಿರಲಿಲ್ಲ ಬೂಕರ್. ಶಾಲೆಯ ಸ್ಥಾಪನೆ ಮೊದಲು ಮಾಡಿ, ನಡಿಸಿ, ಮೇಲೇರಿ ಸುವ ಎಲ್ಲ ಹೊಣೆಯನ್ನೂ ಹೊತ್ತುಕೊಂಡನು. ನಿಗ್ರೋಗಳ ಒಂದು ಚರ್ಚಿನಲ್ಲಿ ಶಾಲೆ ಪ್ರಾರಂಭವಾಯಿತು.

ನಿಗ್ರೋಜನರ ಏಳಿಗೆಗಾಗಿ ತಾನು ಪಡೆಯಬೇಕಾಗಿದ್ದ ಅಭ್ಯುನ್ನತಿ ಒಂದು ಹಂತಕ್ಕೆ ಬಂದು, ತನ್ನ ಜಾತಿ ಬಾಂಧವರ ಉದ್ಧಾರಕ್ಕಾಗಿ ಬೂಕರನ ಕರ್ಮ ಯೋಗಕ್ಕೆ ಈಗ ಮೊದಲಾಯಿತು. ಅವನು ಯೋಚಿಸಿದ; – ಬಡತನದಿಂದ ತೊಳಲಿ, ಬೇನೆ-ಬೇಸರಿಕೆಗಳಿಂದ ಬಳಲಿ ನಿರ್ವಿಣ್ಣವಾಗಿದೆ ನಿಗ್ರೋ ಜನಾಂಗ; ಅದಕ್ಕೆ ಹೇಗೆ ಇದ್ದೀತು—ದೂರದ ನೋಟ, ಹುರುಪು, ದೃಢನಿಶ್ಚಯ? ಈ

ಯಾತನೆಯ ನರಕದಿಂದ ಇವರನ್ನು ಬಿಡುಗಡೆ ಮಾಡಲು ಹೊರಟ ಶಾಲೆ ಹೇಗಿರಬೇಕು ? ಈ ಜನಕ್ಕೆ ಕೇವಲ ಸಾಂಸ್ಕೃತಿಕ ಶಿಕ್ಷಣ ಕೊಟ್ಟರೆ ಸಾಲದು; ಜೊತೆಗೆ ಉಪಜೀವನದ ಚಿಂತೆ ತಪ್ಪಿಸುವ ವೃತ್ತಿಶಿಕ್ಷಣವೂ ಬೇಕು ಎಂದು ಅವನು ಮನಗಂಡನು. ಅಂತೆಯೇ ' ವಿದ್ಯಾಭ್ಯಾಸ ಮತ್ತು ವೃತ್ತಿ ಶಿಕ್ಷಣ ಶಾಲೆ ' ಎಂದು ಆ ಸಂಸ್ಥೆಗೆ ನಾಮಕರಣಮಾಡಿದನು. ಸುತ್ತುಮುತ್ತಲಿನ ತೋಟಗಳಿಂದ ಮೂವತ್ತು ವಿದ್ಯಾರ್ಥಿಗಳು ಈ ಶಾಲೆಗೆ ಬಂದರು. ಎಲ್ಲರೂ ಸ್ವಂತವಾಗಿ ಕೆಲಸಮಾಡಬೇಕೆಂಬ ಕಟ್ಟು ಇತ್ತು. ಕೆಲಕಾಲ ಗತಿಸಿದ ಬಳಿಕ ಬೂಕರ್ ಒಬ್ಬ ಸ್ನೇಹಿತನಿಂದ ಐನೂರು ಡಾಲರುಗಳನ್ನು ಸಾಲವಾಗಿ ಪಡೆದು ನಗರದ ಸಮೀಪದಲ್ಲಿ ಒಂದು ತೋಟವನ್ನು ಕೊಂಡು, ' ಪೋರ್ಟರ್ ಹಾಲ್ ' ಕಟ್ಟಿಸಿದನು. ಶಾಲೆಯ ಮೊಟ್ಟ ಮೊದಲಿನ ಕಟ್ಟಡವಿದು.

ಆಗಿನ ಕಾಲದಲ್ಲಿ ಜನರಲ್ಲಿ ಕೆಲವು ವಿಚಿತ್ರ ಕಲ್ಪನೆಗಳು ಮನೆಮಾಡಿದ್ದವು. ನಿಗ್ರೋಗಳಿಗೆ ವಿದ್ಯೆ ಕಲಿಸಿದರೆ ಅವರು ಸೋಮಾರಿಗಳು, ಮೈಗಳ್ಳರು ಆಗುವರೆಂದು ಒಂದು ಪಂಗಡದವರು ಹೇಳುತ್ತಿದ್ದರು. ಸ್ವತಃ ನಿಗ್ರೋಗಳ ನಿಯೋಗವೊಂದು ಒಂದು, 'ಟಿಸ್ಕೆಗೀ ಶಾಲೆಯಲ್ಲಿ ದೈಹಿಕ-ಶಿಕ್ಷಣಕ್ಕೆ ಇಂಬು ಬೇಡ' ಎಂದು ಬೂಕರ್ ಟಿ. ವಾಶಿಂಗಟನ್ನನಲ್ಲಿ ದೂರಿಕೊಂಡಿತು. "ಕಾವ್ಯರಚನೆಯಲ್ಲಿ, ವಾಚನದಲ್ಲಿ ಇರುವಷ್ಟೇ ಗಾಂಭೀರ್ಯ-ಗೌರವಗಳು ಹೊಲದ ಕಷ್ಟದಲ್ಲಿಯೂ ಇವೆ; ನಮ್ಮ ಮಕ್ಕಳಿಗೆ ಲ್ಯಾಟಿನ್ ಭಾಷೆಯ ತಿಳಿವಳಿಕೆಗಿಂತ, ಮನೆಯನ್ನು ಓರಣವಾಗಿ ಇಟ್ಟುಕೊಂಡು ಅಚ್ಚುಕಟ್ಟಾಗಿ ಬಾಳುವೆ ಮಾಡುವ ಶಿಕ್ಷಣ ಹೆಚ್ಚು ಅಗತ್ಯವಾಗಿದೆ " ಎಂದು ಹೇಳಿ ಬೂಕರ್ ಅವರ ತಪ್ಪು ಗ್ರಹಿಕೆಗಳನ್ನು ತೊಲಗಿಸಿದನು.

ಈ ಪರಿಸ್ಥಿತಿಯಲ್ಲಿ ಶಿಕ್ಷಣದ ಬಗೆಗೆ ಜನರಲ್ಲಿ ಆಸ್ಥೆ ಹುಟ್ಟಿಸುವದೂ ಆ ಕಡೆಗೆ ಅವರ ಮನಸ್ಸನ್ನು ಸೆಳೆಯುವದೂ ಒಂದು ಆದರ್ಶ ವಿದ್ಯಾಲಯವನ್ನು ಯಶಸ್ವಿಯಾಗಿ ನಡೆಸುವಷ್ಟೇ ಮಹತ್ವದ ಕೆಲಸವಾಗಿತ್ತು. ಅದಕ್ಕಾಗಿ ಬೂಕರ್ ಊರೂರು ತಿರುಗಿ ಉಪನ್ಯಾಸವಿತ್ತನು. " ಶಿಕ್ಷಣ ಪಡೆದು ಅನುಭವ ಜ್ಞಾನವನ್ನು ಗಳಿಸಿದ ಜನರು ದೇಶಕ್ಕೆ ದೊಡ್ಡ ಆಸ್ತಿ. ಬಿಳಿಯರ ಮಾರ್ಗದರ್ಶನಕ್ಕಾಗಿ ದಾರಿ ಕಾಯದೆ ತಮ್ಮ ಕೆಲಸ ತಾವೇ ಮಾಡಿಕೊಳ್ಳುವ ಅನುಭವವನ್ನು ನಮ್ಮ ಮಕ್ಕಳು ಪಡೆಯಬೇಕು; ತಮ್ಮ ನಾಯಕನನ್ನು ತಮ್ಮೊಳಗಿಂದಲೇ ತಯಾರಿಸಲು ಪ್ರಯತ್ನಿಸಬೇಕು " ಎಂಬ ಮಾತನ್ನು ತನ್ನ ಜನರಲ್ಲಿ ಹೋದ ಹೋದಲ್ಲಿ ಬಿಂಬಿಸಿದನು.

ಬೂಕರ್ ಹಿಡಿದ ಕೆಲಸಕ್ಕೆ ಗೆಲವಾದದ್ದು ಬರಿಯ ಸಭೆಗಳಲ್ಲಿ ಇತ್ತ ಉಪನ್ಯಾಸಗಳಿಂದಲ್ಲ. ಆತನ ವಿನಮ್ರ ಶಾಂತಸ್ವಭಾವ, ನಿರಾಶೆಯನ್ನರಿಯದ ದೃಢವೃತ್ತಿ, ಕೈಕೊಂಡ ಕಾರ್ಯದಲ್ಲಿ ಆಂತರಿಕ ಶ್ರದ್ಧೆ-ಇವುಗಳ ತ್ರಿವೇಣೀ ಸಂಗಮವೇ ಆತನ ಗೆಲವಿನ ಗುಟ್ಟು. ಅನೇಕ ವಿರೋಧಿಗಳನ್ನೂ ಆತನ ಈ ಸದ್ಗುಣಗಳು ತಲೆಬಗ್ಗಿಸುವಂತೆ ಮಾಡಿದವು. ಈ ಶಾಲೆಯ ಉಪಾಧ್ಯಾಯನೊಬ್ಬ ಒಮ್ಮೆ

ಟಸ್ಕೆಗಿಯ ಒಬ್ಬ ವ್ಯಾಪಾರಿಗೆ ಕೋಪ ಬರುವಂತೆ ವರ್ತಿಸಿದ. ಅವನ ಕಡೆ ಯವರು ಏರಿ ಬಂದರು. ವಾಶಿಂಗ್ಟನ್ ಅವರೆದುರಿಗೆ ಹೋಗಿ ನಿಂತ. ತಾಳ್ಮೆ ಯಿಂದ, "ನಾವೇನೋ ತಿಳಿಯದ ಜನ; ಶಾಸನ ತಪ್ಪಿ ನಡೆದಿರಬಹುದು. ಬಲ್ಲವ ರಾದ ಬಿಳಿಯರು ತಾವು ಶಾಸನವನ್ನು ಗೌರವಿಸಿ ನಡೆಯುವಂತಹರು. ತಮ್ಮಂತ ಹರು ಶಾಸನಬಿಟ್ಟು ನಡೆದು ಟಸ್ಕೆಗಿಗೆ ಕಪ್ಪು ಬಳಿಯುವದು ನ್ಯಾಯವೆ ?" ಎಂದು ವಿನಯದಿಂದ ಕೇಳಿದ. ಬಂದ ಬಿಳಿಯರ ಗುಂಪು ನಾಚಿಕೆಗೊಂಡು ಹಿಂದಿರುಗಿತು. ಅವನ ಈ ಬಗೆಯ ವೃತ್ತಿ, ಕಾರ್ಯನಿಷ್ಠೆಗಳು ಅವನಿಗೆ ಹಲವು ಮಿತ್ರರನ್ನು ಒದಗಿಸಿ ಕೊಟ್ಟವು. ಕಷ್ಟದಶೆಯಲ್ಲಿದ್ದ ಶಾಲೆಗಾಗಿ ದುಡಿಯಲು ನಿಗ್ರೋಗಳು ಮುಂದೆ ಬಂದರು. ಅನೇಕ ಬಿಳಿಯರು ಧನಸಹಾಯ ನೀಡಿದರು.

ಇನ್ನೊಂದು ಪ್ರಸಂಗ: ವಾಶಿಂಗ್ಟನ್ ಬೀದಿಯಲ್ಲಿ ಹೋಗುತ್ತಿದ್ದ. ವಾರ್ನರ್ ಭವನದ ಯಜಮಾನಿ ಅವನನ್ನು ಗುರುತಿಸದೆ ಕಟ್ಟಿಗೆ ಒಡೆಯಲು ಹೇಳಿದಳು. ಟಸ್ಕೆಗೀ ವಿದ್ಯಾಲಯದ ಅಧ್ಯಕ್ಷ ವಾಶಿಂಗ್ಟನ್ ಅಂಗಿತೆಗೆದಿಟ್ಟು, ಕಟ್ಟಿಗೆ ಒಡೆದು, ಒಡೆದ ಕಟ್ಟಿಗೆಯ ರಾಶಿಯನ್ನು ಮನೆಯೊಳಗೊಯ್ದು ಒಟ್ಟಿ ಬಂದ. ಹಿಂದುಗಡೆ ಅವನಾರೆಂಬುದು ತಿಳಿದು ಆ ಯಜಮಾನಿ ತನ್ನ ತಾನು ಹಳಿದುಕೊಂಡಳು! ಮರುದಿನ ಬೆಳಗಾಗುತ್ತಲೇ ಆಕೆ ವಾಶಿಂಗ್ಟನ್ನನಿದ್ದಲ್ಲಿಗೆ ಬಂದು ತನ್ನದು ಮಹಾಪರಾಧವಾಯಿ ತೆಂದು ಕ್ಷಮೆ ಕೇಳಿದಳು. ಅದಕ್ಕೆ ಆ ಮಹಾನುಭಾವ ಹೇಳಿದ : "ನನಗೆ ಕೆಲಸ ವೆಂದರೆ ತುಂಬಾ ಹುರುಪು—ಸ್ನೇಹಿತರಿಗೆ ನೆರವಾಗುವದಂತೂ ಬಲು ಸಂತೋಷದ ವಿಷಯ. ನೀವೇನೂ ತಿಳಿದುಕೊಳ್ಳಬೇಡಿರಿ." ಅವನ ಈ ಸದ್ಗುಣಗಳನ್ನು ಆಕೆ ಮೆಚ್ಚಿಕೊಂಡಳು. ಶಾಲೆಯ ಹಿತಚಿಂತಕಳಾಗಿ ಸಾವಿರಾರು ಡಾಲರುಗಳ ನಿಧಿ ಯನ್ನು ಕೂಡಿಸಿಕೊಟ್ಟಳು. ಹೀಗೆ ತನ್ನ ಗುಣಗಳ ಬಂಡವಾಳದಿಂದಲೇ ತನ್ನ ಸಂಸ್ಥೆಯನ್ನು ಬೆಳೆಸಿದ ಮಹಾತ್ಮನೀತ !

ಅಟ್ಲಾಂಟದ ಹತ್ತಿಬೆಳೆಯುವ ಪ್ರಾಂತಗಳ ವಸ್ತು ಪ್ರದರ್ಶದ ಸಂದರ್ಭದಲ್ಲಿ ಮಾತನಾಡಲು ವಾಶಿಂಗ್ಟನ್ನನಿಗೆ ಆಮಂತ್ರಣ ಬಂದಿತ್ತು. ಗವರ್ನರ್ ಬುಲಕ್ ಬಿಳಿಯರ ಪ್ರಚಂಡ ಸಭೆಗೆ ಆತನನ್ನು ಪರಿಚಯ ಮಾಡಿಕೊಟ್ಟನು. ಬಿಳಿಯ ಉಚ್ಚಾಧಿಕಾರಿಯೊಬ್ಬನು ನಿಗ್ರೋವನ್ನು ಪ್ರಶಂಸಿಸಿ ತಮ್ಮ ಜನಕ್ಕೆ ಗುರುತು ಮಾಡಿ ಕೊಟ್ಟನು ! ಕರಿಯ ವರ್ಣದವರು ಬಿಳಿಯರ ಸಭೆಗಳಲ್ಲಿ ಉಪನ್ಯಾಸವನ್ನೀಯು ವದು ಆ ಕಾಲಕ್ಕೆ ಅಸಾಮಾನ್ಯ ಸಂಗತಿಯಾಗಿತ್ತು. ಅಲ್ಲಿ ವಾಶಿಂಗ್ಟನ್ ನಯ ವಾದ ಹೃದಯಸ್ಪರ್ಶಿಯಾದ ಭಾಷಣವನ್ನಿತ್ತನು—"ನಿಮ್ಮಲ್ಲಿರುವ ನಮ್ಮ ಭಕ್ತಿ ಯನ್ನು ಬಹುಮುಖವಾಗಿ ನಾವು ತೋರಿಸಿದ್ದೇವೆ. ನಿಮ್ಮ ಮಕ್ಕಳನ್ನು ಜೋಪಾನ ಮಾಡಿದ್ದೇವೆ; ನಿಮ್ಮ ಬೇನೆಯ ತಂದೆ-ತಾಯಿಗಳ ಹಾಸುಗೆಯ ಪಕ್ಕದಲ್ಲಿ ಕಾದಿ ದ್ದೇವೆ; ನಿಮ್ಮ ಶ್ರೇಯಸ್ಸಿಗಾಗಿ ಹೀಗೆಯೆ ಮುಂದೆಯೂ ದುಡಿಯುತ್ತೇವೆ. ನಮ್ಮಿ ಬ್ಬರ ಏಳಿಗೆಯೂ ಒಂದೇ ಎಂಬ ಭಾವನೆಯಿಂದ ಕೈಗಾರಿಕೆ, ಬೇಸಾಯ, ವಾಣಿಜ್ಯ

ಮೊದಲಾಗಿ ಎಲ್ಲ ಕ್ಷೇತ್ರಗಳಲ್ಲಿಯೂ ಸಹಕರಿಸುತ್ತೇವೆ." ಗವರ್ನರ್ ಬುಲಕ್ ಆನಂದದಿಂದ ಆತನ ಕೈಕುಲುಕಿದನು; ಸಭೆ ಹರ್ಷಧ್ವನಿಗೈಯಿತು; ಪತ್ರಿಕೆಗಳು ಪ್ರಶಂಸಿಸಿದವು. ಮುಂದೆ ಚಿಕ್ಯಾಗೋ ಸಭೆಯೊಂದರಲ್ಲಿ ಅಧ್ಯಕ್ಷ ಮೆಕ್ಕರ್ ಸಮ್ಮುಖ ದಲ್ಲಿ ಇಂತಹದೇ ಭಾಷಣವನ್ನು ಆತನು ಮಾಡಿದನು. 'ತನಗಿಂತ ಅದೃಷ್ಟ ಹೀನ ರಾದವರೊಡನೆ ಬೆರೆತಾಗಲೇ ಘನವಂತರ ಪರೀಕ್ಷೆಯಾಗುವುದು' ಎಂದು ಬಿಳಿಯ ರಿಗೆ ಹೇಳಿದನು. ವಾಶಿಂಗ್ಟನ್ನನು ಕಾರ್ಯಕೌಶಲ, ಸ್ವಭಾವದ ಸವಿಗಳ ಸಾಧನ ದಿಂದ ನಿಗ್ರೋಗಳನ್ನು ಬಿಳಿಯರ ಹತ್ತಿರಕ್ಕೆ ಕರೆದೊಯ್ದು ಅವರನ್ನು ಇವರ ಹತ್ತಿರಕ್ಕೆ ತಂದನು.

ಈ ಮಹಾತ್ಮನಿಂದ ತನ್ನ ಜನರ ಉದ್ಧಾರಕ್ಕಾಗಿ ಒಂದು ಮಹಾವಿದ್ಯಾ ಸಂಸ್ಥೆಯು ನಿರ್ಮಿತವಾಯಿತು. ಉದಾತ್ತ ಆದರ್ಶದ ಗುರು ಬೂಕರ್ ವಿದ್ಯಾರ್ಥಿ ಗಳಿಗೆ ಹಿರಿಯ ಸ್ನೇಹಿತನಾಗಿದ್ದ. ಆದರೆ ಯಾರಾದರೂ ಕರ್ತವ್ಯದಲ್ಲಿ ಅಶ್ರದ್ಧೆ ತೋರಿದರೆ ಬೂಕರ್ ಅವರನ್ನು ಶಿಕ್ಷಿಸದೆ ಇರುತ್ತಿರಲಿಲ್ಲ. ಮುಂದೆ ಸ್ವಲ್ಪ ಹೊತ್ತಿನಲ್ಲಿ ಅವರೊಡನೆ ನಿಂತು ಅವರಿಂದಲೇ ಕೆಲಸ ಮಾಡಿಸುತ್ತಿದ್ದನು. ವಿದ್ಯಾರ್ಥಿ ಗಳ ನಡತೆಯನ್ನು ತಿದ್ದುವದು ಶಿಕ್ಷಣದ ಒಂದು ಮುಖ್ಯ ಗುರಿಯೆಂದು ವಾಶಿಂಗ್ಟನ್ ತಿಳಿದಿದ್ದನು. ಉಪಾಧ್ಯಾಯರೂ ವಿದ್ಯಾರ್ಥಿಗಳೂ ಶಿಸ್ತನ್ನು ಪಾಲಿಸುವದಕ್ಕೆ ವಿಶೇಷ ಗಮನ ಕೊಡುತ್ತಿದ್ದರು. ಛಾತ್ರರ ವ್ಯಾಸಂಗಕ್ಕಾಗಿ ಕೆಲಸಮಯ ನಿರ್ದಿಷ್ಟವಾಗಿತ್ತು. ಮಿಕ್ಕ ವೇಳೆಯಲ್ಲಿ ಅವರು ತಮ್ಮ ಕಟ್ಟಡಗಳಿಗೆ ಬೇಕಾಗುವ ಸಾಧನ ಸಾಮಗ್ರಿ ಗಳನ್ನು ಮಾಡುತ್ತಿದ್ದರು.

ನಿಗ್ರೋಗಳಿಗೆ ಶಾಸ್ತ್ರೀಯ ವ್ಯವಸಾಯವನ್ನು ಕಲಿಸುವದಕ್ಕಾಗಿ ಟಸ್ಕೆಗಿಯಲ್ಲಿ ಸಂಶೋಧನಾ ಕೇಂದ್ರವನ್ನು ತೆರೆಯಲು ಶಾಸನ ಸಭೆಯಲ್ಲಿ ವಾಶಿಂಗ್ಟನ್ ವಾದಿಸಿ ದನು. ಈ ಕ್ಷೇತ್ರದಲ್ಲಿ ಪರಿಶ್ರಮವುಳ್ಳ ಕಾರ್ವನ್ ಎಂಬಾತನಿಗೆ ಪ್ರಯೋಗ ಶಾಲೆ ಯನ್ನು ಒಪ್ಪಿಸಿದನು. ಅನೇಕ ಹೊಸ ಶೋಧನಗಳಾದವು. ಸುತ್ತಲಿನ ತೋಟಿಗರು ಈ ಸಂಶೋಧನದ ಪ್ರಯೋಜನವನ್ನು ಚೆನ್ನಾಗಿ ಪಡೆದರು. ಇಡೀ ದೇಶದ ವ್ಯವ ಸಾಯವೇ ಯಾವ ಕಾಲಕ್ಕೂ ಹಿರಿಮೆಯಿಂದ ನಡೆಯುವಂತಾಯಿತು. ಸುತ್ತಲಿನ ಪ್ರದೇಶಗಳಲ್ಲಿ ಈ ಸಂಸ್ಥೆಯವರು ಪ್ರಚಾರ ಪ್ರದರ್ಶನಗಳನ್ನೇರ್ಪಡಿಸುತ್ತಿದ್ದರು. ಮುಂದೆ ಈ ಪ್ರಚಾರಕಾರ್ಯಕ್ಕಾಗಿ ಕುದುರೆಗಾಡಿ ಏರ್ಪಾಡಾಯಿತು. ಕಾಲಾಂತರ ದಲ್ಲಿ ಈ ಯೋಜನೆ "ಚಲಿಸುವ ಶಾಲೆ" ಎಂದು ಹೆಸರಾಯಿತು. ವಾಶಿಂಗ್ಟನ್ ತನ್ನ ಶರೀರದ ಗತಿ ಏನಾದೀತೆಂದು ಗಮನಿಸದೆ ದುಡಿದ ಫಲವಾಗಿ ಸಂಸ್ಥೆ ಇಷ್ಟೆಲ್ಲಾ ಬೆಳೆಯಿತು. ಆದರೂ ಅವನು 'ಇನ್ನೂ ಮಾಡಬೇಕಾದದ್ದು ಬಹಳವಿದೆ, ಕಾಲ ಮಾತ್ರ ಅಲ್ಪ' ಎನ್ನುತ್ತಿದ್ದನು.

ಇಂದು ಟಸ್ಕೆಗೀ ಶಾಲೆಯಲ್ಲಿ ೩೧೦ ಜನ ಉಪಾಧ್ಯಾಯರಿದ್ದಾರೆ; ೧೩೩ ಕಟ್ಟಡಗಳಿವೆ; ೩೫೩೦ ಎಕರೆಗಳ ವಿಶಾಲವಾದ ಆವಾರವಿದೆ. ಈ ಶಾಲೆಯು

ಮಾದರಿಯನ್ನನುಸರಿಸಿ ಬೇರೆ ೧೪ ಕೈಗಾರಿಕೆ ಶಾಲೆಗಳಾಗಿವೆ. 'ಗ್ರಾಮಾಂತರಗಳ ನಿಗ್ರೋಗಳ ಅಭಿವೃದ್ಧಿಗೆ ಎಷ್ಟು ಹಣ ವಿನಿಯೋಗಿಸಿದರೂ ಸಾಲದೆ'ಂದು ಜೂಲಿಯಸ್ ರೊಸೆನ್ ವಾಲ್ಡನ್ನನು ಒಂದು ನಿಧಿಯನ್ನು ಸ್ಥಾಪಿಸಿದ್ದಾನೆ. ಈ ಏರ್ಪಾಡಿನಿಂದ ಈಗ ೫೦೦೦ ಶಾಲೆಗಳು ನಡೆದಿವೆ; ಲಕ್ಷಾಂತರ ವಿದ್ಯಾರ್ಥಿಗಳು ವಿದ್ಯಾರ್ಜನೆ ಮಾಡುತ್ತಿದ್ದಾರೆ.

ಬೂಕರನ ನಿರ್ಮಲ ನಿಃಸ್ವಾರ್ಥ ಸೇವೆಯನ್ನು ಮೆಚ್ಚಿದ ಅಧ್ಯಕ್ಷ ಥಿಯೊಡೋರ್ ರೂಸ್‌ವೆಲ್ಟನು ಈತನಲ್ಲಿ ಸ್ನೇಹ ಬೆಳೆಸಿದನು. ಹಾರ್ವರ್ಡ್ ವಿಶ್ವವಿದ್ಯಾಲಯವು ಈತನನ್ನು ಪ್ರಶಸ್ತಿಕೊಟ್ಟು ಸನ್ಮಾನಿಸಿತು; ನಿಗ್ರೋವಿಗೆ ಆ ವಿಶ್ವವಿದ್ಯಾಲಯದ ಪ್ರಶಸ್ತಿ ದೊರೆತುದು ಇತಿಹಾಸದಲ್ಲಿಯೇ ಇದು ಮೊದಲನೆಯ ಬಾರಿ. ೧೯೧೫ನೆಯ ನವ್ಹೆಂಬರ್ ತಿಂಗಳಲ್ಲಿ ಬೂಕರ್ ತೀರಿಕೊಂಡನು. ಬಾಳ ಕೊನೆಯ ದಿನಗಳಲ್ಲಿ ತನ್ನ ಪ್ರೀತಿಯ ವಿದ್ಯಾಲಯಕ್ಕೆ ಬಂದು ಅಲ್ಲಿಯೇ ಅವನು ಚಿರವಿಶ್ರಾಂತಿ ಪಡೆದನು.

ಹಾರ್ವರ್ಡ್ ವಿಶ್ವವಿದ್ಯಾಲಯದವರು ವಾಶಿಂಗ್ಟನ್ನನ ಗೌರವಾರ್ಥವಾಗಿ ಏರ್ಪಡಿಸಿದ್ದ ಸಭೆಯ ಅಧ್ಯಕ್ಷರು 'ತನ್ನ ಜನಾಂಗಕ್ಕೆ ಮೇಲೇಳಲು ಕೈಗೊಟ್ಟ ದೇವರ ಮತ್ತು ದೇಶದ ಶ್ರೇಷ್ಠ ಸೇವಕನೆ'ಂದು ಈತನನ್ನು ಹೊಗಳಿದ್ದರಲ್ಲಿ ಸ್ವಲ್ಪವೂ ಮುಖಸ್ತುತಿಯ ಅತ್ಯುಕ್ತಿಯಿಲ್ಲ. ತನ್ನ ಹಿರಿ ಹೆಮ್ಮೆಯಿಂದ ಈತನು ಅಮೇರಿಕನ್ನರಿಗೆ ಚಿರಸ್ಮರಣೀಯನಾಗಿದ್ದಾನೆ; ಬಿಳಿ-ಕರಿಯರೆಲ್ಲರೂ ಈತನನ್ನು ಅಭಿಮಾನದಿಂದ ಆದರಿಸುತ್ತಾರೆ. ಈತನ ಸ್ಮರಣೆಗಾಗಿ ಸರಕಾರವು ೫೦ ಸೆಂಟಿನ ನಾಣ್ಯಗಳನ್ನು ಅಚ್ಚು ಹಾಕಿಸಿತು. ೧೯೪೫ರಲ್ಲಿ ನ್ಯೂಯಾರ್ಕಿನ 'ಹೌಸ್ ಆಫ್ ಫೇಮ್'ದಲ್ಲಿ ಈತನ ಭಾವಚಿತ್ರವನ್ನು ಪ್ರತಿಷ್ಠಿಸಲಾಯಿತು. "ನೀನು ಎಷ್ಟು ದೀನನಾಗಿದ್ದರೇನು ? ಎಷ್ಟು ಕಪ್ಪಾಗಿದ್ದರೇನು ? ಸಮಾಜದಲ್ಲಿ ಯಾವ ಸ್ಥಾನ ಪಡೆದಿದ್ದರೇನು ? ಎಲ್ಲರಿಗೂ ಮುಂದುವರಿಯಲು ಅವಕಾಶವಿದೆ. ನಾವು ಎಷ್ಟು ಕಷ್ಟಗಳನ್ನು ಎದುರಿಸುವೆವೊ ಅಷ್ಟು ಹೆಚ್ಚಿನ ಜಯವನ್ನು ಪಡೆಯಬಹುದು" ಎಂಬ ವಾಶಿಂಗ್ಟನ್ನನ ಮಾತುಗಳು ವಿಶಾಲ ಮಾನವ ಜನಾಂಗದ ಏಳಿಗೆಯ ದೃಷ್ಟಿಯಿಂದ ದುಡಿಯಲು ನಮ್ಮನ್ನು ಯಾವಾಗಲೂ ಚೇತನಗೊಳಿಸುತ್ತಿವೆ.

## ಅಭ್ಯಸನಗಳು

ಪ್ರಶ್ನೆಗಳು :—

(೧) ಬೂಕರ ಟಿ. ವಾಶಿಂಗ್ಟನ್ನನು ಯಾವ ಪರಿಸ್ಥಿತಿಯಲ್ಲಿ ಹುಟ್ಟಿ ಬೆಳೆದನು ?

(೨) ವಾಶಿಂಗಟನ್ನನು ಕಲಿಯುವ ಹಸಿವನ್ನು ಹೇಗೆ ಹಿಂಗಿಸಿಕೊಂಡನು ?

(೩) 'ಟಸ್ಕೆಗಿ' ಯಲ್ಲಿ ಸಂಸ್ಥೆಯನ್ನು ಕಟ್ಟಲು ವಾಶಿಂಗ್ಟನ್ನನು ಮಾಡಿದ ಪ್ರಯತ್ನಗಳಾವು ?

(೪) ವಾಶಿಂಗ್ಟನ್ನನು ಬಿಳಿಯರ ಮನಸ್ಸನ್ನು ತನ್ನ ಮಾತಿನ ಚಾತುರ್ಯದಿಂದ ಹೇಗೆ ಒಲಿಸಿಕೊಂಡನು ?

(೫) ಟಸ್ಕೆಗಿಯಲ್ಲಿ ವಾಶಿಂಗ್ಟನ್ನನು ಸಂಸ್ಥಾಪಿಸಿದ ಸಂಸ್ಥೆಯು ಇಂದು ವಿದ್ಯಾದಾನದ ಕಾರ್ಯದಲ್ಲಿ ಹೇಗೆ ಕೆಲಸ ಮಾಡುತ್ತಿದೆ ?

(೬) ವಾಶಿಂಗ್ಟನ್ನನ ಗೆಲವಿನ ಗುಟ್ಟು ಏತರಲ್ಲಿ ಅಡಗಿದೆ ?

**ಭಾಷಾಭ್ಯಾಸ :—**

(೧) [೧] ' ಬಡತನದಿಂದ ತೊಳಲಿ ಬೇನೆ ಬೇಸರಿಕೆಗಳಿಂದ ಬಳಲಿ ನಿರ್ವಿಣ್ಣವಾಗಿದೆ ನಿಗ್ರೋ ಜನಾಂಗ.'

[೨] ' ನಿಗ್ರೋ ಜನರ ಭಾಗ್ಯ ವಿಧಾತನೀತ ! '

[೩] ತನ್ನ ಗುಣಗಳ ಬಂಡವಾಳದಿಂದಲೇ ತನ್ನ ಸಂಸ್ಥೆಯನ್ನು ಬೆಳೆಯಿಸಿದ ಮಹಾತ್ಮನೀತ.

ಹೀಗೆ ಕರ್ತೃ ಪದವನ್ನು ಕೊನೆಗೆ ಇಡುವದರಿಂದ ಆಗುವ ಪರಿಣಾಮವನ್ನು ನಿರೀಕ್ಷಿಸಬೇಕು.

(೨) ಕೆಳಗಿನ ವಾಕ್ಯಗಳಲ್ಲಿಯ ವಿಚಾರವನ್ನು ತಿಳಿಯಾಗಿ ಬರೆಯಿರಿ.

[೧] ಊಟ, ವಸತಿ, ಶಿಕ್ಷಣಗಳ ವೆಚ್ಚಕ್ಕಾಗಿ ಬೂಕರನಿಗೆ ತನ್ನ ತೋಳುಗಳೇ ಆಧಾರವಾಗಿದ್ದವು.

[೨] ' ಕಾವ್ಯ ರಚನೆಯಲ್ಲಿ, ವಾಚನದಲ್ಲಿ ಇರುವಷ್ಟೇ ಗಾಂಭೀರ್ಯ ಗೌರವ ಗಳು ಹೊಲದ ಕಷ್ಟಗಳಲ್ಲಿಯೂ ಇವೆ.'

**ಶಬ್ದ ವಿಚಾರ :—**

(೧) ಅಕ್ಷರಶೂನ್ಯ, ಜ್ಞಾನಶೂನ್ಯ — ಹೀಗೆ ಶೂನ್ಯ ಶಬ್ದದಿಂದ ಕೊನೆಗೊಳ್ಳುವ ಐದು ಶಬ್ದಗಳನ್ನು ಬರೆಯಿರಿ.

(೨) ಕರ್ತೃತ್ವಶಕ್ತಿ, ಆಂತರಿಕಶ್ರದ್ಧೆ, ಭಾಗ್ಯವಿಧಾತ, ತ್ರಿವೇಣೀ ಸಂಗಮ, ವೃತ್ತಿ ಶಿಕ್ಷಣ — ಇವುಗಳ ಅರ್ಥವನ್ನು ಹೇಳಿರಿ.

(೩) ವರ್ಣ, ವಿಸ್ತಾರ, ಬಗ್ಗ, ಬಳ್ಳಿ, ವಿನಾಯಕ, ಬಸವ — ಇವುಗಳ ತತ್ಸಮ ತದ್ಭವ ರೂಪಗಳನ್ನು ಹೇಳಿರಿ.

(೪) ತಿಳುವಳಿಕೆ, ಗೆಲುವು, ಹಿರಿಯತನ, ಬಾಳುವೆ, ಹಾಸುಗೆ — ಇವುಗಳ ರೂಪ ಸಿದ್ಧಿಯನ್ನು ಹೇಳಿರಿ.

(೫) ವಾಶಿಂಗ್ಟನ್ನನ ಸ್ವಭಾವವನ್ನು ಬಣ್ಣಿಸುವ ಶಬ್ದಗಳನ್ನು ಹುಡುಕಿ ಹೇಳಿರಿ.
ಉದಾ :— ಭಾಗ್ಯವಿಧಾತ, ಹಿತಚಿಂತಕ, ವಿನಯಶಾಲಿ — ಇತ್ಯಾದಿ.

**ವಾಕ್‌ಶಿಕ್ಷಣ :—**

ಕಾರ್ಯನಿಸ್ಟೆ, ನೀರಾಸೆ, ಪ್ರಸಂಶಿಸು, ಸ್ವೇತವರ್ಣ — ಈ ಶಬ್ದಗಳ ಶುದ್ಧರೂಪ ವನ್ನು ಬರೆಯಿರಿ.

**ಚರ್ಚೆ :—**

ಶ್ರಮಜೀವಿಗಳಲ್ಲಿ ಮತ್ತು ಬೌದ್ಧಿಕಜೀವಿಗಳಲ್ಲಿ ಭೇದವಿರಕೂಡದು.

**ಬರೆಹ :—**

(೧) ವಾಶಿಂಗ್ಟನ್ನನ ಚರಿತ್ರೆಯನ್ನು ಸಂಕ್ಷೇಪಿಸಿ ಬರೆಯಿರಿ.

(೨) ವಾಶಿಂಗ್ಟನ್ನನ ಅನುಕರಣೀಯ ಗುಣಗಳನ್ನು ಸಂಗ್ರಹಿಸಿ ಬರೆಯಿರಿ.

(೩) ನಮ್ಮ ನಾಡಿನ ಲಮಾಣಿ, ಹರಿಜನ, ಬೇಡ ಇಂತಹ ಒಂದು ಜನಾಂಗದಲ್ಲಿ ಹುಟ್ಟಿದ ಬೂಕರ್ ಟಿ. ವಾಶಿಂಗ್ಟನ್ನನಂತಹನು ನಾನು ಎಂದು ಬಗೆದು, ತನ್ನ ಜನದ ಏಳ್ಗೆಗಾಗಿ ಯಾವ ಬಗೆಯಲ್ಲಿ ದುಡಿಯಬಹುದು ಎಂಬುದನ್ನು ಕಲ್ಪಿಸಿ ನಿಮ್ಮ ಒಂದು ಆತ್ಮಚರಿತ್ರೆಯನ್ನು ಬರೆಯಿರಿ.

# ೧೨. ಮಾನವನ ಮೊತ್ತಮೊದಲಿನ ಗೆಳೆಯ—ನಾಯಿ

[ ಯಾವದಾದರೊಂದು ಪ್ರಾಣಿ ಇಲ್ಲವೆ ವನಸ್ಪತಿಯ ಅಭ್ಯಾಸವನ್ನು ಮಾಡುವ ಒಂದು ಮಾದರಿಯನ್ನು ಇಲ್ಲಿ ಕಾಣಬಹುದು. ]

ಮಾನವನಿಗೆ 'ಪ್ರಾಣಿ' ಯೆಂದು ಹೇಳಿದರೆ ಅವನನ್ನು ಕೀಳುಬಗೆದಂತಾಯಿತೆಂದು ಭಾವಿಸುವವರಿದ್ದಾರೆ. ಪ್ರಾಣವಿದ್ದುದು ಪ್ರಾಣಿಯಲ್ಲವೆ? ಇತರ ಪ್ರಾಣಿಗಳಂತೆ ಮಾನವನಿಗೂ ಪ್ರಾಣವಿದೆ. ಪೃಥ್ವಿಯ ಮೇಲಿನ ಎಲ್ಲ ಪ್ರಾಣಿಗಳಲ್ಲಿಯೂ ಜೀವನ ಸ್ಪರ್ಧೆ ನಡೆದೇ ಇದೆ. ಪ್ರತಿಯೊಂದು ಪ್ರಾಣಿಯು ತನ್ನ ಪೀಳಿಗೆಯನ್ನು ಉಳಿಸಿಕೊಳ್ಳುವದಕ್ಕಾಗಿ ಸತತ ಪ್ರಯತ್ನಿಸುತ್ತಿದೆ. ಈ ಸೃಷ್ಟಿ ನಿಯಮಕ್ಕೆ ಮನುಷ್ಯನೂ ಹೊರತಾದವನಲ್ಲ. ಮನುಷ್ಯನಿಗೆ ಉಳಿದ ಪ್ರಾಣಿಗಳಂತೆ ಪಂಚೇಂದ್ರಿಯಗಳು ಇರುವವಲ್ಲದೆ, ಅವನಲ್ಲಿ ಇನ್ನೂ ಒಂದು ಹೆಚ್ಚಿನ ಗುಣವಿದೆ. ಅದೆಂದರೆ ಅವನ ಬುದ್ಧಿ—ವಿಚಾರಶಕ್ತಿ. ಮನುಷ್ಯನಲ್ಲಿ ಇರುವಷ್ಟು ಈ ಶಕ್ತಿಯು ಇನ್ನಾವ ಪ್ರಾಣಿಗಳಲ್ಲಿಯೂ ಇಲ್ಲ. ಈ ಶಕ್ತಿಯಿಂದಲೇ ಮನುಷ್ಯನು ಈವರೆಗೆ ಬದುಕಿ ಉಳಿದುಕೊಂಡು ಬಂದಿದ್ದಾನೆ. ಮಾನವನ ಸಂಗಡವೇ ಉದಯಕ್ಕೆ ಬಂದ ಕೆಲವು ಪ್ರಾಣಿಗಳು ದೇಹದಿಂದ ಎಷ್ಟೇ ಬಲಾಢ್ಯವಾಗಿದ್ದರೂ ಈಗ ಹೇಳಹೆಸರಿಲ್ಲವಾಗಿವೆ. ತನ್ನ ಬುದ್ಧಿಯ ಸಾಮರ್ಥ್ಯದಿಂದ ಮನುಷ್ಯನು ಇತರ ಪ್ರಾಣಿಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡುದಲ್ಲದೆ ಅವುಗಳಿಂದ ತನ್ನ ಬಾಳಿಗೆ ನೆರವನ್ನೂ ಪಡೆದುಕೊಂಡಿದ್ದಾನೆ. ಅದೆಷ್ಟೋ ಕಾಡು ಪ್ರಾಣಿಗಳನ್ನು ಸಾಕು ಪ್ರಾಣಿಗಳನ್ನಾಗಿ ಮಾರ್ಪಡಿಸಿಕೊಂಡಿದ್ದಾನೆ. ಎಮ್ಮೆ, ಆಕಳು, ಎತ್ತು, ಕೋಳಿ ಮುಂತಾದ ಪ್ರಾಣಿಗಳು ಈ ಬಗೆಯ ಪ್ರಯತ್ನದಿಂದಲೇ ಮಾನವನಿಗೆ ಲಭ್ಯವಾಗಿವೆ.

ನಾಯಿಯು ಮನುಷ್ಯನ ಮೊತ್ತ ಮೊದಲಿನ ಸಾಕು ಪ್ರಾಣಿ ಎಂದು ಅನೇಕ ಸಂಗತಿಗಳ ಮೇಲಿಂದ ನಿಶ್ಚಿತವಾಗಿ ಗೊತ್ತಾಗುತ್ತದೆ. ಸುಮಾರು ೫೦ ಸಾವಿರ ವರುಷಗಳಷ್ಟು ಪ್ರಾಚೀನವೆಂದು ಗಣಿಸಲ್ಪಟ್ಟ ಪ್ರಾಥಮಿಕ ಶಿಲಾಚಿತ್ರವೊಂದರಲ್ಲಿ ಮನುಷ್ಯಾಕೃತಿಯೊಡನೆ ನಾಯಿಯಂತೆ ಕಾಣುವ ಒಂದು ಪ್ರಾಣಿಯದೂ ಉಂಟು. ಅದು ನಾಯಿಯ ಪೂರ್ವಜ ತೋಳನಾಗಿರುವ ಸಂಭವವೂ ಉಂಟೆಂದು ಬಲ್ಲವರ ಊಹೆಯಿದೆ. ಇದು ಹೇಗೆ ಮತ್ತು ಯಾವ ಕ್ರಮದಲ್ಲಿ ಮನುಷ್ಯನ ಸಲುಗೆಯ ಸಾಕು ಪ್ರಾಣಿಯಾಯಿತೆಂಬುದನ್ನು ನಿರ್ಧರಿಸುವುದು ಕಷ್ಟವಾದರೂ ತೋಳಗಳ ಜಾತಿಯ ಪ್ರಾಣಿಯಿಂದ, ಮಾನವನು ಇದನ್ನು ತನ್ನ ಜೊತೆಗಾರನಾಗಿ ಆಯ್ದುಕೊಂಡನೆಂಬುದರಲ್ಲಿ ಸಂದೇಹವಿಲ್ಲ. ಪ್ರಾಥಮಿಕ ಸ್ಥಿತಿಯ ಮಾನವರಿಗೆ ಬೇಟೆಯೇ ಜೀವನೋಪಾಯವಾಗಿತ್ತು. ಆಗ ಮನುಷ್ಯರು ತಮ್ಮ ಆಹಾರದಲ್ಲಿ ಉಳಿದು ಚೆಲ್ಲಿದ ಭಾಗ ತಿನ್ನಲು ಸವಿಗಲಿತು ಹತ್ತಿರ ಬಂದ ಪ್ರಾಣಿಯೇ ಇದಾಗಿರಬೇಕೆಂದು ಕೆಲವರ ಅಭಿಪ್ರಾಯವಿದೆ.

ನಾಯಿಯು ತೋಳಗಳ ಕುಲಕ್ಕೆ ಸೇರಿದ ಪ್ರಾಣಿ; ಆದರೆ ಇಂದು ತೋಳ ಮತ್ತು ನಾಯಿ ಇವೆರಡರ ಗುಣಗಳಲ್ಲಿ ತುಂಬ ವ್ಯತ್ಯಾಸವಾಗಿದೆ. ತೋಳ ಮತ್ತು ನರಿಗಳು ಯಾವಾಗಲೂ ತಮ್ಮ ಗುಂಪುಗೂಡಿ ಸಂಚರಿಸುತ್ತವೆ. ಆದರೆ ಇಂದು ಸಾಕಿದ ನಾಯಿಯು ತನ್ನ ವರ್ಗದ್ದೆ ಆದ ಇನ್ನೊಂದು ನಾಯಿ ಹತ್ತಿರ ಬಂದರೆ ರೋಸಿನಿಂದ ಬೊಗಳಿ ಜಗಳಾಡಲು ಹೋಗುವುದು. ಇಂದಿನ ನಾಯಿಯ ಗುಣವು ಮನುಷ್ಯನ ಸಹವಾಸದ ಫಲವಾಗಿದೆ. ಆದರೆ ಈಗಲೂ ನಾಯಿಯಲ್ಲಿ ತೋಳದ ಜಾತಿಯ ಹಲವು ಗುಣಸ್ವಭಾವಗಳು ಉಳಿದುಕೊಂಡುದನ್ನು ಕಾಣಬಹುದು. ತೋಳನ ಹೆಸರು ಕೇಳಿದ ಕೂಡಲೆ ಸಾಮಾನ್ಯವಾಗಿ ಹೆದರಿಕೆಯುಂಟಾಗುತ್ತದೆ. ಅದರ ಭಯಾನಕ ಚಿತ್ರವು ಕಣ್ಣೆದುರು ನಿಲ್ಲುತ್ತದೆ. ತೋಳವು ಹುಲಿಸಿಂಹಗಳಂತೆ ಒಂದು ಭಯಾನಕ ಪ್ರಾಣಿಯಲ್ಲ. ಬೇಟೆಗಾರನಿಗೆ ಇದು ಹುಲಿಸಿಂಹಗಳಂತೆ ಮೈಮೇಲೆ ಏರಿಬಂದ ಅನುಭವವು ಇಲ್ಲವೆ ಇಲ್ಲವೆಂದರೂ ಸಲ್ಲುವುದು. ಮರಿಯಾಗಿದ್ದಾಗಲೆ ತಂದು ಸಾಕಿದ ತೋಳಗಳು ನಾಯಿಯಂತೆ ನೆಮ್ಮಿಗೆಯ ಪ್ರಾಣಿಯಾಗಿ ಅನುಸರಿಸುವವೆಂದು ಹಲವು ಪ್ರಯೋಗಗಳಿಂದ ಮನಗಂಡಿದ್ದಾರೆ; ಈ ಕಾರಣದಿಂದಲೇ ಮನುಷ್ಯರಿಗೆ ತೋಳದ ಜಾತಿಯ ಈ ಕಾಡುಪ್ರಾಣಿಗಳನ್ನು ಸಾಕುಪ್ರಾಣಿಗಳನ್ನಾಗಿ ಮಾಡಿಕೊಳ್ಳಲು ಸಾಧ್ಯವಾಯಿತು.

ನಾಯಿಯ ಗೆಳೆತನದಿಂದ ಮಾನವನು ಪಡೆದ ಲಾಭಗಳು ಅಷ್ಟಿಷ್ಟಲ್ಲ. ಆದಿಮಾನವರಿಗೆ ಆಹಾರವನ್ನು ಸಂಪಾದಿಸುವಲ್ಲಿ ನೆರವಾದ ಮಹೋಪಕಾರಿ ನಾಯಿ; ಅಂಗರಕ್ಷಕನಾದ ಸಂರಕ್ಷಕ ಮಿತ್ರ; ಗೃಹ ರಕ್ಷಕ ವೀರ; ಆಸರುಬೇಸರುಗಳಲ್ಲಿ ತನ್ನ ಲೀಲಾವಿನೋದಗಳಿಂದ ಮನರಂಜನೆ ಮಾಡುವ ಸುಹೃದ. ಕೃತಜ್ಞತೆಯಲ್ಲಂತೂ ನಾಯಿಯು ಮಾನವ ಲೋಕಕ್ಕೆಲ್ಲ ಗುರುವೆಂದು ಹೇಳಬಹುದು.

ನಾಯಿಯ ಅತಿ ಪ್ರಾಚೀನ ನಿಶ್ಚಿತವಾದ ಅವಶೇಷಗಳು ಪೂರ್ವ ಶಿಲಾಯುಗ ಕಾಲದಿಂದಲೂ ಕಂಡುಬರುವುವು. ಆ ಯುಗದಲ್ಲಿ ಮನುಷ್ಯನು ಕಲ್ಲಿನಿಂದ ತಯಾರಿಸಿದ ಆಯುಧಗಳನ್ನು ಉಪಯೋಗಿಸುತ್ತಿದ್ದನು. ಎಷ್ಟೋ ಸಲ ನಾಯಿಯ ಅಸ್ಥಿಗಳು ಈ ಯುಗದ ಮಾನವರ ಅಸ್ಥಿಗಳ ಸಂಗಡವೇ ಸಿಕ್ಕುತ್ತವೆ. ಆಗಿನ ಮಾನವನ ವಾಸಸ್ಥಳಗಳಲ್ಲಿ – ಗುಹೆಗಳಲ್ಲಿ ಮಾತ್ರವಲ್ಲ, ಗೋರಿಗಳಲ್ಲಿ ಕೂಡ ನಾಯಿ ಮನುಷ್ಯನೊಡನೆ ಇದ್ದ ಕುರುಹುಗಳು ದೊರೆಯುತ್ತವೆ.

ಋಗ್ವೇದ ಕಾಲದಷ್ಟು ಪ್ರಾಚೀನ ಗ್ರಂಥದಲ್ಲಿ ನಾಯಿಯ ಹೆಸರು ಕೇಳಬರುತ್ತದೆ. ಸಾರಮೇಯವೆಂಬ ಇಂದ್ರನ ನಾಯಿ ಇದ್ದಿತಂತೆ. ರುದ್ರ–ಶಿವನಿಗೆ ನಾಯಿಗಳ ಒಡೆಯನೆಂದು ಯಜುರ್ವೇದದ ರುದ್ರಾಧ್ಯಾಯದಲ್ಲಿ ವರ್ಣನೆಯಿದೆ. ನಾಯಿಗಳಿಗೂ ನಾಯಿಗಳ ಒಡೆಯನಿಗೂ ( ಶ್ವಭ್ಯಃ, ಶ್ವಪತಿಭ್ಯಃ ) ವಂದಿಸಿದ್ದುಂಟು. ನಾಯಿಯ ಉಲ್ಲೇಖಗಳು ವೇದದಲ್ಲಿ ಇದ್ದರೂ ಮಡಿವಂತರ ಪಾಲಿಗೆ ನಾಯಿಯು

ಅಪವಿತ್ರ ಪ್ರಾಣಿ. ಆದರೂ ಪುಣ್ಯಾತ್ಮ ಧರ್ಮರಾಜನು ಮಾತ್ರ ಸ್ವರ್ಗದಲ್ಲಿ ಪ್ರವೇಶಿಸುವದಾದರೆ ತಾನು ತನ್ನ ನಾಯಿಯೊಡನೆಯೇ ಬರತಕ್ಕವನೆಂದು ಹೇಳಿದ ನಂತೆ.

ಕ್ರಿಸ್ತ ಧರ್ಮದ ಹಳೆ ಮತ್ತು ಹೊಸ ಎರಡೂ ಧರ್ಮಗ್ರಂಥಗಳಲ್ಲಿಯೂ ನಾಯಿಯ ವಿಷಯದಲ್ಲಿ ತಿರಸ್ಕಾರವನ್ನು ವ್ಯಕ್ತಪಡಿಸಿದ್ದುಂಟು. ಅಪವಿತ್ರ ಪ್ರಾಣಿ ಗಳ ಗುಂಪಿನಲ್ಲಿ ಇದನ್ನು ಸೇರಿಸಿದ್ದಾರೆ. ಇದರ ವ್ಯಾಪಾರ ಮಾಡುವುದು ಹೀನ ಕೆಲಸವೆಂದು ಬಗೆದುದು ಕಂಡುಬರುತ್ತದೆ. ಪ್ರತಿಜ್ಞಾವಿಧಿಗಳ ಕಾಲದಲ್ಲಿ ಗುಡಿ ಯಲ್ಲಿ ಇದಕ್ಕೆ ಬರಗೊಡುತ್ತಿದ್ದಿಲ್ಲ.

ನಮ್ಮ ನಾಡಿನ ಹಟ್ಟಿಕಾರ – ದನಗಾರರಿಗೆ ನಾಯಿಯೆಂದರೆ ಪಂಚಪ್ರಾಣ. ಮಲ್ಲಯ್ಯನ (ಖಂಡೋಬನ) ಒಕ್ಕಲುಗಳಿಗೆ ನಾಯಿಯು ಒಂದು ಪೂಜ್ಯ ವಸ್ತು ವಾಗಿದೆ. ಮಲ್ಲಯ್ಯದೇವರ ಕುದುರೆಯ ಹಿಂದೆ ನಾಯಿಯು ಅನುಸರಿಸಿ ಹೋಗು ತ್ತಿದ್ದ ಹಾಗೆ ಪ್ರಾಚೀನ ಮೂರ್ತಿಗಳಿವೆ.

ಜೈಮಿನಿಯ ಉಪನಿಷದ್ ಬ್ರಾಹ್ಮಣದಲ್ಲಿ ವರ್ನಾಟದ ನಾಯಿಗಳ ಉಲ್ಲೇಖ ಬಂದಿದೆ. ಕರ್ನಾಟಕದವರ (ವಡುಕರ) ನಾಯಿ ಹಾಗು ಜನರ ಗಲ್ಲ ಮಿಸೆಗಳ ವೈಶಿಷ್ಟ್ಯವನ್ನು ಕುರಿತು ಪುರಾತನ ತಮಿಳು ಕಾವ್ಯಗಳಲ್ಲಿ ಬಣ್ಣಿಸಿದ್ದುಂಟು. ನಮ್ಮ ನಾಡಿನ ಸಾಮಾನ್ಯ ಜನಗಳಿಗೆ ನಾಯಿಯೆಂದರೆ ಅಚ್ಚು–ಮೆಚ್ಚು. ಹಿಂದೂ ದೇಶ ದಂತೆ ಇಜಿಪ್ತಿನಲ್ಲಿಯೂ ಅತಿ ಪುರಾತನ ಕಾಲದ ನಾಯಿಗಳ ಅವಶೇಷಗಳು ಪಿರಾಮಿಡ್ಡುಗಳ ಗೋರಿಗಳಲ್ಲಿದ್ದುದು ಬೆಳಕಿಗೆ ಬಂದಿದೆ. ಇಜಿಪ್ಶಿಯನ್‌ರು ನಾಯಿ-ಯನ್ನು ಆದರದಿಂದ ಕಾಣುತ್ತಿದ್ದರು. ಮನೆಯ ನಾಯಿಯು- ಮರಣ ಹೊಂದಿದರೆ ಮನೆ ಜನರೆಲ್ಲ ಮೈಮೇಲಿನ ಕೂದಲುಗಳನ್ನು ಬೋಳಿಸಿ, ಕೆಲದಿನ ಉಪವಾಸ ಮಾಡುವ ವಾಡಿಕೆಯೂ ಇದ್ದಿತೆಂದು ತಿಳಿಯುತ್ತಿದೆ. ನಾಯಿಯನ್ನು ಪೂಜ್ಯ ವಸ್ತು ವೆಂದು, ದೇವರೆಂದು, ಭಾವನೆಯಿದ್ದ ಜನಾಂಗಗಳೂ ಹಿಂದಕ್ಕೆ ಇದ್ದುವು.

ನಾಯಿಯ ಉದ್ದವಾದ ಮುಖ, ಅಗಲವಾದ ಬಾಯಿ, ಅದರ ಬಾಯಲ್ಲಿ ಸಾಕಷ್ಟು ಅಂದರೆ ೪೨ ಹಲ್ಲುಗಳು, ಉದ್ದವಾದ ನಾಲಗೆ, ಹರವಾದ ಎದೆ, ಗಟ್ಟಿ ಯಾದ ಉಗುರುಗಳು, ಇಂತಿದು ನಾಯಿಯ ಜೀವನೋಪಾಯಕ್ಕೆ ತಕ್ಕಂತಹ ದೇಹ ರಚನೆಯಿದೆ. ಇದರ ಮೈ ಬೆವರುವದಿಲ್ಲ; ನಾಲಗೆಯಿಂದ ಬೆವರು ಸೋರುವುದು. ಆದುದರಿಂದಲೆ ಬಿಸಿಲುಗಾಲದಲ್ಲಿ ಅಥವಾ ಓಡಿ ಓಡಿ ದಣಿದಾಗ ಹೊರಚಾಚಿದ ಕೆನ್ನಾಲಗೆಯು ಹನಿಯುತ್ತಿರುವುದನ್ನು ಕಾಣಬಹುದು. ನಾಯಿಗೆ ತನ್ನ ಹೊಟ್ಟೆ ಪಾಡಿಗಾಗಿ ತುಂಬ ಓಡಾಟ ನಡಿಸಬೇಕಾಗುತ್ತದೆ. ಅದಕ್ಕೆ ತಕ್ಕ ಹಾಗೆ ಗಟ್ಟಿ ಪುಪ್ಪುಸಗಳು ಇದಕ್ಕುಂಟು.

ನಾಯಿಯ ಮೂಗು ಬಹಳ ಹರಿತ. ಬುಲ್-ಡಾಗ್‌ನ ಮೂಗು ಚಿಕ್ಕದು. ಆದುದರಿಂದ ಅದಕ್ಕೆ ಉಳಿದ ನಾಯಿಗಳಷ್ಟು ದೂರದಿಂದ ವಾಸನೆ ಹತ್ತುವುದಿಲ್ಲ. ಸಶಕ್ತ ನಾಯಿಯ ಮೂಗು ಯಾವಾಗಲೂ ಸ್ವಲ್ಪ ಹಸಿ ಇರುತ್ತದೆ. ಒಣ ಮೂಗಿನ ನಾಯಿಗೆ ವಾಸನೆ ಬರುವುದಿಲ್ಲ—ಒಣ ನಾಲಗೆಗೆ ಹೇಗೆ ರುಚಿ ಗೊತ್ತಾಗುವುದಿಲ್ಲವೋ ಹಾಗೆ. ಮನುಷ್ಯರ ವಿಚಾರದಲ್ಲಿ ಮಾತ್ರ ಹಾಗಿಲ್ಲ. ಮೂಗು ಸೋರುತ್ತಿದ್ದರೆ ನಮಗೆ ವಾಸನೆ ತಿಳಿಯುವುದು ಕಷ್ಟ! ನಾಯಿಯ ಕಿವಿಗಳು ಕೂಡ ಅದರ ಮೂಗಿನಷ್ಟೇ ತೀಕ್ಷ್ಣ. ಕಿವಿ ಮೂಗುಗಳಷ್ಟು ನಾಯಿಗೆ ಕಣ್ಣಿನ ಸಾಮರ್ಥ್ಯವಿಲ್ಲ. ಅದಕ್ಕೆ ಬಣ್ಣಬಣ್ಣಗಳ ನಡುವಿನ ವ್ಯತ್ಯಾಸವು ವಿಶೇಷ ಹೊಳೆಯುವುದಿಲ್ಲ. ನಾಯಿಯನ್ನು ಮನೆಯಿಂದ ಎಷ್ಟೇ ದೂರ ಒಯ್ದುಬಿಟ್ಟರೂ ತಪ್ಪದೇ ಮನೆಗೆ ಬರುತ್ತದೆ. ಪ್ರಾಥಮಿಕ ಸ್ಥಿತಿಯೊಳಗಿನ ಪ್ರಾಣಿಗಳಲ್ಲಿ ಇದು ಹುಟ್ಟುಗುಣವಾಗಿಯೇ ಬಂದಿರುತ್ತದೆ. ಕೆಲ ಕಾಡು ಜನರಲ್ಲಿ ಈಗಲೂ ಈ ಗುಣವನ್ನು ಕಂಡುಕೊಳ್ಳಬಹುದು.



ಬುಲ್-ಡಾಗ್

ನಾಯಿಗಳ ಮೈಕಟ್ಟಿನಲ್ಲಿರುವ ವ್ಯತ್ಯಾಸಗಳನ್ನು ಅನುಲಕ್ಷಿಸಿ ಇದರಲ್ಲಿ ನಾಲ್ಕಾರು ಮುಖ್ಯ ಪ್ರಾಣಿಗಳೆಂದು ವರ್ಗೀಕರಿಸಿದ್ದಾರೆ. ಇನ್ನೊಂದು ಬಗೆಯಿಂದಲೂ ವಿಂಗಡಿಸುವ ವಾಡಿಕೆಯು ಈಗ ರೂಢವಾಗುತ್ತಲಿದೆ.

(೧) ಹವೆಯಲ್ಲಿ ಕತ್ತನೆತ್ತಿ ನಾತ ಹಿಡಿದು ಹೊರಡುವ ಬೇಟೆನಾಯಿಗಳು.

(೨) ನೆಲ ಮೂಸಿ ಅದರ ಮೇಲಿಂದ ತನ್ನ ಭಕ್ಷ್ಯವನ್ನು ಕಂಡುಹಿಡಿವ ಬೇಟೆನಾಯಿಗಳು.

(೩) ನೆಲ ಕೆದರಿ ಕಾದಿ ಬೇಟೆಯಾಡುವ ನಾಯಿಗಳು.

(೪) ಬೆಂಗಾವಲಿನ ಅಥವಾ ದಾರಿ ತೋರಿಸುವಂತಹ ಸಹಾಯಕ ನಾಯಿಗಳು.

(೫) ಚಿನ್ನಾಟಕ್ಕಾಗಿ ಸಾಕಿದ ಆಟಿಗೆಯ ಚೆಂದದ ನಾಯಿಗಳು.

(೬) ಮತ್ತು ಇನ್ನಿತರ ಸಂಕೀರ್ಣವರ್ಗದ ನಾಯಿಗಳು.

ಇಂತಿವು ನಾಯಿಗಳಲ್ಲಿ ಆರು ಬಗೆಗಳಾಗಿವೆ.

ಕ್ರಿಸ್ತಿ ಧರ್ಮಗ್ರಂಥವು ನಾಯಿಯನ್ನು ನಿಷೇಧಿಸಿದ್ದರೂ ಯುರೋಪಿನ ಪ್ರತಿಯೊಂದು ದೇಶದವರೂ ತಮ್ಮ ತಮ್ಮ ನಾಡಿನ ಜಾತಿಯ ನಾಯಿಗಳ ಶ್ರೇಷ್ಠ ತಳಿಗಳನ್ನು ಕಾಪಾಡಿಕೊಂಡು ಬಂದಿದ್ದಾರೆ. ಅವುಗಳ ಇನ್ನೂ ಹೆಚ್ಚಿನ ಉತ್ತಮೋತ್ತಮ ಪ್ರಕಾರಗಳ ತಯಾರಿಕೆಯಲ್ಲಿ ಒಂದು ಬಗೆಯ ಸ್ಪರ್ಧೆ ಅವರಲ್ಲಿ ನಡೆದಿದೆಯೆಂದು ಹೇಳಬಹುದು. ದೇಶ ವಿದೇಶಗಳ ಜಾತಿ ನಾಯಿಗಳ ಪ್ರದರ್ಶನಗಳಾಗು

ತ್ತವೆ. ಇದರಲ್ಲಿ ಮುನ್ನೂರಕ್ಕಿಂತ ಹೆಚ್ಚು ಬಗೆಯ ನಾಯಿಗಳು ಪ್ರದರ್ಶನಕ್ಕಾಗಿ ಬರುವುವು. ನಾಯಿಗಳ ಸ್ವಭಾವ, ಉಪಯುಕ್ತತೆಯ ರೀತಿ, ಬಣ್ಣ, ಆಕಾರ, ಅದರ ಅಂಗಾಂಗಗಳ ಮೈಕಟ್ಟಿನ ವರ್ಣನೆಯೊಡನೆ ಸೂಕ್ಷ್ಮವಿವರಗಳನ್ನು ಹೇಳುವ ಹಲವು ಗ್ರಂಥಗಳು ಅಲ್ಲಿ ಪ್ರಕಟವಾಗಿವೆ. ನಾಯಿಯ ವಿಶ್ವಕೋಶವೂ ಆಗಿದೆ.

ಹಿಂದುಸ್ಥಾನದಲ್ಲಿ ಮಡಿವಂತಿಕೆಯ ಕಲ್ಪನೆಯ ಮೂಲಕ ನಾಯಿಯನ್ನು ಸಾಕುವುದಕ್ಕೆ ಉತ್ತೇಜನವು ದೊರೆತಿಲ್ಲ. ಸಾಕಿದರೂ ಜಾತಿಯ ನಾಯಿಯನ್ನೇ ಸಾಕ ಬೇಕು, ಎಂಬ ಹಂಬಲವಿರುವುದಿಲ್ಲ. ಎಲ್ಲಿಯೋ ಬೀದಿಯ ಅನಾಥ ನಾಯಿಯನ್ನು ಮನೆಯಲ್ಲಿ ತಂದು ತಾಮುಂಡು ಉಳಿದ ಎಂಜಲು ಅಥವಾ ತಂಗಳು ಅನ್ನ ರೊಟ್ಟಿ ಕೊಟ್ಟು, ಹಾಗೂ ಹೀಗೂ ಜೀವಂತ ಇಡುವ ವಾಡಿಕೆಯುಂಟು. ಆದರೆ ಪಾಶ್ಚಾತ್ಯ ದೇಶಗಳಲ್ಲಿ ಈ ಪದ್ಧತಿಯಲ್ಲಿ ಬಿಡಾಡಿ ನಾಯಿಗಳನ್ನು ಸಾಕುವವರು ಸಗಿಸಿಕೊಳ್ಳ ಬೇಕಾಗುವುದು. ಮೇಲೆ ವಿವರಿಸಿದ ಉಪಯುಕ್ತತೆಯ ಕಡೆಗೆ ದೃಷ್ಟಿ ಕೊಟ್ಟು ತಮಗೆ ಇಷ್ಟವಾದ ಜಾತಿನಾಯಿಗಳನ್ನು ಕೊಂಡು ತಂದು ಸಾಕುವರು. ಅಲ್ಲಿ ನಾಯಿಯನ್ನು ಸಾಕುವವರ ಶ್ವಾನ ಸಂಘಗಳಿವೆ. ಅದಕ್ಕೆ 'ಕೆನ್ನೆಲ್ ಕ್ಲಬ್' ಎಂಬ ಹೆಸರು.

ನಾಡಿನಲ್ಲಿ ಶ್ರೇಷ್ಠ ಜಾತಿಯ ನಾಯಿಗಳ ತಳಿಯೇ ಉಳಿದು ಅವುಗಳ ಪೀಳಿಗೆಯೇ ಬೆಳೆಯುವುದು ಆವಶ್ಯವಷ್ಟೆ? ಈ ಗುರಿಯನ್ನು ಸಾಧಿಸಬೇಕಾಗಿದ್ದರೆ ಓಣಿ ಗುಂಟ ಅಲೆದಾಡುವ ದಿಕ್ಕಿಲ್ಲದ ನಾಯಿಗಳನ್ನು ಇಲ್ಲದಂತೆ ಮಾಡುವುದು ಕರ್ತವ್ಯ ವಾಗುತ್ತದೆ. ನಾಯಿಗಳ ಪೀಳಿಗೆಯಲ್ಲಿ ಅವಗುಣಗಳು ಇಳಿಯದಂತೆ ಶ್ವಾನಸಂಘ ದವರು ಜಾಗೃತರಾಗಿರುತ್ತಾರೆ. ಜಾತಿಯ ಮರಿಗಳೇ ಮಾರಾಟಕ್ಕೆ ಸಿಕ್ಕುವ ಏರ್ಪಾಟ ಮಾಡಿರುತ್ತಾರೆ. ಈ ಮರಿಗಳ ವಂಶಾವಳಿಯನ್ನು ರಜಿಸ್ಟರ ಮಾಡಿಸಿ ಇಡುತ್ತಾರೆ. ಅದರಿಂದ ಪಾಶ್ಚಾತ್ಯ ದೇಶಗಳಲ್ಲಿ ಶ್ರೇಷ್ಠ ಪ್ರಕಾರದ ನಾಯಿಗಳ ತಳಿಯು ಉಳಿದಿದೆ. ಅಂತಹ ಕುನ್ನಿಗಳು ಏನಿಲ್ಲೆಂದರೂ ನೂರಕ್ಕಿಂತ ಹೆಚ್ಚು ಬೆಲೆ ಬಾಳುತ್ತವೆ. ನಮ್ಮ ದೇಶಗಳಲ್ಲಿಯೂ ಈಗ ನಾಯಿಯ ಕ್ಲಬ್ಬುಗಳು ಪ್ರಾರಂಭ ವಾಗಿವೆ.



ಚಿನ್ನಾಟಕ್ಕಾಗಿ ಸಾಕುವ ಅಂದಚೆಂದದನಾಯಿ.

ನಾಯಿಯ ಉಪಯುಕ್ತತೆಯನ್ನು ಎಷ್ಟು ವರ್ಣಿಸಿದರೂ ಕಡಿಮೆಯೇ. ಚಿನ್ನಾಟಕ್ಕಾಗಿ ಸಾಕುವ ಅಂದ ಚೆಂದದ ನಾಯಿಗಳನ್ನು ನೀವು ನೋಡಿರಬಹುದು. ಅವು ಯಾವಾಗಲೂ ಒಡೆಯನ ಹಿಂದೆ ಹಿಂದೆ ಅಲೆದಾಡುವುವು. ಯಜಮಾನರಿಗೆ ಸಂಗಾತಿಯಾಗಿ

ಆತನಿಗೆ ಆನಂದ ಕೊಡುವುದು ಇವುಗಳ ಕೆಲಸ. ಮನೆಗೆ ಯಾರಾದರೂ ಆಪ್ತಮಿತ್ರರು ಬಂದರೆ ಸಲಿಗೆ ಮಾಡುತ್ತ ಅವರ ಕಾಲಲ್ಲಿ ಸುತ್ತಾಡಿ ನಲಿವುದೋರುತ್ತ ಅವರನ್ನು ಮೆಚ್ಚಿಸುವುದು. ಗಂಭೀರ ವೃತ್ತಿಯ ಮನೆಯ ಯಜಮಾನನಿಗೆ ಪ್ರೀತಿಯ ಸವಿಯಾದ ಮಾತುಕತೆಗಳಿಂದ ಸ್ವಾಗತಿಸಲು ಬಾರದಿದ್ದಲ್ಲಿ ಈ ಉದ್ದೇಶ ವನ್ನು ಅವನ ನಾಯಿಯು ಸಫಲ ಮಾಡಬಹುದು. ಊಟ ಮಾಡುವಾಗ ಟೇಬಲಿನ ಕೆಳಗೆ ನಿಂತು ಅತಿಥಿಗಳೂ ಮನೆಯವರೂ ಕೊಟ್ಟ ಕೇಕ್, ಬ್ರೆಡ್ ಮೊದಲಾದವು ಗಳನ್ನು ತಿಂದುಹಾಕುವುದು, ಯಜಮಾನಿಯ ಸಂಗಡ ಪೇಟೆಯಲ್ಲಿ ಅಲೆದಾಡು ವುದು, ಅವಳು ಕೊಟ್ಟ ಕೈಚೀಲವನ್ನು ಬಾಯಲ್ಲಿ ಹಿಡಿದು ಮನೆಗೆ ಒಯ್ಯುವುದು, ಮೋಟಾರಿನಲ್ಲಿ ಗಂಭೀರವಾಗಿ ಕುಳಿತು ಮೋಟಾರಿನ ಸೊಬಗನ್ನು ಹೆಚ್ಚಿಸುವುದು, ಈ ಮುಂತಾದವು ಈ ವರ್ಗದ ನಾಯಿಯ ಕೆಲಸಗಳಾಗಿವೆ.

ಇನ್ನು ಕೆಲ ನಾಯಿಗಳು ಮನುಷ್ಯರಿಗೆ ಜೀವನದ ಸಹಕಾರಿ ಸಂಗಾತಿಗಳಾಗಿ ರುತ್ತವೆ. ಅವರ ಕೆಲಸದ ಭಾರವನ್ನು ಕೆಲಮಟ್ಟಿಗೆ ಕಡಿಮೆ ಮಾಡುತ್ತವೆ. ಕುರುಬ, ದನಗಾರರ, ದನಕುರಿಗಳ ಸಂರಕ್ಷಣೆಯ ಹೊಣೆಯು ಅವರ ನಾಯಿಗಳ ಮೇಲೆಯೇ ಇರುತ್ತದೆ. ಅವರ ನಾಯಿಗಳು ಅವರ ಗುಂಪಿನ ಸಾವಿರಾರು ದನಕುರಿಗಳನ್ನೂ ಗುರುತಿಸಬಲ್ಲವು. ಕುರಿಗಳನ್ನು ದೊಡ್ಡಿಯಿಂದ ಹೊರತೆಗೆದು ಮೇಯಿಸಿ ಅವು ಗಳನ್ನು ಸುರಕ್ಷಿತವಾಗಿ ಕೊಂಡೊಯ್ಯುವ ಕೆಲಸವನ್ನು ನಾಯಿಗಳು ಮಾಡುತ್ತವೆ. ಈ ಬಗೆಯ ವಿಶೇಷ ತರಬೇತು ಪಡೆದ ನಾಯಿಗಳು ಯುರೋಪ್, ಅಮೇರಿಕೆಗಳಲ್ಲಿ ವಿಶೇಷವಾಗಿವೆ.

ಮೂಸಿ ವಾಸನೆಯ ಮೇಲಿಂದ ನಾಯಿಯು ವಸ್ತುಗಳನ್ನು ಗುರುತಿಸಬಲ್ಲು ದಾಗಿದೆ. ಪೋಲಿಸ ಖಾತೆಯವರು ಇತ್ತೀಚೆಗೆ ನಾಯಿಗಳನ್ನು ಅಪರಾಧಿಗಳನ್ನು ಹುಡುಕುವ ಕೆಲಸದಲ್ಲಿ ಉಪಯೋಗಿಸಿಕೊಳ್ಳುತ್ತಾರೆ. ಅಲ್ ಸಾಟಿಯನ್ ಜಾತಿಯ ನಾಯಿಗೆ ಈ ಬಗೆಯ ಶಕ್ತಿಯು ವಿಶೇಷವಾಗಿದೆ. ಕಳವು ಅಥವಾ ದರೋಡೆಯಾದ ಸ್ಥಳದಲ್ಲಿ ಈ ನಾಯಿಯನ್ನು ಬಿಟ್ಟರೆ, ನೆಲದಲ್ಲಿ ಮೂಡಿದ ಹೆಜ್ಜೆಗಳ ನಾತದಿಂದ ಅದು ತುಡುಗರನ್ನು ಹುಡುಕಿ ಗುರು ತಿಸುತ್ತದೆ. ಬರ್ಫದ ಪ್ರದೇಶದಲ್ಲಿ ಎಸ್ಕಿಮೋ ಜನರೂ ನಾಯಿಗಳ ಸ್ವಭಾವದ ಲಾಭವನ್ನು ಪಡೆದಿದ್ದಾರೆ. ಬರ್ಫದ ಪ್ರದೇಶ



ಸೆಂಟ ಬರ್ನಾರ್ಡ

ದಲ್ಲಿ ಪ್ರವಾಸ ಮಾಡುವಾಗ ಜನರು ಎಷ್ಟೋ ಸಾರೆ ಜಾರಿ ಬರ್ಫದಲ್ಲಿ ಹೂತು ಹೋಗುವ ಸಂಭವವಿದೆ. ಇಂಥ ಅಸಹಾಯ ಜನರನ್ನು ಹುಡುಕಿತೆಗೆಯುವುದಕ್ಕೆ ನ್ಯೂಫೌಂಡಲಂಡ, ಸೆಂಟ ಬರ್ನಾರ್ಡ ಜಾತಿಯ ನಾಯಿಗಳಿಂದ ಬಹಳ ಸಹಾಯ ವಾಗುತ್ತದೆ. ಸ್ವಿತ್ಸರಲಂಡದಲ್ಲಿ ಈ ಬಗೆಯ ನಾಯಿಗಳನ್ನು ವಿಶೇಷವಾಗಿ ಸಾಕು ತ್ತಾರೆ. ಅಲ್ಲಿ ಬರ್ಫದ ಶಿಖರಗಳನ್ನು ಏರುವುದಕ್ಕೂ ಬರ್ಫದಿಂದ ಜಾರುವ ಆಟ ವನ್ನು ಆಡುವುದಕ್ಕೂ ಬಂದ ಜನರು ಆಗಾಗ ಅಪಘಾತಕ್ಕೆ ಒಳಗಾಗುವುದುಂಟು. ಅಂತಹರನ್ನು ಹುಡುಕಲಿಕ್ಕೂ ರಕ್ಷಿಸಲಿಕ್ಕೂ ಈ ನಾಯಿಗಳಿಂದ ತುಂಬ ಸಹಾಯ ವಾಗುತ್ತದೆ. ಈ ನಾಯಿಗಳ ಕೊರಳಿಗೆ ಆಹಾರದ ಒಂದು ಸಣ್ಣ ಪೆಟ್ಟಿಗೆಯನ್ನು ಕಟ್ಟುತ್ತಾರೆ. ಅಸಹಾಯದ ಮನುಷ್ಯರು ಚೇತರಿಸಿಕೊಳ್ಳುವುದಕ್ಕೆ ಈ ಆಹಾರ ಸಹಾಯಕವಾಗುತ್ತದೆ. ಔಷಧದ ಪೆಟ್ಟಿಗೆಗಳನ್ನೂ ಇವುಗಳೊಡನೆ ಕಳಿಸುವುದುಂಟು.

ಬೇಟೆಯಾಟದಲ್ಲಂತೂ ನಾಯಿ ಗಳಿಲ್ಲದೆ ನಡೆಯದು. ಯಾವ ಬೇಟೆಗೆ ಯಾವ ಬಗೆಯ ನಾಯಿ ತಕ್ಕುದೆಂಬುದನ್ನು ಬೇಟೆಯವರು ಅರಿತಿರುತ್ತಾರೆ. ಬೇಟೆಯ ಕಾಲ ದಲ್ಲಿ ಯಜಮಾನನು ಗಂಡಾಂತರ ದಲ್ಲಿದ್ದರೆ, ನಾಯಿಯು ಜೀವದ ಪರಿವೆ ಇಲ್ಲದೆ ಒಡೆಯನನ್ನು ಉಳಿ ಸಲು ಕಾದಾಡಿದ ಉದಾಹರಣೆ ಗಳೆಷ್ಟೋ ಇವೆ!



ಬೇಟೆಯ ನಾಯಿ

ಸಾಕಿದ ಒಡೆಯನ ಗುಣಸ್ವಭಾವಗಳನ್ನು ತಿಳಿದುಕೊಂಡು ಅವಕ್ಕೆ ಸಂಪೂರ್ಣ ವಾಗಿ ಹೊಂದಿಕೊಂಡು ನಡೆವಲ್ಲಿ ನಾಯಿಯನ್ನು ಸರಿಗಟ್ಟುವ ಪ್ರಾಣಿಯು ಬೇರೊಂದಿಲ್ಲ. ಈ ಬಗೆಯ ಸಮರಸಭಾವದ ಮೂಲಕ ಇಂತಹ ನಾಯಿಗಳು ಯಜಮಾನನ ಸುಖದುಃಖಗಳನ್ನು ಅರಿತು ಸಹಭಾಗಿಯಾಗುತ್ತವೆ. ಸಾಕಿದ ಒಡೆಯನು ಕಾಣದಾದರೆ ಊಟ ನಿದ್ರೆ ಸಹ ತೊರೆಯುವವು; ಪ್ರಾಣವನ್ನು ಸಹ ಬಿಡುವವು. ನಾಯಿಗಳ ಇಂತಹ ಕಥೆಗಳು ಎಲ್ಲ ದೇಶಗಳಲ್ಲಿಯೂ ಉಂಟು.

ರೋಮನ್ನರು ನಾಯಿಗಳನ್ನು ಯುದ್ಧಕ್ಕೆ ಕರೆದೊಯ್ಯುತ್ತಿದ್ದರಂತೆ! ಅವುಗಳಿಗೆ ಸ್ವತಂತ್ರ ಚಿಲಖತ್ತು, ಮೊನೆಚಾದ ಕಬ್ಬಿಣದ ಸಲಾಕೆಗಳಿಂದ ಮಾಡಿದ ಕೊರಳಪಟ್ಟಿ ಮುಂತಾದ ಆಯುಧಗಳನ್ನು ಒದಗಿಸುತ್ತಿದ್ದರು. ಈಗ ಯುದ್ಧಗಳಲ್ಲಿ ಸಂದೇಶ, ಕಾಡತೂಸು ಮುಂತಾದವುಗಳನ್ನು ಕಳಿಸುವ ಕೆಲಸ ನಾಯಿಗಳಿಂದ

ಮಾಡಿಸಿಕೊಳ್ಳುತ್ತಾರೆ. ಅಲ್ಲದೆ ಇವು ಪ್ರಥಮ ಚಿಕಿತ್ಸೆ ಪೆಟ್ಟಿಗೆಗಳನ್ನು ಬೆನ್ನ ಮೇಲೆ ಇಟ್ಟುಕೊಂಡು ಗಾಯಾಳು ಸಿಪಾಯಿಗಳಿಗೆ ಉಪಯೋಗ ಬೀಳುತ್ತವೆ.

ಕಳೆದ ಜಾಗತಿಕ ಮಹಾಯುದ್ಧದಲ್ಲಿ ಸಂರಕ್ಷಕ ಜಾತಿಯ ನಾಯಿಗಳನ್ನು ಎಲ್ಲ ರಾಷ್ಟ್ರದವರೂ ಉಪಯೋಗಿಸಿಕೊಂಡರು. ಒಳಗೆ ಪರಕೀಯರು ನುಸುಳಿಕೊಳ್ಳದಂತೆ ಗಡಿಯನ್ನು ಕಾಯ್ದುಕೊಳ್ಳುವಲ್ಲಿ ಇವುಗಳಿಂದ ತುಂಬ ಸಹಾಯವಾಗುತ್ತದೆ. ಶತ್ರುಗಳ ಸುಳಿವನ್ನು ಹಿಡಿದು ಎಚ್ಚರಿಸುವಲ್ಲಿ ನಾಯಿಯೇ ಮನುಷ್ಯನಿಗಿಂತ ಹೆಚ್ಚು ಉಪಯುಕ್ತವಾಗುತ್ತದೆ.

ನಾಯಿಗಳಿಂದ ಈ ಬಗೆಯ ಲಾಭಗಳನ್ನು ಪಡೆಯುವುದಿದ್ದಲ್ಲಿ ನಮ್ಮ ದೇಶದಲ್ಲಿಯೂ ಉತ್ತಮ ಜಾತಿಯ ಪೀಳಿಗೆಯೇ ಬೆಳೆದುಬರುವುದಕ್ಕೆ ಪ್ರಯತ್ನ ಪಡುವುದು ಅವಶ್ಯಕವಾಗಿಲ್ಲವೇ ?

—ಮಾಧವ ಜೋಶಿ.

## ಅಭ್ಯಸನಗಳು

**ಪ್ರಶ್ನೆಗಳು:—**

(೧) ನಾಯಿಯು ಮನುಷ್ಯನ ಸಲುಗೆಯ ಪ್ರಾಣಿ ಹೇಗೆ ಆಯಿತು ?

(೨) ನಾಯಿಯ ಉಪಯೋಗವನ್ನು ಎಷ್ಟು ಬಗೆಯಿಂದ ಮಾಡಿಕೊಳ್ಳಲಾಗುತ್ತಿದೆ.

(೩) ನಾಯಿಯ ಉಲ್ಲೇಖವು ಪುರಾತನ ಗ್ರಂಥಗಳಲ್ಲಿ ಎಲ್ಲೆಲ್ಲಿ ಬಂದಿದೆ ?

(೪) ಪಾಶ್ಚಾತ್ಯರು ನಾಯಿಯ ಪಾಲನೆಯಲ್ಲಿ ಆಸ್ಥೆಯನ್ನು ಹೇಗೆ ವಹಿಸುವರು ?

**ಭಾಷಾಭ್ಯಾಸ:—**

(೧) ನಾಯಿಯು ಮಹೋಪಕಾರಿ, ಸುಹೃದ, ಸಂರಕ್ಷಕ ಮಿತ್ರ ... ಹೀಗೆ ನಾಯಿಯ ಸ್ವಭಾವವನ್ನು ಚಿತ್ರಿಸುವ ಶಬ್ದಗಳನ್ನು ಹುಡುಕಿ ಹೇಳಿರಿ.

(೨) ಕೆಳಗಿನ ವಾಕ್ಯಗಳಲ್ಲಿಯ ಅರ್ಥವ್ಯತ್ಯಾಸವನ್ನು ತೋರಿಸಿರಿ.

[೧] ನ್ಯಾಯಾಧೀಶರು ನಿಷ್ಪಕ್ಷಪಾತವಿಲ್ಲದೆ ನಿರ್ಣಯ ಕೊಟ್ಟರು,
ನ್ಯಾಯಾಧೀಶರು ನಿಷ್ಪಕ್ಷಪಾತಿಯಾಗಿ ನಿರ್ಣಯಕೊಟ್ಟರು.

[೨] ನೀನು ಬಾರದ ಹೊರತು ನಾನು ಮನೆ ಬಿಡುವದಿಲ್ಲ,
ನೀನು ಬಂದ ಹೊರತು ನಾನು ಮನೆ ಬಿಡುವದಿಲ್ಲ.

[೩] ನಾಯಿಯು ಅನಾಯಾಸವಿಲ್ಲದೆ ಓಡುವದು,
ನಾಯಿಯ ಆಯಾಸವಿಲ್ಲದೆ ಓಡುವದು;

(೩) ಓಡು, ಸಾಗು, ನಡೆ, ಹೆಜ್ಜೆಯಿಕ್ಕು, ದಟ್ಟಡಿಯಿಡು ಇವುಗಳನ್ನು ವೇಗವು ಹೆಚ್ಚುತ್ತ ಹೋಗುವ ಅನುಕ್ರಮದಲ್ಲಿ ಬರೆಯಿರಿ.

**ಶಬ್ದ ವಿಚಾರ:—**

(೧) ಜೊತೆಗಾರ, ಹಟ್ಟಿಕಾರ, ದನಗಾರ, ಬಳೆಗಾರ, ಕಂಚುಗಾರ, ಕುರುಬ, ಸಂಗಾತಿ — ಇವು ಎಂತಹ ನಾಮಗಳೆಂಬುದನ್ನು ಹೇಳಿರಿ,

(೨) ಶ್ವಾನ ಸಂಘ, ಜೀವನೋಪಾಯ, ಪ್ರಾಣಿ — ಇವುಗಳ ಅರ್ಥವನ್ನು ಹೇಳಿರಿ.

(೩) ಕೆನ್ನಾಲಿಗೆ ( ಕೆಂಪು ನಾಲಿಗೆ ) ಹೀಗೆ ಮಣ್ಣು, ಅಕ್ಕಿ, ಉರಿ, ಬೆಳಗು, ಕಣ್ಣು, ಜೆಡೆ — ಇವುಗಳಿಗೆ ' ಕೆಂಪು ' ವಿಶೇಷಣ ಬರುವಂತೆ ಬರೆಯಿರಿ.

(೪) ಹೊರು, ಹೋರು; ಇಡು — ಈಡು; ಬಿಡು, ಬೀಡು; ಕುಡು, ಕೂಡು; ನಿಡು, ನೀಡು; ಸುಡು, ಸೂಡು; ಅಡು, ಆಡು; ಇವುಗಳ ಅರ್ಥವನ್ನು

ವಾಕ್‌ಶಿಕ್ಷಣ:—

(೧) ಆಜನ್ಮವೂ ಸರಿಯಾಗಿ ಹೊಟ್ಟೆಗೆ ಸಿಕ್ಕದೆ, ಆದರೆ ಸಾವು ಬರುವವರೆಗೂ ನಿರಾತಂಕವಾಗಿ ಬದುಕಿರಲು ದೊರೆವ ಹಿಂದೂ ದೇಶದ ನಾಯಿ.

(೨) ಜೀವಂತ ಇರುವ ವರೆಗೂ ಸೊಗಸಾಗಿ ತಿಂದು ಆರೋಗ್ಯ ಹುಮ್ಮಸಗಳಿಂದ ಬಾಳಿ ಒಡೆಯನಿಂದ ಅಕ್ಕರೆ ಮಾಡಿಸಿಕೊಂಡು, ನಿರುಪಯುಕ್ತವಾಗುತ್ತಲೆ ಗುಂಡಿನ ಬಾಯಿಗೆ ಈಡಾಗಬೇಕಾಗುವ ಇಂಗ್ಲಂಡ, ಜರ್ಮನಿ ನಾಯಿ. ಇವೆರಡರಲ್ಲಿ ಯಾರ ಪಾಡು ಲೇಸೆಂಬುದನ್ನು ಹೇಳಿರಿ.

ಚರ್ಚೆ:—

'ಮಾನವನಿಗಿಂತಲೂ ನಾಯಿಯು ಅಪವಿತ್ರ ಪ್ರಾಣಿಯಲ್ಲ'

ಬರೆಹ:—

(೧) 'ನನ್ನ ನಾಯಿ' ಈ ವಿಷಯವನ್ನು ಕುರಿತು ಒಂದು ನಿಬಂಧವನ್ನು ಬರೆಯಿರಿ.

(೨) ನಾಯಿಯು ತನ್ನ ಯಜಮಾನನನ್ನು ಗಂಡಾಂತರದಿಂದ ಪಾರು ಮಾಡಿದ ಒಂದು ಪ್ರಸಂಗವನ್ನು ವರ್ಣಿಸಿರಿ.

(೩) ನಾಯಿಯ ಪ್ರಾಚೀನತೆಯನ್ನು ಕುರಿತು ಬರೆಯಿರಿ.

# ೧೩. ಲಕ್ಷ್ಮಮ್ಮನ ದಿನಚರಿ

[ ಮಧ್ಯಮ ತರಗತಿಯ ಇಂದಿನ ಒಂದು ಸಂಸಾರ ಚಿತ್ರ. ಲಕ್ಷ್ಮಮ್ಮನಂತಹ ಗೃಹಿಣಿಯರ ಚಿತ್ರಗಳನ್ನು ಸುಮಾರಾಗಿ ಮನೆ-ಮನೆಗಳಲ್ಲಿ ಕಾಣಬಹುದು. ಈ ಬಗೆಯ ಗೃಹಸ್ಥಿತಿಯಲ್ಲಿ ಹೆಣ್ಣುಮಕ್ಕಳ ಪಾಡಿಗೆ ಎಷ್ಟೊಂದು ದುಡಿತವು ಬರುತ್ತದೆ, ಎಂಬುದನ್ನು ವಿವರಿಸಿ ಸ್ತ್ರೀಜೀವನದ ವಿಷಯದಲ್ಲಿ ಸಹಾನುಭೂತಿಯನ್ನು ನಿರ್ಮಾಣ ಮಾಡಿದ್ದಾಗಿದೆ. ]

ಬೆಳಿಗ್ಗೆ ಐದುವರೆ ಗಂಟೆಗೆ ಅಲಾರಾಂ ಹೊಡೆಯಿತು. ಲಕ್ಷ್ಮಮ್ಮನವರು ಎದ್ದು ನೋಡಿದರೆ ಇನ್ನೂ ನಾಲ್ಕು ನಾಲ್ಕೂವರೆ ಗಂಟೆ ಮಾತ್ರ ಆದಹಾಗಿತ್ತು. ಹಾಳು ಗಡಿಯಾರ ದಿನಾ ಒಂದು ಗಂಟೆ ಮುಂದೆ ಹೋಗುತ್ತೆ, ಎರಡು ತಿಂಗಳಿಂದಲೂ ಅದನ್ನು ಸರಿ ಮಾಡಿಸಬೇಕು, ಎಂದುಕೊಳ್ಳುವುದರಲ್ಲೇ ಕಾಲಕಳೆದಾಯಿತು. ರಾತ್ರೆ ಅದನ್ನು ಒಂದು ಗಂಟೆ ಹಿಂದಕ್ಕೆ ತಿರುಗಿಸಿ ಇಡಬೇಕಾಗಿತ್ತು. ಮಲಗುವದು ಹೊತ್ತಾದ್ದರಿಂದ ಅದು ಮರತೇ ಹೋಗಿತ್ತು........ಇನ್ನೂ ಮೊದಲು ಕೋಳಿ ಸಹ ಕೂಗಿರಲಾರದು. ಮತ್ತೆ ಸ್ವಲ್ಪ ಮಲಗೋಣವೆಂದರೆ, ಪುನಃ ಎಚ್ಚರಾಗಲು ಹೊತ್ತಾಗಬಹುದು. ಹೇಗಾದರೂ ಎದ್ದಾಯಿತು. ಅತ್ತೆ ತುಳಸಿ ಪೂಜೆಗೆ ಏಳುವದರೊಳಗೆ

ಮನೆಕೆಲಸವನ್ನೆಲ್ಲಾ ಮುಗಿಸಿಬಿಡಬಹುದು. ಅಡಿಗೆ ಮನೆಯನ್ನು ಕೆಲಸಗಿತ್ತಿ ಸಾರಿಸುವ ಹಾಗಿಲ್ಲವಲ್ಲ; ಅದಷ್ಟು ಕೆಲಸ ಮುಗಿಸಿ ನೀರೊಲೆಗೆ ಉರಿ ಹಾಕಿಬಿಟ್ಟರೆ ಅವರು ಏಳುವ ಹೊತ್ತಿಗೆ ಸ್ನಾನಕ್ಕೆ ನೀರು ಸಿದ್ಧವಾಗಿರುತ್ತೆ. "ಅವರು" ಎಂದರೆ ಲಕ್ಷ್ಮಮ್ಮನ ಯಜಮಾನರು—ರಾಮರಾಯರು........ ಲಕ್ಷ್ಮಮ್ಮನ ಕಣ್ಣು ಇನ್ನೂ ನಿದ್ದೆಯ ಜೊಂಪಿನಿಂದ ಎಳೆದುಕೊಂಡು ಹೋಗುತ್ತ ಇದೆ. ಹೋಗಲಿ, ಇವೊತ್ತಿನ ದೇನು ಹೆಚ್ಚುಗಾರಿಕೆ ? ಆಕೆ ಹಾಯಾಗಿ ನಿದ್ದೆ ಮಾಡಿದ್ದು ಎಂದಾದರೂ ಉಂಟೆ ! ರಾತ್ರಿ ಹನ್ನೊಂದು ಗಂಟೆಗೆ ಮಲಗುವದು; ಬೆಳಿಗ್ಗೆ ಐದು ಗಂಟೆಗೆ ಏಳುವದು. ಇಲ್ಲದಿದ್ದರೆ ಮನೆಗೆಲಸದ ರಥವನ್ನು ತುಯ್ಯುವವರು ಯಾರು ? ಅವರಿಗೆ ಐವತ್ತು ರೂಪಾಯಿ ಸಂಬಳ ಹೆಚ್ಚಾದರೆ ಒಬ್ಬ ಅಡಿಗೆಯವನನ್ನಾದರೂ ಗೊತ್ತುಮಾಡಿ ಕೊಳ್ಳಬಹುದು. ಅಂದರೆ ಅಷ್ಟು ಹೊತ್ತಿಗೆ ಇನ್ನೇನು ಖರ್ಚು ಬಂದೊದಗುತ್ತ ದೆಯೋ, ಯಾರು ಬಲ್ಲರು ! ಅದಲ್ಲದೆ ಅಡಿಗೆಯವನಿದ್ದರೆ ಮನೆಯಲ್ಲಿ ದುಂದು ವೆಚ್ಚ ಹೆಚ್ಚಾಗುತ್ತದೆ. ಅವನಿಗೆ ಕೊಡುವ ಸಂಬಳ ೨೫ ರೂಪಾಯಿಯಾದರೆ ಕಣ್ಣಿಗೆ ಕಾಣದ ಹಾಗೆ ೫೦ ರೂಪಾಯಿನ ಸಾಮಾನು ಮಾಯವಾಗಿ ಹೋಗುತ್ತೆ. ಅದೇ ಹಣ ಉಳಿಸಿಕೊಂಡರೆ ಇನ್ನೆರಡು ಒಳ್ಳೆಯ ಸೀರೆ ತೆಗೆದುಕೊಳ್ಳಬಹುದು. ಮಾಲತಿಗೆ ಇನ್ನೂ ಚೆನ್ನಾಗಿ ಪಾಠ ಹೇಳುವ ವೀಣೆ ಮೇಸ್ಟರನ್ನು ಗೊತ್ತುಮಾಡ ಬಹುದು. ಅಂತೂ ಲಕ್ಷ್ಮಮ್ಮನಿಗೆ ಕೆಲಸದ ಹೊರೆ ಕಡಮೆ ಮಾಡಿಕೊಳ್ಳುವದು ಹಣೆಯಲ್ಲಿ ಬರೆದಿಲ್ಲ. ಕೈಯಲ್ಲಿ ಹಣವೂ ಉಳಿಯುವದಿಲ್ಲ. ನೆರೆಮನೆಯ ಶಾರದೆಯ ಗಂಡನಿಗೆ ಇನ್ನೂ ಕಡಿಮೆ ಸಂಬಳ ಬಂದರೂ ಅವರು ಹೇಗೋ ಸಂಸಾರವನ್ನು ಸುಖವಾಗಿಯೇ ಸಾಗಿಸುತ್ತಾರೆ. ಯಾವುದಕ್ಕೂ ಅದೃಷ್ಟವಿರಬೇಕು.

ಹೀಗೆ ಮನಸ್ಸಿನಲ್ಲಿ ಯೋಚಿಸುತ್ತ ಲಕ್ಷ್ಮಮ್ಮ ಅಡಿಗೆ ಮನೆಯ ಕಸಮುಸುರೆ ಎಲ್ಲಾ ತೀರಿಸಿ, ನೀರೊಲೆಗೆ ಉರಿಹಾಕಿದರು. ಅಷ್ಟು ಹೊತ್ತಿಗೆ ಮುಂಚೆ ಎದ್ದರೂ ಈ ಕೆಲಸವೆಲ್ಲಾ ಮುಗಿಯುವದರೊಳಗೆ ಬೆಳಕು ಹರಿಯುವ ಸಮಯ. ರಾಮ-ರಾಯರೂ ಇನ್ನೇನು ಏಳುವ ಹೊತ್ತು. ಇನ್ನು ಕಾಫಿಗೆ ಸಿದ್ಧಮಾಡಬೇಕು. ಎದ್ದು ಮುಖ ತೊಳೆದ ಕೂಡಲೆ ಮೊದಲನೆಯ ವರಸೆ ಒಂದು ಕಪ್ಪು ಕಾಫೀ ಬೀಳದಿದ್ದರೆ ರಾಯರಿಗೆ ಆಕಾಶವೇ ಕಳಚಿಬೀಳುವದು. ಲಕ್ಷ್ಮಮ್ಮ ಕಾಫೀ ಸಿದ್ಧಮಾಡಿಲ್ಲದಿದ್ದರೆ, ಅವರೇ ಕಾಫೀ—ಪುಡಿ, ಸಕ್ಕರೆ ಹುಡುಕಿಕೊಂಡು ಬಂದು ಒಲೆಯ ಮುಂದೆ ಕುಳಿತು, ಹೆಂಡತಿಗೆ ನೆರವಾಗುತ್ತಾರೆ. ಅವರು ಸಹಾಯಕ್ಕೆ ಬಂದರೆ, ನೀರು ಉರುಳುತ್ತೆ, ಒಲೆ ಆರುತ್ತೆ, ಹಾಲು ಉಕ್ಕಿ ದಂಡವಾಗುತ್ತೆ. ಹೀಗೇನಾದರೂ ಅವಸ್ಥೆ ಮಾಡಿಟ್ಟು ಐದು ನಿಮಿಷದ ಕೆಲಸಕ್ಕೆ ಗಂಟೆ ವ್ಯರ್ಥಮಾಡುತ್ತಾರೆ. ಆದ್ದರಿಂದ ಅವರು ಏಳುವದಕ್ಕಿಂತ ಮುಂಚೆಯೇ ಲಕ್ಷ್ಮಮ್ಮ ಕಾಫೀ ಮಾಡಿಟ್ಟು ಅವರು ಕಾಫೀ ಮನೆಗೆ ಕಾಲಿಡದಂತೆ ನೋಡಿಕೊಳ್ಳುತ್ತಾರೆ. ಗಂಡನ ನೆವದಲ್ಲಿಯೇ ಲಕ್ಷ್ಮಮ್ಮನಿಗೂ ಹೊತ್ತಿಗೆ ಮುಂಚೆ ಕಾಫೀ ಸಿಕ್ಕುತ್ತಿತ್ತಾದರೂ ರಾತ್ರಿ ಇಟ್ಟಿದ್ದ ಹಾಲು ಒಡೆದು

ಹೋದರೆ ಯಜಮಾನರು ಬೇಸರುಗೊಂಡಾರೆಂಬ ಯೋಚನೆ ದಿನಾ ಇದ್ದೇ ಇರುತ್ತದೆ. ಬೆಳಗಿನ ಜಾವ ಆರು ಗಂಟೆಯ ಹೊತ್ತಿಗೆ ಯಾರು ತಾನೆ ಹಾಲು ತಂದುಕೊಡುತ್ತಾರೆ!

ಕಾಫೀ ಮುಗಿಯುವ ವೇಳೆಗೆ ಮುಸುರೆ ತಿಕ್ಕುವಳು ಬಂದು ಕೂಗುತ್ತಾಳೆ. ಲಕ್ಷ್ಮಮ್ಮನಿಗೆ ಮನೆಯ ಯಜಮಾನಿತಿ ಎಂಬ ಹೆಸರು ಸಲ್ಲುವದಾದರೂ ಆಕೆ ಯಜಮಾನಿಕೆ ಮಾಡುವದು ಈ ಪರಿಚಾರಿತಿ, ಮನೆಯ ಆಳು ತಿಮ್ಮ ಇವರಿಬ್ಬರ ಮೇಲೆ ಮಾತ್ರ. ಅನೇಕ ವೇಳೆ ಅದು ಸಹ ಸಾಧ್ಯವಾಗುವದಿಲ್ಲ. ಈಗಿನ ಕಾಲದಲ್ಲಿ ಆಳುಗಳ ಮೇಲೆ ಜೋರು ಮಾಡಿದರೆ ಅವರು ಕಾಲು ಕೊಡವಿಕೊಂಡು ಹೊರಟು ಹೋಗುತ್ತಾರೆ. ಬೇರೆ ಆಳು ಸಿಕ್ಕುವದು ಕಷ್ಟ. ಪಾತ್ರೆಗಳನ್ನು ಸೇರಿಸಿ ತೊಳೆಯುವದಕ್ಕೆ ಕೊಡುವ ಹೊತ್ತಿಗೆ ರಾಯರು ಸ್ನಾನಕ್ಕೆ ಬರುತ್ತಾರೆ. ರಾಮರಾಯರು ತಮ್ಮ ಬನಿಯನ್, ಟಾವೆಲ್ ಮುಂತಾದ್ದನ್ನು ಸಿಕ್ಕಿದ ಕಡೆ ಎಸೆದಿರುತ್ತಾರೆ. ಅವನ್ನೆಲ್ಲ ಹುಡುಕಿ ಸಿದ್ಧಮಾಡಿಕೊಡುವದು ಲಕ್ಷ್ಮಮ್ಮನ ಕೆಲಸ. ಗಂಡನ ಸ್ನಾನ ಮುಗಿದ ಮೇಲೆ ಲಕ್ಷ್ಮಮ್ಮ ತಾನೂ ಸ್ನಾನಮಾಡಿ ಅಡಿಗೆಯ ಕೆಲಸ ಪ್ರಾರಂಭಿಸಬೇಕು. ಅದಕ್ಕೆ ಮುಂಚೆ ಗಂಡನಿಗೆ ಎರಡನೆಯ ಸಾರಿ ಕಾಫೀ ಮಾಡಿಕೊಡಬೇಕು. ಕಾಫಿಯ ಹದ ಸರಿಯಾಗಿದೆಯೋ ಇಲ್ಲವೋ ನೋಡುವದಕ್ಕೆ ಲಕ್ಷ್ಮಮ್ಮನೂ ಒಂದು ಕಪ್ಪು ಕುಡಿಯುವದು ವಾಡಿಕೆ. ಆಕೆ ಶಬರಿಯ ಹಾಗೆ ತಾನು ರುಚಿ ನೋಡಿ ಯೋಗ್ಯವೆಂದು ಕಂಡ ಪದಾರ್ಥವನ್ನು ಮಾತ್ರ ಸ್ವಾಮಿಗೆ ಅರ್ಪಿಸುತ್ತಾಳೆ.

ಗಂಡನಿಗೆ ಮತ್ತು ಮನೆಯ ಇತರರಿಗೆಲ್ಲರಿಗೂ ಕಾಫೀ ಆದ ಮೇಲೆ ಅಡಿಗೆಗೆ ಸಿದ್ಧಮಾಡಿಕೊಳ್ಳುತ್ತಾಳೆ. ಹನ್ನೊಂದು ಗಂಟೆಗೆ ಹುಡುಗರು ಸ್ಕೂಲಿಗೆ ಹೋಗುವ ವೇಳೆ; ಅಷ್ಟು ಹೊತ್ತಿಗೆ ಎಲೆ ಹಾಕಬೇಕು. ಈ ಮಧ್ಯೆ ರಾಯರು ಇನ್ನೆರಡು ಬಟ್ಟಲು ಕಾಫೀ ಬೇಕೆಂದು ಹೇಳಿಕಳುಹಿಸುತ್ತಾರೆ. ಗಂಡ ಹೆಂಡತಿಯನ್ನು ಸ್ವತಃ ಕರೆದು ಮಾತಾಡುವ ಪದ್ಧತಿ ಸಭ್ಯ ಸಮಾಜದಲ್ಲಿಲ್ಲವಷ್ಟೆ. ಅಲ್ಲದೆ ರಾಯರಿಗೆ ಹೆಂಡತಿಯ ಎದುರು ಮುಖ ಕೊಟ್ಟು 'ಇನ್ನಷ್ಟು ಕಾಫೀ ಮಾಡು' ಎಂದು ಹೇಳುವುದಕ್ಕೆ ಸ್ವಲ್ಪ ಸಂಕೋಚ. ಆಕೆ ಬೆಳಗಿನ ಜಾವದಿಂದಲೂ ದುಡಿದಿದ್ದಾಳೆಂದೂ ಅಡಿಗೆಯ ಆತುರದಲ್ಲಿದ್ದಾಳೆಂದೂ, ಮತ್ತೆ ಕಾಫೀ ಮಾಡುವುದು ಬೇಸರವೆಂದೂ ರಾಯರು ಬಲ್ಲರು. ಆದರೆ ಎಂದೂ ಬಾರದ ಸ್ನೇಹಿತರು ಅಂದು ಮನೆಗೆ ಬಂದಿರುತ್ತಾರೆ. ಅವರಿಗೆ ಸ್ವಲ್ಪು ಕಾಫೀಯಾದರೂ ಕೊಡಬೇಡವೆ? ತಾವು ಅವರ ಮನೆಗೆ ಹೋದಾಗಲೆಲ್ಲ ಅವರು ತಪ್ಪದೇ ಕಾಫೀ ಆತಿಥ್ಯ ನಡಿಸಿರುತ್ತಾರೆ. ಆದ್ದರಿಂದ ರಾಯರು ಸ್ವಲ್ಪು ಸಂಕೋಚದಿಂದ ಹೆಂಡತಿಗೆ ಕಷ್ಟವಾದರೂ ಆಗಲೆಂದು ಮತ್ತೆ ಕಾಫೀಗೆ ಅಪ್ಪಣೆ ಮಾಡುತ್ತಾರೆ. ಇದು ಒಂದು ದಿನದ ಕಥೆಯಾದರೆ ಸರಿ; ಆದರೆ ರಾಯರ ಮನೆಗೆ ಇಂಥ ಅಪರೂಪದ ಅತಿಥಿಗಳು ದಿನಾ ಯಾರಾದರೂ ಬರುತ್ತಲೇ ಇರುತ್ತಾರೆ. ಕೆಲವರು ಹೆಚ್ಚು ಬಳಕೆಯವರು "ಏನೋ, ಕಾಫೀ ಮಾಡಿಸುತ್ತೀಯೋ ಇಲ್ಲ ಷರಬತ್ತು ಮಾಡಿಸುತ್ತೀಯೋ" ಎಂದು ತಾವೇ ಪ್ರಶ್ನೆ ಹಾಕುವುದುಂಟು.

ಇಂಥ ಸಮಯದಲ್ಲಿ ಲಕ್ಷ್ಮಮ್ಮ ಕಾಫೀ ಷರಬತ್ತು ಎರಡನ್ನೂ ತಯಾರ ಮಾಡಬೇಕಾಗ ಬಹುದು. ಇದನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಲಕ್ಷ್ಮಮ್ಮ ಇತ್ತೀಚೆಗೆ ಗಂಡನ ಸ್ನೇಹಿತರು ಬಂದೊಡನೆಯೇ ಕಾಫೀ ಮಾಡಿಕೊಡುವ ವಾಡಿಕೆ ಮಾಡಿಕೊಂಡಿದ್ದಾಳೆ. ಈ ಸಮಾರಾಧನೆ ಅವಳಿಗೆ ಅಸಹ್ಯವಾಗಿ, ಕಂಡವರ ಮೇಲೆ ರೇಗುವುದೂ ಉಂಟು. ಈ ಕೋಪಕ್ಕೆ ರಾಯರೇ ಮೂಲಕಾರಣವಾದರೂ, ಅದರ ಬಿರುಸು ಅವರಿಗೆ ಆಗುವದಿಲ್ಲ. ಅವರು ತಮ್ಮ ಸ್ನೇಹಿತರ ನಡುವೆ ಸುರಕ್ಷಿತವಾಗಿ ಕುಳಿತಿ ರುತ್ತಾರೆ. ಆದ್ದರಿಂದ ಲಕ್ಷ್ಮಮ್ಮನ ಕೋಪವೆಲ್ಲಾ ಪಾತ್ರೆ ಪರಡೆಗಳ ಮೇಲೆ ಪ್ರಯೋಗವಾಗುತ್ತದೆ. ಒಂದೊಂದು ವೇಳೆ ಮಗುವಿಗೂ ಒಂದೆರಡು ಏಟು ಬೀಳು ವುದುಂಟು. ಇದು ಅಪರೂಪ. ಲಕ್ಷ್ಮಮ್ಮ ಸಿಡುಕುಗಾತಿಯಲ್ಲ. ಗಾಣದೆತ್ತಿನಂತೆ ದುಡಿದು ದುಡಿದು ಅವಳು ತಾಳ್ಮೆಯನ್ನು ಕಲಿತಿದ್ದಾಳೆ. ಹೆಣ್ಣೂ ತಾಳ್ಮೆ ಕಲಿಯ ದಿದ್ದರೆ, ಸಂಸಾರ ಹೇಗೆ ನಡೆಯಬೇಕು ?

ಕಾಫಿಯ ಸತ್ಕಾರ ಮುಗಿದ ಮೇಲೆ ಅಡಿಗೆ ಮನೆಯನ್ನು ಪ್ರವೇಶಿಸಿ, ಕೈಯಲ್ಲಿ ಗರತಿಯ ದಂಡವಾದ ಸೌಟನ್ನು ಹಿಡಿದಾಯಿತು. ಅಡಿಗೆಮನೆ ಲಕ್ಷ್ಮಮ್ಮನ ರಾಜ್ಯ, ಅಲ್ಲಿ ಆಕೆಗೆ ಸರ್ವಾಧಿಪತ್ಯ. ಶ್ರೀಮಂತ ಗರತಿಗೂ ಲಕ್ಷ್ಮಮ್ಮನಿಗೂ ವ್ಯತ್ಯಾಸ ವೆಂದರೆ ಲಕ್ಷ್ಮಮ್ಮನ ರಾಜ್ಯದಲ್ಲಿ ಮಂತ್ರಿ, ಕೋಲುಕಾರರು ಯಾರೂ ಇಲ್ಲ. ಎಲ್ಲಾ ಪಾತ್ರಗಳನ್ನು ಅವಳೇ ವಹಿಸಬೇಕು. ಆಕೆ ಯಾವ ಆಜ್ಞೆ ಬೇಕಾದರೂ ಹೊರಡಿಸ ಬಹುದು. ಆದರೆ ಆಜ್ಞೆಯನ್ನು ಪಾಲಿಸುವದಕ್ಕೂ ಅವಳೇ ಬರಬೇಕು. ಸಾಧಾ ರಣವಾಗಿ ಅಡಿಗೆಗೆ ಕಾಯಿಪಲ್ಯೆ ಹೊಂದಿಸುವುದು ಒಂದು ಭಾರಿ ಸಮಸ್ಯೆ. ರಾಯರು ಎಂದೂ ಮಾರ್ಕೆಟಿನ ಮುಖ ಕಂಡವರಲ್ಲ. ಗುಮಾಸ್ತೆಯಂತೆ ಬೈಸಿ ಕಲ್ಲಿಗೆ ಒಂದು ಚೀಲ ತೂಗುಹಾಕಿಕೊಂಡು ಅಂಗಡಿಗೆ ಹೋಗುವದಕ್ಕೆ ಅವರಿಗೆ ಆಗದು. ಅವರಿಗೆ ಪುಸ್ತಕ ಪಿಶಾಚಿ ಹಿಡಿದಿದೆ. ಕುರ್ಚಿಯ ಮಗ್ಗುಲಲ್ಲಿ ಏನಾ ದರೂ ಸ್ವಲ್ಪ ತಿಂಡಿ, ಕೇಳಿದಾಗ ಕಾಫೀ, ಕೈಯಲ್ಲಿ ಒಂದು ಪುಸ್ತಕ ಇಟ್ಟಿದ್ದು ಬಿಟ್ಟರೆ ಅವರಿಗೆ ಮತ್ತೆ ಯಾವುದರಲ್ಲೂ ಆಸಕ್ತಿ ಇಲ್ಲ. ಕಾಯಿಪಲ್ಯ ಇಲ್ಲದಿದ್ದರೂ ಸರಿಯೆ, ಅನ್ನಕ್ಕೆ ಬದಲು ರಾಗಿಮುದ್ದೆ ಬಡಿಸಿದರೂ ಸರಿಯೆ, ಅವರು ಎಡಗೈಯಲ್ಲಿ ಒಂದು ಪುಸ್ತಕ ಹಿಡಿದು ತಟ್ಟೆಯ ಕಡೆಗೆ ನೋಡದೇ ಊಟವನ್ನು ಮುಗಿಸುತ್ತಾರೆ. ಇಂಥ ಪ್ರಾಣಿಯನ್ನು ನಚ್ಚಿದರೆ ಮನೆಗೆ ತರಕಾರಿ ಬಂದೀತೆ ? ಅಪರೂಪಕ್ಕೆ ಅವ ರೇನಾದರೂ ಮಾರ್ಕೆಟಿನ ಕಡೆಗೆ ಹೋದರೆ ಒಂದಕ್ಕೆ ನಾಲ್ಕರಷ್ಟು ಬೆಲೆ ಕೊಟ್ಟು ತಂದುಹಾಕಿ " ನೋಡಿದೆಯೋ ! ಇವೊತ್ತು ನಿನಗೋಸ್ಕರ ಎಷ್ಟು ಕಷ್ಟಬಟ್ಟು ವ್ಯಾಪಾರ ಮಾಡಿಕೊಂಡು ಬಂದಿದ್ದೇನೆ" ಎಂದು ಲಕ್ಷ್ಮಮ್ಮನಿಂದ ಶಾಬಾಸುಗಿರಿ ಪಡೆ ಯಲು ಯತ್ನಿಸುವರು. ಲಕ್ಷ್ಮಮ್ಮನಿಗೆ ಗೊತ್ತಿಲ್ಲವೇ, ತನ್ನ ದೇವರ ಸತ್ಯ ! ರಾಯರು ಹೆಂಡತಿಯ ಎದುರಿಗೆ ನಿಜ ಹೇಳುವ ಧೈರ್ಯವಿಲ್ಲದೆ ತರಕಾರಿ ಬೆಲೆ ನಾಲ್ಕಾಣೆ ಎಂದು ಹೇಳಿದರೂ, ಅವರು ಕೊಟ್ಟಿರುವದು ಎಂಟಾಣೆಗೆ ಕಡಿಮೆ ಇಲ್ಲದೆ ಆಗಿರು

ತ್ತದೆ. ಅಲ್ಲದೆ ಆ ತರಕಾರಿಯ ಲಕ್ಷಣ ಹೇಳತೀರದು. ಅದು ಬಲಿತಿರುವದು ಮಾತ್ರವಲ್ಲ, ವೃದ್ಧಾಪ್ಯದಿಂದ ಸೊರಗಿ ಸುಕ್ಕುಗಟ್ಟಿರುತ್ತದೆ. ದಹನಕ್ರಿಯೆಗೆ ಯೋಗ್ಯವೇ ಹೊರತು ಪಾಕಕ್ಕೆ ಯೋಗ್ಯವಿರುವುದಿಲ್ಲ. ಲಕ್ಷ್ಮಮ್ಮನಿಗೆ ಗಂಡನ ವ್ಯಾಪಾರ ನೋಡಿ ನಗಬೇಕೋ ಅಳಬೇಕೋ ತಿಳಿಯದು. ಆದ್ದರಿಂದ ಆಕೆ ಗಂಡ ನಿಗೆ ಉಪಾಯವಾಗಿ "ತರಕಾರಿ ತರುವುದು ಆಫೀಸರುಗಳಿಗೆ ಮಾನಕ್ಕೆ ಕಡಿಮೆ. ಈ ಕೆಲಸಕ್ಕೆಲ್ಲ ನೀವು ಹೋಗಬೇಡಿ" ಎಂದು ಬುದ್ಧಿ ಹೇಳುತ್ತಾಳೆ. ರಾಮರಾಯರಿಗೆ ಇದನ್ನು ಕೇಳಿದಾಗ ಆನಂದವಾಗುವದು. ಒಂದು ಕಡೆ ತರಕಾರಿ ತರುವ ಯೋಚನೆ ತಪ್ಪಿತು, ಇನ್ನೊಂದು ಕಡೆ ಲಕ್ಷ್ಮಮ್ಮನಿಗೆ ತನ್ನ ಆಫೀಸಗಿರಿಯ ವಿಷಯದಲ್ಲಿ ಇಷ್ಟು ಅಭಿಮಾನವಿದೆಯಲ್ಲ ಎಂಬ ಹೆಮ್ಮೆ. ಇನ್ನು ರಾಯರಿಗೆ ಹೋಟಲಿನಲ್ಲಿ ಮಾಡು ವಂತೆ ಊಟ ಮಾಡಿ ಎದ್ದು ಹೋಗುವದೊಂದೇ ಕೆಲಸ. ಮನೆಯಲ್ಲಿ ಯಾವ ಪದಾರ್ಥವಿದೆ, ಯಾವದು ಇಲ್ಲ ಎನ್ನುವ ಯೋಚನೆಯನ್ನೇ ಅವರು ಈಚೆಗೆ ಬಿಟ್ಟಿ ದ್ದಾರೆ. ಸಂಬಳ ಬಂದ ದಿನ ಅದನ್ನು ಹೆಂಡತಿಯ ಕೈಗೆ ಹಾಕಿಬಿಡುತ್ತಾರೆ. ಲಕ್ಷ್ಮಮ್ಮನೇ ಮನೆಗೆ ಕಂಟ್ರೋಲರ್ ಮತ್ತು ಫಿನ್ಯಾನ್ಸಿಯಲ್ ಸೆಕ್ರೆಟರಿ. ಆಕೆ ಗಂಡ ನನ್ನು ತನ್ನ ಕಳುಣೆ ಮಿಶ್ರವಾದ ಪ್ರೇಮದಿಂದ ಮಗುವಿನಂತೆ ಸಾಕುತ್ತಾಳೆ.

ಇನ್ನು ತರಕಾರಿ ತರುವವರು ಯಾರು? ತಿಮ್ಮನಿಗೆ ಹೇಳಿದರೆ ಅವನು ದಿನ ವೆಲ್ಲಾ ಅಂಗಡಿಯ ಮುಂದೇ ಕಳೆದುಬಿಡುತ್ತಾನೆ. ಮಗ ಕಿಟ್ಟೂಗೆ ಹೇಳಿದರೆ ಅವನು ಎಂಟು ಹತ್ತು ಪುಸ್ತಕಗಳ ಪ್ರದರ್ಶನ ಮಾಡಿ "ಹೋಂ ವರ್ಕ" ನೆವ ಹೇಳಿ ತಪ್ಪಿಸಿಕೊಳ್ಳುತ್ತಾನೆ. ಸಾಧಾರಣವಾಗಿ ಲಕ್ಷ್ಮಮ್ಮ ಮನೆಯ ಬಳಿಗೆ ಮಾರಲು ಬಂದ ತರಕಾರಿಯನ್ನೇ ಕೊಳ್ಳುವದು. ತರಕಾರಿಯವರು ಯಾರೂ ಬರಲಿಲ್ಲ.— ಬರಿಯ ಅನ್ನಾಸಾರು ಮಾಡಿ, ಸ್ವಲ್ಪ ಸಂಡಿಗೆ ಕರಿದು ಅಡಿಗೆ ಮುಗಿಸುವಳು. ಅಷ್ಟು ಹೊತ್ತಿಗೆ ಅವಳ ಮಗು ಅಡಿಗೆಮನೆಗೆ ನುಗ್ಗಿ ಒಂದೆರಡು ಸಂಡಿಗೆಗಳನ್ನು ಕದ್ದು ಓಡು ತ್ತದೆ. ಅದನ್ನು ಸ್ವಲ್ಪ ಗದರಿಸಿಕೊಂಡಿದ್ದಕ್ಕೆ ಅದರ ಮಾನ ಹೋದಂತಾಗಿ ಬಿಕ್ಕಿ ಬಿಕ್ಕಿ ಅಳಲಾರಂಭಿಸುವದು. ರಾಯರು ರೂಮಿನಲ್ಲಿ ಏನೋ ಓದುತ್ತಿದ್ದವರು, ಈ ಗಾನ ವನ್ನು ಕೇಳಿ ಆವೇಶದಿಂದ ಈಚೆಗೆ ಬಂದು ಮಗುವನ್ನು ಮತ್ತಿಷ್ಟು ಗದರಿಸಿ "ಈ ಮನೆ ಯಲ್ಲಿ ಒಂದು ಗಳಿಗೆ ಹಾಯಾಗಿ ಕುಳಿತಿರುವ ಹಾಗಿಲ್ಲ; ಮಕ್ಕಳನ್ನು ಸಮಾಧಾನ ಪಡಿಸಬಾರದೇ" ಎಂದು ಅಸಮಾಧಾನಪಟ್ಟುಕೊಳ್ಳುವರು. ಲಕ್ಷ್ಮಮ್ಮ ಎಳೆಮಗು ವನ್ನು ಸುಲಭವಾಗಿ ಸಮಾಧಾನಪಡಿಸಲು ಬಲ್ಲವಳು. ಮಧ್ಯೆ ಈ ದೊಡ್ಡ ಮಗು ಬಂದು ಗಲಭೆ ಮಾಡುವದರಿಂದ ಅವಳ ಕೆಲಸ ಮತ್ತಷ್ಟು ಕಷ್ಟವಾಗುವದು. ದೇವರ ದಯೆಯಿಂದ ಅಷ್ಟು ಹೊತ್ತಿಗೆ ಯಾರೋ ಸ್ನೇಹಿತರು ಕೂಗುವದರಿಂದ ಕ್ಲೇಶ ಹರಿ ಯುವದು. ರಾಯರು ಕೋಪವನ್ನು ನುಂಗಿಕೊಂಡು ರೂಮಿಗೆ ಹೋಗಿ ಅವರ ಜೊತೆಗೆ ಹರಟೆಗೆ ಕುಳಿತುಕೊಳ್ಳುವರು. ಲಕ್ಷ್ಮಮ್ಮ ಊಟ ಮನೆಯನ್ನು ಗುಡಿಸಿ ಎಲೆ ಹಾಕುವ ಏರ್ಪಾಡಿಗೆ ಹೋಗುವಳು. ಅಂತು ಇಂತು ಮಗು ಸಂಡಿಗೆ ದಕ್ಕಿಸಿ ಕೊಳ್ಳುವದು.

ಊಟದ ಹೊತ್ತಿಗೆ ಬಂದ ಸ್ನೇಹಿತರನ್ನು ಮಾತನಾಡಿಸಿ ಹಾಗೇ ಕಳುಹಿಸುವು ದಕ್ಕಾಗುತ್ತದೆಯೆ ? ರಾಯರು ಅವರನ್ನೂ ಊಟಕ್ಕೆ ಆಹ್ವಾನಿಸುವರು. ಮನೆಯಲ್ಲಿ ಅತಿಥಿಗಳಿಗೆ ಯೋಗ್ಯವಾದ ಅಡಿಗೆ ಮಾಡಿದ್ದಾರೋ ಇಲ್ಲವೋ ಅದನ್ನೆಲ್ಲಾ ಯೋಚನೆ ಮಾಡುವ ಪದ್ಧತಿ ಇಲ್ಲ. ರಾಯರಿಗೆ ಅಂಥಾ ಯೋಚನೆ ಯಾವಾಗಲೂ ಹೊಳೆದದ್ದಿಲ್ಲ. ರೂಮಿನೊಳಗೆ ಕೂತು "ಕೃಷ್ಣರಾಯರೂ ಇಲ್ಲೇ ಊಟಕ್ಕೇಳುತ್ತಾರೆ. ಎಲೆ ಹಾಕು ಅನ್ನಪ್ಪ" ಎಂದು ಆಜ್ಞೆಯನ್ನು ಹೊರಡಿಸಿಬಿಡುವರು. ಲಕ್ಷಮ್ಮನಿಗೆ ಪ್ರಾಣಸಂಕಟ. ಅತಿಥಿಗಳಿಗೆ ಆಹ್ವಾನ ಕೊಟ್ಟ ಮೇಲೆ ಬೇಡ ಎನ್ನುವದು ಸಾಧ್ಯವಿಲ್ಲ. ಸುಮ್ಮನಿರೋಣವೆಂದರೆ—ಮನೆಗೆ ಬಂದವರಿಗೆ ಬರಿಯ ಅನ್ನ ನೀರು ಬಡಿಸುವುದ ಕ್ಕಾಗುವುದಿಲ್ಲ. ಲಕ್ಷಮ್ಮ ಮನೆಯ ಮರ್ಯಾದೆ ಉಳಿಸಿಕೊಳ್ಳುವ ವಿಷಯದಲ್ಲಿ ಬಹಳ ಅಭಿಮಾನಶಾಲಿ. "ಅವರು ಊಟಕ್ಕೆ ಬರುತ್ತಾರೆಂದು ಸ್ವಲ್ಪ ಮುಂಚೆ ಹೇಳಬಾರದಾಗಿತ್ತೆ." ಎಂದು ಗಂಡನ ವಿಷಯದಲ್ಲಿ ಸ್ವಲ್ಪ ಅಸಮಾಧಾನವಾಗು ವುದು. ಆದರೆ ಅವರು ಯಾವಾಗಲೂ ಹಾಗೆಯೇ. ತಿಮ್ಮನನ್ನು ಓಡಿಸಿ ಸ್ವಲ್ಪ ಕೋಸುಗಡ್ಡೆ ತರಿಸಿ ಬೇಗ ಸ್ವಲ್ಪ ಪಲ್ಯ ಮಾಡುವಳು. ಮೊದಲು ಸ್ಕೂಲಿಗೆ ಹೋಗುವ ಹುಡುಗರಿಗೆ ಬಡಿಸಿ ಆಯಿತು. ಆಮೇಲೆ ರಾಯರು ಅವರ ಸ್ನೇಹಿ-ತರು ಮನೆಯಲ್ಲಿ ಎಲ್ಲರೂ ಒಟ್ಟಿಗೆ ಊಟಕ್ಕೆ ಕುಳಿತ ದಿನವೇ ಇಲ್ಲ. ಇವರಿಗೆಲ್ಲಾ ಬಡಿಸುವ ಓಡಾಟದಲ್ಲಿ ಲಕ್ಷಮ್ಮನಿಗೆ ಕೈಕಾಲು ಬಿದ್ದುಹೋಗುತ್ತದೆ. ಇವರೆಲ್ಲರ ಊಟವಾದ ಮೇಲೂ ಆಕೆಗೆ ವಿಶ್ರಾಂತಿ ಇಲ್ಲ. ಅತ್ತೆ ಸಾಧಾರಣವಾಗಿ ಒಂದು ಗಂಟೆಗೆ ಮುಂಚೆ ಊಟಕ್ಕೇಳರು. ಅವರಿಗೆ ಬಡಿಸದೆ ಲಕ್ಷಮ್ಮ ಊಟ ಮಾಡುವು ದಕ್ಕಾದೀತೆ ? ಇವೆಲ್ಲಾ ಮುಗಿಯುವ ವೇಳೆಗೆ ಎರಡು ಗಂಟೆ. ಆಗ ಲಕ್ಷಮ್ಮ ರೂಮಿಗೆ ಹೋಗಿ ಕೈಯಲ್ಲಿ ಒಂದು ಪುಸ್ತಕವನ್ನು ಹಿಡಿದು ಮಲಗುವಳು. ಪುಸ್ತಕ ವೇನೋ ಕೈಯಲ್ಲಿರುವದು. ಓದು ಮಾತ್ರ ಸಾಗುವದಿಲ್ಲ. ಯಾವಾಗ ನಿದ್ರೆ ಹತ್ತೀತೋ ಅವಳಿಗೇ ತಿಳಿಯದು. ಎಷ್ಟೋ ಎರಡು ನಿಮಿಷ ನಿದ್ದೆ ಬಂದ ಹಾಗಾ ಗುವದು. ಎದ್ದು ನೋಡಿದರೆ ಆಗಲೇ ಮೂರುವರೆ ಘಂಟೆ! ಮತ್ತೆ ಕಾಫಿಯ ಸಮಾರಂಭ. ರಾಮರಾಯರು ಐದು ಗಂಟೆಗೆ ಆಫೀಸಿನಿಂದ ಬರುತ್ತಾರೆ. ಅಷ್ಟೊ ತ್ತಿಗೆ ಏನಾದರೂ ತಿಂಡಿ ಮಾಡಿಡಬೇಕು. ರಾಯರಿಗೆ ಊಟದ ಹಂಗು ಅಷ್ಟೇನು ಇಲ್ಲದಿದ್ದರೂ ಸಂಜೆಯ ತಿಂಡಿಯ ವಿಷಯದಲ್ಲಿ ಅವರ ನಾಲಿಗೆಯ ಚಪಲ ವಿಪ ರೀತ. ಸುಮ್ಮನೆ ದೋಸೆ, ಉಪ್ಪಿಟ್ಟು ಮಾಡಿದರೆ ಅವರಿಗೆ ತೃಪ್ತಿಯಿಲ್ಲ. ಸಿಹಿ ತಿಂಡಿ ಏನಾದರೂ ಇದ್ದೇ ಇರಬೇಕು. ಈ ಬಯಕೆಯನ್ನು ಪೂರೈಸುವದಕ್ಕಾಗಿ ಲಕ್ಷಮ್ಮ ಜಾಮೂನು, ಜಹಂಗೀರು ಮುಂತಾದ್ದು ಮಾಡುವುದನ್ನೆಲ್ಲ ಕಲಿತಿದ್ದಳು. ಮಾಡುವುದನ್ನು ಕಲಿಯುವದು ಕಷ್ಟವಲ್ಲ. ಆದರೆ ದಿನಾ ಒಲೆಯ ಮುಂದೆ ಕುಳಿತು ಆ ತಿಂಡಿಯನ್ನು ತಯಾರ ಮಾಡುವುದು ಬೇಸರ. ಆದರೂ ದಿನವೆಲ್ಲ ಕೆಲಸ ಮಾಡಿ ಗಂಡ ಮನೆಗೆ ಬಂದರೆ ಅವನಿಗೆ ಪ್ರಿಯವಾದ ವಸ್ತು ಏನಾದರೂ ಕೊಡಬೇಡವೆ ? ಕೇಸರಿಭಾತನ್ನು, ಕಾರಾಸೇವನ್ನೂ ಮಾಡಿಡುವಳು. ಆಮೇಲೆ ಮುಖ ತೊಳೆದು

ತಲೆ ಬಾಚಿಕೊಂಡು ಒಳ್ಳೆಯ ಸೀರೆಯುಟ್ಟು ರಾಯರನ್ನು ಇದಿರುನೋಡುತ್ತಾ ಕೂಡುವಳು. ರಾಯರು ಐದು ಗಂಟೆಗೆ ಬಂದು ಉಪಹಾರ ಮಾಡಿಕೊಂಡು ಮತ್ತೆ ಗಾಳಿಸವಾರಿ ಹೊರಡುವರು. ಸ್ನೇಹಿತರೊಡನೆ ಇಲ್ಲಿ ಅಲ್ಲಿ ತಿರುಗಿ ಮನೆಗೆ ೯ ಗಂಟೆಯ ವೇಳೆಗೆ ಹಿಂದಕ್ಕೆ ಬರುತ್ತಾರೆ.

ಲಕ್ಷ್ಮಮ್ಮನಿಗೆ ಸಂಜೆ ೬½-೭ ಗಂಟೆಯ ವರೆಗೆ ಸ್ವಲ್ಪ ವಿರಾಮ. ರೇಡಿಯೋ ತಿರುಗಿಸಿ ಏನಾದರೂ ಸಂಗೀತ ಕೇಳುತ್ತಾ ಲಕ್ಷ್ಮಮ್ಮ ಕುಳಿತಿರುತ್ತಾಳೆ. ಒಳ್ಳೆಯ ಸಂಗೀತವನ್ನು ಕೇಳಿದಾಗ, ಭಾಷಣವನ್ನು ಕೇಳಿದಾಗ, ಲಕ್ಷ್ಮಮ್ಮನಿಗೆ ಅನೇಕ ವೇಳೆ ಮನಸ್ಸಿಗೆ ವೇದನೆಯಾಗುತ್ತದೆ. ಅವಳೂ ಏಳೆಂಟು ವರ್ಷದ ಕೆಳಗೆ ಸ್ವಲ್ಪ ಚನ್ನಾಗಿಯೇ ವೀಣೆಯನ್ನೂ, ಹಾಡುಗಾರಿಕೆಯನ್ನೂ ಅಭ್ಯಾಸಮಾಡಿದ್ದಳು. ಹೈಸ್ಕೂಲಿನಲ್ಲಿ ೫ನೆಯ ಫಾರಂ ವರೆಗೆ ಓದಿದವಳು. ಸಂಸಾರಚಕ್ರಕ್ಕೆ ಸಿಕ್ಕಿದ ನಂತರ ಆ ಸಂಸ್ಕಾರ ಕ್ರಮೇಣ ಮರೆಯುತ್ತಾ ಬಂತು. ಈಗ ವೀಣೆ ಅವಳ ರೂಮಿನಲ್ಲಿ ಒಂದು ಕಡೆ ಮುಸುಗು ಹಾಕಿಕೊಂಡು ಕುಳಿತಿದೆ. ವೀಣೆ ಯಾವಾಗ ಬಾರಿಸಬೇಕು! ಗಂಡನ ಮನೆಗೆ ಬಂದ ಹೊಸದರಲ್ಲಿ ರಾಯರು ಒಂದೊಂದು ಬಾರಿ "ಸ್ವಲ್ಪ ಹಾಡು, ಚಿನ್ನಾ" ಎಂದು ಕೇಳುತ್ತಿದ್ದರು. ಆಗ ಕೂಡ ಹೆಚ್ಚು ಹೊತ್ತು ವೀಣೆಯ ಮುಂದೆ ಕುಳಿತಿದ್ದರೆ ಅತ್ತೆ ಏನೆಂದುಕೊಳ್ಳುತ್ತಾರೋ ಎಂಬ ಭಯ ಮನಸ್ಸನ್ನು ಕೊರೆಯುವದು. ಮಕ್ಕಳ ಯೋಗಕ್ಷೇಮ ನೋಡಿಕೊಳ್ಳುವ ಜವಾಬದಾರಿ ಬಂದೊದಗಿದ ಮೇಲೆ ಸಂಗೀತ ಸಾಹಿತ್ಯಗಳ ಕಡೆ ಗಮನಕೊಡುವುದು ಅಸಾಧ್ಯವಾಗುತ್ತ ಬಂತು. ರಾಮರಾಯರೂ ಆಗಿಂದಾಗ ತಮಗೆ ಪ್ರಿಯವಾದ ಕಾವ್ಯಗಳನ್ನು ಲಕ್ಷ್ಮಮ್ಮನಿಗೆ ಓದಿ ಹೇಳುತ್ತಿದ್ದರು. ಆ ಕಾಲವನ್ನು ನೆನೆದರೆ ಈಗಲೂ ಲಕ್ಷ್ಮಮ್ಮನಿಗೆ ಮೈ ಪುಳಕವಾಗುತ್ತಿತ್ತು. ಆಗ ರಾಮರಾಯರು ಆಫೀಸಿನಿಂದ ನೆಟ್ಟಗೆ ಮನೆಗೆ ಬಂದು ಸಂಜೆಯೆಲ್ಲಾ ಹೆಂಡತಿಯೊಡನೆ ಕಳೆಯುತ್ತಿದ್ದರು. ಅವರಿಗೋಸ್ಕರ ಲಕ್ಷ್ಮಮ್ಮ ಶೃಂಗಾರ ಮಾಡಿಕೊಂಡಿರಬೇಕು. ಅವರಿಗೆ ಬೇಕಾದ ಸೀರೆಯುಡಬೇಕು. ಅವರೊಡನೆ ಹಾಡಬೇಕು—ಅವರೂ ಸಂಗೀತ ಪ್ರಿಯರು. ಶಾಸ್ತ್ರೋಕ್ತವಾಗಿ ಸಂಗೀತ ಅಭ್ಯಾಸ ಮಾಡಿಲ್ಲದಿದ್ದರೂ ಚೆನ್ನಾಗಿ ತಮಗೆ ತಾವೇ ಹಾಡಿಕೊಳ್ಳಬಲ್ಲರು. ಅವರೊಡನೆ ಕಾವ್ಯ ಓದಬೇಕು.... ಆ ಕಾಲದಲ್ಲಿ ಜೀವನವು ಒಂದು ಹರ್ಷದ ಲಾಸ್ಯವಾಗಿತ್ತು. ಈಗ ರಾಯರಿಗೆ, ತಾನು ಯಾವ ಸೀರೆಯನ್ನುಟ್ಟಿದ್ದಾಳೆಂಬ ಕಡೆ ಗಮನವೇ ಇಲ್ಲ. ತನ್ನ ಸಂಗೀತ ಈಗ ಅವರಿಗೆ ಬೇಡ. ಅವರನ್ನು ತಾನೇ ದೂರುವದು ಹೇಗೆ! ವರ್ಷಗಟ್ಟಳೆ ಅಭ್ಯಾಸ ತಪ್ಪಿದ ಮೇಲೆ ಸಂಗೀತ ಅವರಿಗೆ ಹೇಗೆ ರುಚಿಸೀತು! ಅಭ್ಯಾಸ ನಿಂತು ಹೋದದ್ದು ಲಕ್ಷ್ಮಮ್ಮನ ತಪ್ಪಲ್ಲ, ನಿಜ. ಮನೆಯ ಕೆಲಸ, ಹಿರಿಯರ ಸೇವೆ, ಮಕ್ಕಳನ್ನು ಸಾಕುವದು—ನೂರೆಂಟು ತಾಪತ್ರಯಗಳಿರುವಾಗ ಸಂಗೀತ ಸಾಹಿತ್ಯಗಳಿಗೆ ಸಮಯವೆಲ್ಲಿಯದು? ಆ ಹಿಂದಿನ ಕಾಲದ ದೃಶ್ಯಗಳು

ಈಗ ಕನಸಿನ ಪರದೆಯ ಮೇಲೆ ಬಂದುಹೋಗುವ ಚಿತ್ರಗಳಾಗಿ ಪರಿಣಮಿಸಿರುವವು. ಜೀವನದಲ್ಲಿ ಯಾವ ವೈವಿಧ್ಯವೂ ಇಲ್ಲ. ಒಳ್ಳೆಯ ಚಿತ್ರ ಏನಾದರೂ ಬಂದಾಗ ಗಂಡನೊಡನೆ ಸಿನೇಮಾಕ್ಕೆ ಆಗೀಗ ಹೋಗುತ್ತಾಳೆ. ಹಿಂದಿನ ಸುಖಸ್ವಪ್ನ ಆಗ ಮತ್ತೆ ಸುಳಿದಂತಾಗುತ್ತದೆ. ಅಷ್ಟು ಬಿಟ್ಟರೆ, ಬೆಳಗಿನಿಂದ ಸಂಜೆಯ ವರೆಗೂ, ಒಂದೇಸಮ ಕೆಲಸ. ಉತ್ಸಾಹವಿಲ್ಲ, ಹರ್ಷವಿಲ್ಲ.

ಲಕ್ಷ್ಮಮ್ಮನ ಗೆಳತಿಯರನೇಕರು ಈಗಲೂ ಸಂಜೆಯಾದರೆ ಅಲಂಕಾರ ಮಾಡಿಕೊಂಡು ಮನಸ್ಸಿಗೊಂದು ಚಿಂತೆಯೂ ಇಲ್ಲದೆ, ಕ್ಲಬ್ಬಿಗೆ ಹೋಗುತ್ತಾರೆ. ಅವರು ತನಗಿಂತ ಎಷ್ಟೋ ಸುಖವಾಗಿರಬೇಕು........ ಇಲ್ಲ, ಅವರಿಗೆ ಇನ್ನೇನೇನು ಚಿಂತೆಗಳಿವೆಯೊ ! ದೇವರು ಎಲ್ಲರ ಜೀವನದಲ್ಲಿಯೂ ಸ್ವಲ್ಪ ಕಹಿ ಇಟ್ಟೇ ಇರುತ್ತಾನಂತೆ. ಗಂಡಂದಿರು ಕುಡುಕರಾಗಬಹುದು, ಮನೆಯಲ್ಲಿ ವೈಷಮ್ಯಗಳಿರಬಹುದು; ಮುಕ್ಕಾಲು ಪಾಲು ಜನರ ಸೌಖ್ಯ ಕೇವಲ ತೋರಿಕೆಯ ಸೌಖ್ಯವೆಂದೇ ತೋರುತ್ತದೆ. ಅಪರೂ ಈ ಮಧ್ಯಮ ವರ್ಗದವರ ಜೀವನ ಕಷ್ಟ. ಅವರಿಗೆ ಉತ್ತಮ ಜೀವನ ನಡಸುವ ಮನೋಭಾವವಿದೆ, ಬೇಕಾದ ಬುದ್ಧಿ ಶಕ್ತಿಯಿದೆ, ಬಯಕೆಯಿದೆ. ಆದರೆ ಸಮಾಜದ ವ್ಯವಸ್ಥೆಯಲ್ಲಿ ಅದಕ್ಕೆ ಬೇಕಾದ ಆವರಣವಿಲ್ಲದೆ ಅವರ ಆಸೆಯೆಲ್ಲ ಮಣ್ಣುಗೂಡಿ ಹೋಗುತ್ತದೆ. ನಮ್ಮ ಸಮಾಜದಲ್ಲಿ ಯಾರೂ ಎಷ್ಟು ಸೌಖ್ಯ ಸಾಧ್ಯವೋ ಅಷ್ಟನ್ನೂ ಅನುಭವಿಸುವ ಹಾಗಿಲ್ಲ........ಲಕ್ಷ್ಮಮ್ಮ ಒಂದು ನಿಟ್ಟುಸಿರು ಬಿಡುವಳು. ಹಾಗೆಯೇ ಸಮಾಧಾನ ತಂದುಕೊಳ್ಳುವಳು. ತನಗಿಂತಲೂ ಕಷ್ಟದ ಜೀವನ ನಡೆಸುವವರು ಎಷ್ಟು ಜನವಿಲ್ಲ ! ಯೋಚಿಸಿ ನೋಡಿದರೆ ತನ್ನ ಜೀವನ ಅಷ್ಟೇನು ದುಃಖಮಯವಲ್ಲ; ಇನ್ನೂ ಯೌವನವಿದೆ, ಪ್ರೇಮಮೂರ್ತಿಯಾದ ಗಂಡನಿದ್ದಾನೆ. ಮುದ್ದಾದ ಮಕ್ಕಳಿವೆ. ಅಷ್ಟೈಶ್ವರ್ಯವಿಲ್ಲದಿದ್ದರೂ ಸಾಕಷ್ಟು ಸಂಪತ್ತಿದೆ. ಬಯಕೆಗಳೇನೋ ಬೇಕಾದ ಹಾಗಿವೆ. ಆದರೆ ಬಯಕೆಗೆ ಮಿತಿಯುಂಟೆ ? ದಿನಚರಿಯನ್ನು ನೆನೆದರೆ ಬೇಸರವೇನೋ ಆಗುತ್ತದೆ........ಇನ್ನು ೭ ಗಂಟೆಯಾದರೆ ಮತ್ತೆ ಅಡಿಗೆಯ ಕಡೆ ಗಮನ ಕೊಡಬೇಕು. ಸಂಸಾರದ ಚಕ್ರ ತಿರುಗುತ್ತಲೇ ಇರಬೇಕು........

ಇಂದು ಲಕ್ಷ್ಮಮ್ಮ ಹೀಗೆ ಯೋಚನೆಯಲ್ಲಿ ಮಗ್ನಳಾಗಿರುವಾಗ ಅವಳ ಮಗು ಬಂದು ತೊಡೆಯ ಮೇಲೇರಿ, "ತೋಟಕ್ಕೆ ಹೋಗೋಣ, ಬಾಮ್ಮ" ಎಂದು ಕಾಡುವುದಕ್ಕಾರಂಭಿಸಿತು. ಲಕ್ಷ್ಮಮ್ಮನು ಮಗುವನ್ನು ಅಪ್ಪಿ ಮುದ್ದಿಟ್ಟಳು. ಅವಳ ಮನಸ್ಸಿನ ಯೋಚನೆಯಲ್ಲಾ ಮಾಯವಾಯಿತು. ಮುಖದಲ್ಲಿ ಗೆಲವು ಉಕ್ಕಿ ಕಾಂತಿಯೇರಿತು. ಮಗುವನ್ನು ಎತ್ತಿ ಕುಣಿಸುತ್ತಾ ಕಾಂಪೌಂಡಿನ ಉಪವನಕ್ಕೆ ಹೊರಟಳು.

—ಸುಬ್ಬಮ್ಮಣ್ಣಿ ಬಸಪ್ಪಾಜಿ ಅರಸ್.

# ಅಭ್ಯಸನಗಳು

ಪ್ರಶ್ನೆಗಳು :—

(೧) ಲಕ್ಷ್ಮಮ್ಮ ದಿನಾಲು ತೀರ ನಸುಕಿನಲ್ಲಿಯೇ ಏಕೆ ಏಳಬೇಕಾಗುತ್ತಿತ್ತು ?

(೨) ಮನೆಗೆಲಸದಲ್ಲಿ ರಾಮರಾಯರ ನೆರವನ್ನು ಲಕ್ಷ್ಮಮ್ಮನು ಅಪೇಕ್ಷಿಸದಿರುವ ಕಾರಣವೇನು ?

(೩) ರಾಮರಾಯರು ಲಕ್ಷ್ಮಮ್ಮನಿಗೆ ಅತಿಥಿಗಳಿಗಾಗಿ ಕಾಫೀ ಮಾಡಲು ಹೇಳಲು ಏಕೆ ಸಂಕೋಚಪಡುತ್ತಿದ್ದರು ?

(೪) ಪತಿಯ ಮೇಲೆ ಬಂದ ಕೋಪವನ್ನು ಲಕ್ಷ್ಮಮ್ಮನು ವ್ಯಕ್ತಪಡಿಸುವ ರೀತಿಗಳಾವು?

(೫) ರಾಮರಾಯನಿಗೆ ಮನೆಯ ಯೋಚನೆ ಇಲ್ಲದಿರಲು ಕಾರಣವೇನು ?

(೬) ಸಂಗೀತ ಸಾಹಿತ್ಯಗಳ ಕಡೆಗೆ ಲಕ್ಷ್ಮಮ್ಮನಿಗೆ ಗಮನ ಕೊಡುವದು ಏಕೆ ಆಗುತ್ತಿರಲಿಲ್ಲ ?

(೭) ಮನೆಗೆಲಸದ ಚಕ್ರದಲ್ಲಿ ಸಿಲುಕಿದ ಲಕ್ಷ್ಮಮ್ಮನು ಮನಸ್ಸಿಗೆ ಸಮಾಧಾನವನ್ನು ತಂದುಕೊಳ್ಳುವ ಬಗೆ ಯಾವುದು ?

ಭಾಷಾಭ್ಯಾಸ :—

(೧) ಕಾಫೀ ಸತ್ಕಾರ ಮುಗಿದ ಮೇಲೆ ಅಡಿಗೆ ಮನೆಯನ್ನು ಪ್ರವೇಶಿಸಿ ಕೈಯಲ್ಲಿ ಗರತಿಯ ದಂಡವಾದ ಸೌಟನ್ನು ಹಿಡಿದಾಯಿತು..... ಆಜ್ಞೆಯನ್ನು ಪಾಲಿಸುವ ದಕ್ಕೂ ಅವಳೇ ಬರಬೇಕು. ಇಲ್ಲಿ ಬಂದಿರುವ ವಿನೋದಕರ ವರ್ಣನೆಯನ್ನು ನಿರೀಕ್ಷಿಸಿರಿ.

ಇದರಂತೆ—

[೧] ರಾಮರಾಯರು ಕಾಫೀ ಮಾಡುವಾಗಿನ ಪ್ರಸಂಗ.

[೨] ರಾಮರಾಯರು ತಂದ ತರಕಾರಿ ವರ್ಣನೆಯಲ್ಲಿ ಬರುವ ವಿನೋದ.

ಇವುಗಳು ಅಭ್ಯಸನೀಯವಾಗಿವೆ.

(೨) [೧] ಲಕ್ಷ್ಮಮ್ಮನು ತಾನು ಮೊದಲು ಕಾಫಿ ಕುಡಿದು ಹಿಂದುಗಡೆ ಪತಿಗೆ ಕೊಡುತ್ತಾಳೆ.

[೨] ಲಕ್ಷ್ಮಮ್ಮನು ಸಿಟ್ಟಿಗೆದ್ದು ಪಾತ್ರೆಯನ್ನು ಅಪ್ಪಳಿಸುವಳು, ಮಕ್ಕಳನ್ನು ಹೊಡೆಯುವಳು.

[೩] ರಾಮರಾಯನಿಗೆ ಓದುವ ಹುಚ್ಚು ಹತ್ತಿದೆ.

[೪] ತರಕಾರಿಯ ಬೆಲೆಯ ಬಗೆಗೆ ಪತಿಯು ಸುಳ್ಳಾಡುವದು ಲಕ್ಷ್ಮಮ್ಮನಿಗೆ ಗೊತ್ತಿತ್ತು.

ಈ ಮೇಲಿನ ನಾಲ್ಕು ಮಾತುಗಳನ್ನು ಸ್ವಾರಸ್ಯವಾಗಿ ದಿನಚರಿಯಲ್ಲಿ ಹೇಗೆ ಹೇಳಿದ್ದಾಗಿದೆ ಎಂಬುದನ್ನು ಅರಿಯಿರಿ.

(೩) ಅವನಿಗೆ ಪುಸ್ತಕ ಓದುವದರಲ್ಲಿಯೆ ಆಸಕ್ತಿಯಿದೆ, ಹುಚ್ಚು ಹಿಡಿದಿದೆ. ಪುಸ್ತಕ ಪಿಶಾಚಿ ಹಿಡಿದಿದೆ, ಈ ಮೂರು ವಾಕ್ಯಗಳಲ್ಲಿಯ ಅರ್ಥಭೇದವನ್ನು ಹೇಳಿರಿ.

(೪) ಲಕ್ಷ್ಮಮ್ಮನು ಪತಿಗೆ ತರಕಾರಿ ತರಲು ಬರುವದಿಲ್ಲವೆಂದು ಹೇಗೆ ಪರ್ಯಾಯದಿಂದ ಹೇಳುವಳು ? ಅದೇ ಮಾತನ್ನು ಬಿಚ್ಚುಮಾತಿನಿಂದ ಹೇಳಿದ್ದರೆ ಪರಿಣಾಮವೇನಾಗುತ್ತಿತ್ತು ?

ಅಸಮ್ಮತಿಯನ್ನು ವಿನೋದಪೂರ್ಣವಾಗಿ ಸೂಚಿಸುವ ಇಂತಹ ಬಗೆಯು ಅನುಕರಣೀಯವಾಗಿದೆ.

ಶಬ್ದ ವಿಚಾರ :—

(೧) ಮಗು, ಕೂಸು, ಕಂದ, ತರುಣ, ತರಳ ಈ ಶಬ್ದಗಳನ್ನು ಬೆಳವಣಿಗೆಯ ಕ್ರಮದಲ್ಲಿ ಬರೆಯಿರಿ.

(೨) ಆಕಾಶ ಕಳಚಿಬೀಳು, ಕಾಲುತೊಡವು, ಕಾಲಿಗೆ ಬುದ್ಧಿಹೇಳು, ಹರಿಹಾಯು, ಹಂಗಿನಲ್ಲಿರು — ಇವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.

(೩) ಸಮಾರಂಭ, ಸಮಾರಾಧನೆ; ಉಣ್ಣು, ತಿನ್ನು; ಕರ್ಮ, ಕಾರ್ಯ ಇವುಗಳಲ್ಲಿಯ ಅರ್ಥಭೇದವನ್ನು ಹೇಳಿರಿ.

ವಾಕ್‌ಶಿಕ್ಷಣ :—

ರಾಮರಾಯರು ಬಂದ ಅತಿಥಿಗಳಿಗೆ ಕಾಫಿ ಮಾಡಲು ಲಕ್ಷ್ಮಮ್ಮನಿಗೆ ಹೇಳಿದಾಗ ಅವಳು ಮನದಲ್ಲಿ ಹೇಗೆ ಗುಣುಗುಟ್ಟುತ್ತಿರಬಹುದು ಎಂಬುದನ್ನು ಅಭಿನಯಿಸಿರಿ.

ಚರ್ಚೆ :—

ಸ್ತ್ರೀಯರು ಗಾಣದ ಎತ್ತಿನ ಹಾಗೆ ದುಡಿಯುವದನ್ನು ತಪ್ಪಿಸಲು ನಮ್ಮ ರೂಢಿ ಸಂಪ್ರದಾಯಗಳು ಯಾವ ದಿಶೆಯಲ್ಲಿ ಬದಲಾವಣೆಯಾಗಬೇಕು ?

ಬರೆಹ :—

(೧) ಒಕ್ಕಲತನದ ದಿನಚರಿ.

(೨) ಶಿಬಿರದಲ್ಲಿ ಕಳೆದ ಒಂದು ದಿನ.

ಇವುಗಳಲ್ಲಿ ಒಂದನ್ನು ಕುರಿತು ಬರೆಯಿರಿ.



# ೧೪. ಶುಕನಾಸನ ಉಪದೇಶ

[ ಶುಕನಾಸನು ಮಾಡಿದ ಈ ಉಪದೇಶವು ಆತನೊಬ್ಬನಿಗೆ ಮಾತ್ರವಲ್ಲ ಇಡಿಯ ತರುಣ ವರ್ಗಕ್ಕೇ ಇದೆ. ಈ ಉಪದೇಶದ ಸಾರವು ಪ್ರತಿಯೊಬ್ಬನು ತನ್ನ ಮನದಲ್ಲಿ ಕೊರೆದಿಟ್ಟುಕೊಳ್ಳುವದಾಗಿದೆ. ಇದನ್ನು ಅನುಸರಿಸಿ ನಡೆಯುವವರಿಗೆ ಆಯುಷ್ಯದಲ್ಲಿ ಕೆಟ್ಟ ಹೆಸರು ಬರುವ ಹೆದರಿಕೆಯೇ ಇಲ್ಲ.]

ಕೆಲವು ದಿವಸಗಳ ತರುವಾಯ ಅರಸನು ಚಂದ್ರಾಪೀಡನಿಗೆ ಯುವರಾಜ ಪಟ್ಟಗಟ್ಟಬೇಕೆಂದು ಮನದೊಳಗೆ ಆಲೋಚಿಸಿ, ಶುಕನಾಸ ಮುಂತಾದ ಮಂತ್ರಿಗಳಿಗೆ ತಿಳಿಸಿ, ಪಟ್ಟಾಭಿಷೇಕದ ಸಾಮಗ್ರಿಗಳನ್ನು ಸಿದ್ಧಮಾಡಲಪ್ಪಣೆಕೊಟ್ಟನು. ಯೌವರಾಜ್ಯಾಭಿಷೇಕವಾಗುವದು ಮುಂದೆ ಒಂದೆರಡು ದಿನವಿರುವಾಗ ಚಂದ್ರಾಪೀಡನು ಶುಕನಾಸನ ದರ್ಶನಕ್ಕೆ ಹೋದನು. ಆಗ ಶುಕನಾಸನು —“ ಯುವರಾಜರೇ, ನೀವು ಸಕಲ ಶಾಸ್ತ್ರಗಳನ್ನು ಓದಿದವರು. ಸರ್ವ ವಿಷಯಗಳನ್ನು ಬಲ್ಲವರು. ಇನ್ನು ಹೆಚ್ಚಿಗೆ ನಿಮಗೆ ಉಪದೇಶಮಾಡಬೇಕೆಂಬ ಹಾಗೇನೂ ಇಲ್ಲ;

ಆದರೂ ಎರಡು ಮಾತುಗಳನ್ನು ಹೇಳುತ್ತೇನೆ, ಚಿತ್ತವಿಟ್ಟು ಆಲಿಸಬೇಕು. ತಾರುಣ್ಯದ ಯೋಗದಿಂದ ಪ್ರಾಪ್ತವಾಗುವ ತಮವು (ಅಜ್ಞಾನವು) ಉಳಿದ ಅಂಧಕಾರದಂತೆ ಸೂರ್ಯನ ಕಿರಣಗಳಿಂದೇನೂ ನಷ್ಟವಾಗುವದಲ್ಲ; ಅಂಥ ಗಹನವಾದದ್ದು. ಐಶ್ವರ್ಯದಿಂದ ಪ್ರಾಪ್ತವಾದ ಮದವು ಐಶ್ವರ್ಯ ಹೋದರೂ ಹೋಗುವದಿಲ್ಲ; ಅಷ್ಟು ಕಷ್ಟಕರವಾದದ್ದು. ಗರ್ವದಿಂದ ಹುಟ್ಟಿದ ತಾಪವು ಶೀತೋಪಚಾರಗಳಿಂದೇನೂ ಶಾಂತವಾಗುವದಲ್ಲ;. ಅಂಥ ಉಗ್ರವಾದದ್ದು.

ವಿಷಯವೆಂಬ ನಂಜಿನಿಂದ ಸಾಯುವದು ನಿಶ್ಚಯವೆಂದು ತಿಳಿದರೂ ಮನುಷ್ಯರು ಅದರ ಸವಿ ತಕ್ಕೊಳ್ಳದೆ ಬಿಡುವದಿಲ್ಲ. ಅದು ಅಂಥ ಮೋಹಕವಾದದ್ದು. ಕಾಮಲಂಪಟವೆಂಬ ಮಲವು ಸೋಂಕದವರು ಈ ಭೂಮಿಯ ಮೇಲೆ ಬಹಳ ವಿರಳ; ದಿನಾಲು ಮಾಡುವ ಸ್ನಾನದಿಂದ ಈ ಮಲವು ಹೋಗುವದಲ್ಲ. ರಾಜ್ಯಸುಖವೆಂಬ ನಿದ್ದೆ ಹತ್ತಿದ ಬಳಿಕ ಬೆಳಗಾದರೂ ಎಚ್ಚರಾಗುವದಿಲ್ಲ.

ಒಳ್ಳೆಯ ಪ್ರಬುದ್ಧರಾದ ಅರಸರು ಸಹ ಇನ್ನೂ ಈ ನಿದ್ರೆಯೊಳಗೇ ಆಕಳಿಸುತ್ತಾರೆ. ಇಂಥ ಘೋರ ನಿದ್ರೆ ಇದು. ಸ್ವಾಮಿ, ಚಿತ್ತಗೊಟ್ಟು ಆಲಿಸಬೇಕು. ಗರ್ಭಶ್ರೀಮಂತತನ, ನೂತನ ತಾರುಣ್ಯ, ಅನುಪಮ ಸೌಂದರ್ಯ, ಅಲೌಕಿಕ ಸಾಮರ್ಥ್ಯ ಇವುಗಳಲ್ಲಿ ಮನುಷ್ಯನಿಗೆ ಒಂದು ಇದ್ದರೆ ಅವನನ್ನು ನಾಶಗೊಳಿಸುವದಕ್ಕಾಗಲಿ, ಅವಿಚಾರಕ್ಕೊಳಮಾಡುವದಕ್ಕಾಗಲಿ, ಸಾಕು; ಇವೆಲ್ಲ ಒಂದೇ ಸ್ಥಳದಲ್ಲಿ ಒಟ್ಟುಗೂಡಿದರಂತೂ ಕೇಳುವದೇನು? ಎಂಥ ಸುಶಿಕ್ಷಿತ ಮನುಷ್ಯನಾದರೂ ತಾರುಣ್ಯವೊದಗಿದ ಮೇಲೆ ಅವನಿಂದೇನಾದೀತು, ಏನಾಗದೆಂಬ ನಿಯಮವಿಲ್ಲ. ವಿಷಯಾರಣ್ಯದೊಳಗೆ ಮನುಷ್ಯನ ಇಂದ್ರಿಯಗಳೆಂಬ ಎರಳೆಗಳು ಸುಖೋಪಭೋಗವೆಂಬ ಮೃಗಜಲಕ್ಕೆಳಸಿ ಹರಿದಾಡುತ್ತವೆ. ಮೊದಲು ತುಚ್ಛವಾಗಿಯೂ ನೀರಸವಾಗಿಯೂ ತೋರುವ ವಿಷಯಗಳೆ ಮುಂದೆ ಯೌವನ ಮದದ ಮಬ್ಬು ತಲೆಗೇರಿದಾಗ ಇಂಪಾಗಿಯೂ ಪ್ರಿಯಕರವಾಗಿಯೂ ತೋರುವವು. ಇಂಥ ಸದುಪದೇಶವು ನಿಮ್ಮಂಥ ವಿಚಕ್ಷಣರ ಮನಸ್ಸಿಗೆ ಹತ್ತಿದ ಹಾಗೆ ಅಶಿಕ್ಷಿತರ ಮನಸ್ಸಿಗೂ, ದುಷ್ಟರ ಮನಸ್ಸಿಗೂ ಹತ್ತುವದಿಲ್ಲ. ಅದಲ್ಲದೆ ನಿಮಗೆ ಉಪದೇಶ ಮಾಡತಕ್ಕ ಕಾಲವು ಇದೇ ಸರಿ; ಯಾಕಂದರೆ ಇನ್ನೂ ನಿಮಗೆ ವಿಷಯ ರಸದ ಸವಿ ಹತ್ತಿಲ್ಲ. ಇಂಥ ಸದುಪದೇಶವು ಕಾಮನ ಕೂರಂಬುಗಳು ನಟ್ಟವರ ಮನಸ್ಸಿಗೆ ನಡುವದಿಲ್ಲ. ದೊಡ್ಡ ಮನೆತನದಲ್ಲಿ ಹುಟ್ಟಿದವರು ದುರ್ಮಾರ್ಗದಿಂದ ನಡೆಯುವದಿಲ್ಲೆಂದು ಅನ್ನಕೂಡದು; ಚಂದನ ವೃಕ್ಷದಿಂದ ಹುಟ್ಟಿದ ಬೆಂಕಿ ಸುಡುವದಿಲ್ಲೆನ್ನಬಹುದೋ? ಮತ್ತು ಸುಶಿಕ್ಷಿತ ಮನುಷ್ಯನು ಸನ್ಮಾರ್ಗದಿಂದಲೇ ನಡೆಯುವನೆಂಬ ನಿಶ್ಚಯವಿಲ್ಲ; ನೋಡಿರಿ, ನೀರಿನಿಂದ ಬೆಂಕಿಯು ಆರುವದು; ಆ ನೀರಿನಿಂದಲೇ ವಡವಾಗ್ನಿಯು ಪ್ರಜ್ವಲಿಸುವದು. ಆದುದರಿಂದ ಮಾನವ ಪ್ರಾಣಿಗಳು ಗುರುಗಳ ಹಿರಿಯರ ಹಿತೋಪದೇಶಗಳಿಗೆ ಯಾವಾಗಲೂ ಕಿವಿಗೊಡುತ್ತ, ನಾನು ನನ್ನದೆಂಬ ಅಹಂಕಾರ ಮಮಕಾರಗಳಿಗೆ

ಒಳಗಾಗದೆ, ಬಹಳ ಎಚ್ಚರದಿಂದ ವರ್ತಿಸಬೇಕು. ಗುರೂಪದೇಶಗಳನ್ನು ಕೇಳುವದೇ ಕಿವಿಗೆ ಭೂಷಣವು. ಅರಸನ ಮಾತಿಗೆ ತಲೆದೂಗುವವರೇ ಬಹಳ ಮಂದಿ. ನಿಸ್ಪೃಹತೆಯಿಂದ ಅರಸನಿಗೆ ಅಂಜದೆ ಬುದ್ಧಿಯ ಹೇಳುವವರು ಬಹಳ ಅಪರೂಪ. ಅಂಥವರೊಳಗೂ ದೈವಯೋಗದಿಂದ ಯಾವನಾದರೊಬ್ಬನು ಗಂಟುಬಿದ್ದರೂ ಪ್ರಯೋಜನವೇನು? ಗರ್ವರೂಪ ಮಲದಿಂದ ಅರಸರ ಕಿವಿಗಳು ಗಡಚು ಹಾಕಿರುತ್ತವೆ; ಅದರಿಂದ ಆತನು ಹೇಳಿದ ಬುದ್ಧಿಮಾತುಗಳು ವ್ಯರ್ಥವಾಗುವವು; ಮುಖಸ್ತುತಿ ಮಾಡುವವರ ಮರುಳು ಮಾತುಗಳಿಗೆ ಮೋಹಿತರಾದ ಅರಸರ ಮನಸ್ಸು ಗುರುಹಿರಿಯರ ಸದುಪದೇಶಕ್ಕೆ ಎಳಸುವದಿಲ್ಲ. ಅಂಥವರಿಗೆ ಹೇಳುವ ಉಪದೇಶವು ಬುಡಮೇಲು ಮಾಡಿದ ಕೊಡದ ಮೇಲೆ ಹನಿಸಿದ ನೀರಿನಂತೆ ವ್ಯರ್ಥವೇ ಸರಿ; ಆದುದರಿಂದ ಉಪದೇಶಕನಿಗೆ ಮಾತ್ರ ಖೇದವಾಗುವದೇ ಹೊರತು ಬೇರೆ ಏನೂ ಫಲವಿಲ್ಲ. ಜೀಯಾ, ಲಕ್ಷ್ಮಿಯು ಪ್ರಾಪ್ತವಾದಾಗ ಜನರು ಒಣಹೆಮ್ಮೆ ಮಾಡುತ್ತಾರೆ. ಲಕ್ಷ್ಮಿಯ ದುರ್ಗುಣಗಳನ್ನು ಹೇಳುತ್ತೇನೆ ಕೇಳಿರಿ! ಇಂಗಡಲೊಳಗಿಂದ ಹುಟ್ಟುವಾಗಲೇ ಈಕೆಗೆ ಒಡಹುಟ್ಟಿದವರ ನೆರಳು ಬಿತ್ತೋ ಏನೋ ಅನ್ನುವ ಹಾಗೆ ಚಂದ್ರನ ಕಲೆಯಿಂದ ವಕ್ರತ್ವವು, ಪಾರಿಜಾತ ವೃಕ್ಷದ ಪಲ್ಲವದಿಂದ ರಾಗವು, ಉಚ್ಚೈಃಶ್ರವದಿಂದ ಚಪಲತೆಯು, ಕಾಲಕೂಟ ವಿಷದಿಂದ ಮೋಹನ ಶಕ್ತಿಯು ಮದ್ಯದಿಂದ ಮದವು, ಕೌಸ್ತುಭಮಣಿಯಿಂದ ಕಾಠಿಣ್ಯವು ಪ್ರಾಪ್ತವಾದವು. ಈಕೆ ಒಬ್ಬರನ್ನೂ ಲೆಕ್ಕಿಸುವದಿಲ್ಲ. ನೋಡನೋಡಲು ಮಿಂಚಿನ ಹಾಗೆ ತೋರಿಯಡಗುವಳು. ಜಾಣರು ಸಿರಿಯನ್ನು ನೆಚ್ಚಬಾರದು. ಈ ಲಕ್ಷ್ಮಿಯ ಕುಟಿಲತನವನ್ನು ಎಷ್ಟು ಹೇಳಿದರೂ ತೀರದು. ಸ್ವಾಮಿ, ಇಂದು ಐಶ್ವರ್ಯದ ಶಿಖರಕ್ಕೆ ಏರಿಸಿದ ಮನುಷ್ಯನನ್ನೇ ನಾಳೆಗೆ ತೊಲಗಿ ಆತನನ್ನು ಮಣ್ಣುಪಾಲು ಮಾಡುತ್ತಾಳೆ. ಇಂಥ ದುಷ್ಟ ಲಕ್ಷ್ಮಿಯ ಗಾಳಿ ಒಮ್ಮೆ ಮೈಸೋಂಕಿದರೆ ಸಾಕು; ಆ ಪುರುಷನು ವಿದ್ವಾಂಸನಿರಲಿ, ಜಾಣನಿರಲಿ, ಪರಾಕ್ರಮಿ ಇರಲಿ, ಕುಲೀನನಿರಲಿ, ಸುಶೀಲನಿರಲಿ, ಎಂಥವನಿದ್ದರೂ ಅವನ ಗುಣಗಳನ್ನು ಲೋಪಮಾಡಿ ಅವನಿಗೆ ವಿಪರೀತ ಬುದ್ಧಿಯ ಹುಟ್ಟಿಸಿ ಅವನನ್ನು ನಿಜವಾದ ಸುಖಕ್ಕೆ ಎರವು ಮಾಡುತ್ತಾಳೆ. ರಾಜ್ಯಲಕ್ಷ್ಮಿಯ ಅಭಿಷೇಕದಿಂದಲೇ ಅರಸರ ಸೌಜನ್ಯವು ತೊಳೆದುಹೋಗುವದು. ಆಗಿನ ಹೋಮಾಗ್ನಿಯ ಹೊಗೆಯಿಂದ ಅವರ ನಿರ್ಮಲವಾದ ಹೃದಯವು ಮಲಿನವಾಗುವದು. ಪುರೋಹಿತನು ದರ್ಭೆಯಿಂದ ಸಂಪ್ರೋಕ್ಷಣ ಮಾಡಿದ ಕೂಡಲೇ ಅರಸರ ಕ್ಷಮಾಗುಣವು ಲಯವಾಗುವದು. ತಲೆಯ ಮೇಲೆ ಕಿರೀಟ ಬಂದ ಕೂಡಲೆ ಮುಪ್ಪಿನಿಂದ ತಲೆ ಬೆಳ್ಳಗಾಗುವದನ್ನು ಮರೆಯುತ್ತಾರೆ. ಛತ್ರ ಹಿಡಿಸಿಕೊಂಡಾಗಲೇ ಅವರಿಗೆ ಪರಲೋಕವು ಮರೆಯಾಗುವದು. ಚಾಮರದ ಗಾಳಿಗೆ ಅವರ ಸತ್ಯಶೀಲತ್ವವು ಹಾರಿಹೋಗುವದು. ಚೋಪದಾರರ ಕೈಯೊಳಗಿನ ವೇತ್ರದಂಡದಿಂದ ಅರಸರ ಔದಾರ್ಯಾದಿ ಗುಣಗಳು ಅಡಗುವವು. ಭಟ್ಟಂಗಿಗಳ ಜಯಜಯಕಾರದ ಶಬ್ದದೊಳಗೆ ಅವರು ಸಾಧು ಜನರ ಕಥೆಗಳಿಗೆ ಕಿವಿಗೊಡುವದಿಲ್ಲ. ಇಷ್ಟೇ ಅಲ್ಲ, ಅವರು

ಎಲ್ಲ ದುರ್ಗುಣಗಳಿಗೆ ತವರುಮನೆ ಯಾಗುವರು. ಜೂಜಾಡುವದೇ ವಿನೋದವೆಂದೂ, ವ್ಯಭಿಚಾರ ಮಾಡುವದೇ ಚತುರತನವೆಂದೂ, ಬೇಟೆಯಾಡುವದೇ ಶರೀರಕ್ಕೆ ಪರಿಶ್ರಮವೆಂದೂ, ಮದ್ಯಪಾನವೇ ತಕ್ಕ ವಿಲಾಸವೆಂದೂ, ಗುರುಹಿರಿಯರ ಉಪದೇಶ ವನ್ನು ಅಲ್ಲಗಳೆಯುವದೇ ಸ್ವಾತಂತ್ರ್ಯವೆಂದೂ, ವೇಶ್ಯಾಂಗನೆಯರ ಗಾನನೃತ್ಯಗಳಿಗೆ ಲುಬ್ಧವಾಗುವದೇ ರಸಿಕತನವೆಂದೂ, ದೊಡ್ಡ ದೊಡ್ಡ ತಪ್ಪುಗಳನ್ನು ಉಪೇಕ್ಷಿಸು ವದೇ ಮನಸ್ಸಿನ ದೊಡ್ಡತನವೆಂದೂ, ಜನರು ಹೇಳಿದಾಗ್ಯೂ ತಾವು ಸುಮ್ಮನೆ ಕಣ್ಣು ಮುಚ್ಚಿಕೊಂಡಿರುವದೇ ತಾಳ್ಮೆಯೆಂದೂ, ಮನಸ್ಸಿಗೆ ಬಂದಂತೆ ಮಾತಾಡು ವದೇ ಘನತೆಯೆಂದೂ, ದೇವರ ಭಯವನ್ನು ತೊರೆದು ನಿಲ್ಲುವದೇ ಪರಾಕ್ರಮವೆಂದೂ, ತಾರತಮ್ಯವರಿಯದಿರುವದೇ ನಿಷ್ಪಕ್ಷಪಾತವೆಂದೂ ಅರಸರು ತಿಳಕೊಳ್ಳುತ್ತಾರೆ.

ರಾಜಕುಮಾರರೇ, ಇಂಥ ವಿಪರೀತ ಸ್ಥಿತಿಗೊಳಗಾದ ಅರಸರು ನಿಶ್ಚಯ ವಾಗಿ ಇಹಪರ ಸುಖಕ್ಕೆ ಎರವಾಗುವರು. ಸುಖೋಪಭೋಗಗಳನ್ನು ಭೋಗಿಸು ತ್ತಿದ್ದರೂ ಆ ಲಕ್ಷ್ಮಿಯ ಸಂಗತಿಯಿಂದ ಒಂದು ಕ್ಷಣಮಾತ್ರವಾದರೂ ಆ ಅರಸರಿಗೆ ಸೊಗಸು ಇಲ್ಲ ಕಂಡಿರಾ ! ಹಲವರು ಹಣದ ಕಟ್ಟಾಸೆಯಿಂದ, ಹಲವರು ದಿನಾಲು ಹೊಸ ಹೊಸ ಬಗೆಯ ಭೋಗಗಳನ್ನು ಭೋಗಿಸಬೇಕೆಂಬ ಮನಸ್ಸಿನ ಲವಲವಿಕೆ ಯಿಂದ, ಹಲವರು ಪರನಾಡುಗಳನ್ನು ಜಯಿಸಿ ಸಾರ್ವಭೌಮರಾಗಬೇಕೆಂಬ ಕಾಂಕ್ಷೆಯಿಂದ, ಕೆಲವರು ಸ್ವರಾಜ್ಯದೊಳಗಿನ ಒಳಸಂಚುಗಳನ್ನು ಮುರಿಯ ಬೇಕೆಂಬ ಆಲೋಚನೆಯಿಂದ, ಈಮೇರೆಗೆ ಒಂದಿಲ್ಲೊಂದು ಚಿಂತೆಯೊಳಗೆ ಕುದಿಯುತ್ತಲೂ, ಕುಕರ್ಮಗಳನ್ನು ಮಾಡುತ್ತಲೂ, ಅನ್ಯಾಯಗಳನ್ನು ಉಪೇಕ್ಷಿ ಸುತ್ತಲೂ, ಅವುಗಳ ಫಲಗಳನ್ನು ಅನುಭೋಗಿಸುತ್ತಲೂ ಕ್ಲೇಶಕ್ಕೊಳಗಾಗಿ ಕಡೆಗೆ ಪಶ್ಚಾತ್ತಾಪಪಡುತ್ತಾರೆ. ಬಹುತರವಾಗಿ ಅರಸರ ಸುತ್ತು ಮುತ್ತು ದುಷ್ಟರೂ ದುರಾಚಾರಿಗಳೂ ನೆರೆದು, ಒಳಗೆ ಅವರ ಮೂರ್ಖತನಕ್ಕೆ ನಗುತ್ತಿದ್ದರೂ ಹೊರಗೆ ಮುಖಸ್ತುತಿಯನ್ನು ಮಾಡಿ ಅವರ ಚಿತ್ತವೃತ್ತಿಯನ್ನು ಸಂಪಾದಿಸುತ್ತಾರೆ. ಸ್ವಾರ್ಥ ಸಾಧಿಸುವ ಆ ದುಷ್ಟರ ಪದಿರನುಡಿಗಳಿಗೆ ಆ ಅರಸರು ಮರುಳಾಗಿ ಅವರು ಆಡುವ ಮಾತುಗಳೆಲ್ಲ ನಿಜವೆಂದು ನಂಬಿ, ವ್ಯರ್ಥವಾದ ಅಭಿಮಾನದಿಂದ ತಾವು ಮರಣ ಧರ್ಮಿಗಳೆಂಬದನ್ನು ಮರೆತು, ಕೇವಲ ದೇವರ ಅವತಾರವೆಂದು ತಿಳಿದುಕೊಂಡು ಮಂದಿಗೆ ತಾವು ದರ್ಶನ ಕೊಡುವದೇ ಅವರ ಮೇಲಿನ ಅನುಗ್ರಹವೆಂತಲು, ಅವರಿಗೆ ಆಜ್ಞೆ ಮಾಡುವದೇ ವರ ಕೊಟ್ಟ ಹಾಗೆಂತಲು, ಅವರನ್ನು ಸೋಂಕುವದೇ ಅವರ ಪಾಪಪರಿಹಾರ ಮಾಡಿದ ಹಾಗೆಂತಲು ತಿಳಕೊಂಡು, ಮದದಿಂದ ಮುಂದುಗಾಣ ದವರಾಗಿ ದೇವರ ಭೀತಿಯನ್ನು ಬಿಟ್ಟುಬಿಡುತ್ತಾರೆ; ವಿದ್ವಾಂಸರ ಉಪಹಾಸ ಮಾಡುತ್ತಾರೆ; ಸದುಪದೇಶ ಮಾಡುವ ಹಿರಿಯರಿಗೆ ಮುದಿಹುಚ್ಚು ಹತ್ತಿ ಸುಮ್ಮನೆ ವಟವಟ ಹಚ್ಚುತ್ತಾರೆಂದು ಹಳಿಯುತ್ತಾರೆ; ಒಳಿತು ಹೇಳುವವರ ಮೇಲೆ ಕಣ್ಣು ತೆಗೆಯುತ್ತಾರೆ; ದೇವರನ್ನು ಸ್ತುತಿಸುವ ಹಾಗೆ ಯಾವಾಗಲೂ ಕೈಜೋಡಿಸಿಕೊಂಡು

ತಮ್ಮ ಗುಣಗಳನ್ನು ಕೊಂಡಾಡಿ, ತಾವು ಅಂದದ್ದೇ ಪ್ರಮಾಣವೆಂದು ಅನ್ನುವವರಿಗೆ ಮಾತ್ರ ಮೆಚ್ಚುತ್ತಾರೆ. ಇಂಥವರೊಡನೆಯೇ ಅರಸರು ಪ್ರೀತಿಯಿಂದ ಮಾತಾಡು ವರು; ಇಂಥವರಿಗೆ ಆಶ್ರಯ ಕೊಡುವರು; ಇಂಥ ಕೀಳರ ಗೆಳೆತನ ಮಾಡಿ, ಅವರು ಹೇಳಿದ ಹಾಗೆ ಕೇಳುವರು; ಬಹಳ ಹೇಳುವದೇನು ? ರಾಜ್ಯವೆಂಬುದು ಮುಳ್ಳಿನ ಹಾಸಿಗೆ; ತಾರುಣ್ಯವು ಮದ್ಯಕ್ಕಿಂತ ಮದಗೊಳಿಸುವಂಥದು. ಆ ಕಾರಣ ಮಂದಿ ನಗದಂತೆ, ಗುರುಹಿರಿಯರು ಧಿಕ್ಕರಿಸದಂತೆ, ಸಾಧು ಜನರು ಹಳಿಯದಂತೆ, ಇಷ್ಟ ಮಿತ್ರರಿಗೂ ವಿದ್ವಜ್ಜನರಿಗೂ ಖೇದವಾಗದಂತೆ ನೀವು ವರ್ತಿಸಬೇಕು, ಕಂಡಿರಾ ! ಧೂರ್ತರನ್ನೂ ದುಷ್ಟರನ್ನೂ ಜಾರರನ್ನೂ ಹತ್ತಿರ ಬರಗೊಡಬಾರದು; ಇಲ್ಲದ ದುರಾಲೋಚನೆಗಳನ್ನು ಕಲಿಸಿ ಮೋಸಗೊಳಿಸುವ ಠಕ್ಕರು ಸಾವಿರಾರು ಮಂದಿ ಯುಂಟು. ಇದರಂತೆಯೇ ಹೆಂಗಸರ ಮೊಗದಾವರೆಗೂ ಏಕಾಂತದಲ್ಲಿ ಮಾತಾಡುವ ಅವರ ಸವಿನುಡಿಗಳಿಗೂ ಮರುಳಾಗಬಾರದು. ವೈರಿಗಳ ಉಕ್ಕಿನ ಬಾಣವನ್ನು ಎದೆ ಗೊಟ್ಟು ತಾಳಬಹುದು. ಕಾಮನ ಕೋಮಲವಾದ ಹೂಬಾಣದ ಹೊಡತವ ತಾಳು ವದು ದುಸ್ತರವು. ನೀವು ಧೈರ್ಯಶಾಲಿಗಳು. ಮಹಾರಾಜರಂತೂ ಒಳ್ಳೇ ಪ್ರಯತ್ನ ದಿಂದ ದೊಡ್ಡ ದೊಡ್ಡ ಪಂಡಿತರನ್ನು ಇಟ್ಟು ನಿಮಗೆ ವಿದ್ಯೆ ಕಲಿಸಿದ್ದಾರೆ; ಐಶ್ವರ್ಯ ದಿಂದ ಮದಾಂಧರಾಗುವ ಅಶಿಕ್ಷಿತರಿಗೇ ಈ ಉಪದೇಶವು ಅವಶ್ಯವಾದದ್ದೆಂದು ನನ್ನ ಮನವರಿಕೆಯಿದ್ದರೂ ನಿಮ್ಮ ಗುಣಗಳನ್ನೂ ಸರಳತನವನ್ನೂ ಕಂಡು ಅತ್ಯಾ ನಂದಪಟ್ಟು ನಿಮ್ಮ ಕೂಡ ಇವೆರಡು ಮಾತುಗಳನ್ನಾಡದೆ ಇರುವದಾಗಲಿಲ್ಲ. ಇನ್ನು ಮಹಾರಾಜರು ನಿಮ್ಮನ್ನು ಯುವರಾಜ ಪಟ್ಟಕ್ಕೆ ಕೂಡಿಸುತ್ತಾರೆ; ಪಟ್ಟಾಭಿ ಷೇಕ ಸಮಾರಂಭವಾದ ಬಳಿಕ ಪರಂಪರೆಯಿಂದ ನಡೆಯುತ್ತ ಬಂದ ಈ ರಾಜ್ಯ ಭಾರವನ್ನು ಸಾಗಿಸಿ, ಹಗೆಗಳನ್ನು ಗೆದ್ದು, ಆಪ್ತರನ್ನು ಉತ್ಕರ್ಷಗೊಳಿಸಿ, ಮಹಾ ರಾಜರು ಮೊದಲೇ ಜಯಿಸಿದ ಈ ಯಾವತ್ತು ಪೃಥ್ವಿಯನ್ನು ದಂಡು ತಕ್ಕೊಂಡು ಹೋಗಿ ತಿರುಗಿ, ಸಪ್ತದ್ವೀಪಗಳನ್ನು ಕೈವಶಮಾಡಿಕೊಂಡು ಕೀರ್ತಿ ಪಡೆಯ ಬೇಕು " ಎಂದು ಉಪದೇಶಿಸಿ ಶುಕನಾಸನು ಸುಮ್ಮನಾದನು.

— ಗಂಗಾಧರ ಮಡಿವಾಳೇಶ್ವರ ತೂರಮರಿ

(ಬಾಣಕಾದಂಬರಿಯಿಂದ.)

## ಅಭ್ಯಸನಗಳು

**ಪ್ರಶ್ನೆಗಳು :—**

(೧) ತರುಣನು ಅವಿಚಾರದ ಬಲೆಗೆ ಏಕೆ ಬೀಳುವನು ?

(೨) ಸಂಪತ್ತಿನಿಂದ ಮನುಷ್ಯನು ದುರ್ಗುಣಿಯಾಗುವ ಕಾರಣವೇನು ?

(೩) ಅಧಿಕಾರವು ಮನುಷ್ಯನನ್ನು ಉನ್ಮತ್ತನನ್ನಾಗಿ ಮಾಡುವುದೇಕೆ ?

(೪) ರಾಜರು ಬಹುತರವಾಗಿ ಯಾವ ಬಗೆಯ ಜನರಿಗೆ ಆಶ್ರಯ ಕೊಡುವರು ?

(೫) ತರುಣರು ಗುರುಹಿರಿಯರ ಮಾತುಗಳನ್ನು ಲಕ್ಷಿಸದಿರಲು ಕಾರಣವೇನು ?

ಭಾಷಾಭ್ಯಾಸ :—

(೧) ಚಂದ್ರನ ಕಲೆಯಿಂದ ವಕ್ರತ್ವವು, ಪಾರಿಜಾತ ವೃಕ್ಷದಿಂದ ರಾಗವು, ಉಚ್ಚೈಃ ಶ್ರವದಿಂದ ಚಪಲತೆಯು, ಮದ್ಯದಿಂದ ಮದವು, ಕೌಸ್ತುಭಮಣಿಯಿಂದ ಕಾಠಿಣ್ಯವು ಪ್ರಾಪ್ತವಾದವು.

ಇಲ್ಲಿ ವಕ್ರತ್ವ, ರಾಗ, ಚಪಲತೆ, ಕಾಠಿಣ್ಯ — ಇವು ಮನುಷ್ಯನಿಗೆ ಅನ್ವಯಿಸಿದಾಗ ಇವುಗಳ ಅರ್ಥವೇನಾಗುವದು ?

(೨) ಲಕ್ಷ್ಮಿಯ ದುರ್ಗುಣಗಳನ್ನು ಹೇಳುತ್ತೇನೆ ಕೇಳಿರಿ.... ಅರಸರು ತಿಳಕೊಳ್ಳುತ್ತಾರೆ. ಈ ದೊಡ್ಡ ವಾಕ್ಯವೃಂದದಲ್ಲಿ, ಉದ್ದವಾದ ವಾಕ್ಯಗಳು, ಚಿಕ್ಕ ಚಿಕ್ಕ ತೂಕ ತೂಕದ ವಾಕ್ಯಗಳು ಇರುವವು. ಇಂತಹ ವಾಕ್ಯಗಳನ್ನು ಗುರುತಿಸಿರಿ.

(೩) [ಅ] ರಾಜ್ಯವೆಂಬುದು ಮುಳ್ಳಿನ ಹಾಸಿಗೆ.

[ಆ] ರಾಜ್ಯಸುಖವೆಂಬ ನಿದ್ರೆ ಹತ್ತಿದ ಬಳಿಕ ಬೆಳಗಾದರೂ ಎಚ್ಚರವಾಗುವದಿಲ್ಲ.

[ಇ] ಛತ್ರ ಹಿಡಿಸಿಕೊಂಡಾಗಲೇ ಅವರಿಗೆ ಪರಲೋಕವು ಮರೆಯಾಗುವದು.

ಈ ವಾಕ್ಯಗಳಲ್ಲಿಯ ವಿಚಾರಗಳನ್ನು ವಿಸ್ತರಿಸಿ ಬರೆಯಿರಿ.

(೪) 'ಇಂಥವರೊಡನೆಯೇ ಅರಸರು ಪ್ರೀತಿಯಿಂದ ಮಾತಾಡುವರು.

ಇಂಥವರಿಗೆ ಆಶ್ರಯ ಕೊಡುವರು....ಸಾವಿರಾರು ಮಂದಿಯುಂಟು.

ಈ ವಾಕ್ಯಗಳನ್ನು ಸಂಭವಾರ್ಥವಿದ್ದಲ್ಲಿ ನಿಷೇಧಾರ್ಥವನ್ನೂ ನಿಷೇಧಾರ್ಥವಿದ್ದಲ್ಲಿ ಸಂಭವಾರ್ಥವನ್ನೂ ಉಪಯೋಗಿಸಿ ಬರೆಯಿರಿ.

ಶಬ್ದವಿಚಾರ :—

(೧) [೧] ಗರ್ಭಶ್ರೀಮಂತ, ಮೃಗಜಲ, ಮಮಕಾರ, ಮೊಗದಾವರೆ—
ಇವುಗಳ ಅರ್ಥವನ್ನು ಹೇಳಿರಿ.

[೨] ಸ್ತುತಿ, ಈಶ್ವರ, ಸ್ವರ್ಗ, ಮುಖ, ರಾಜ, ಛತ್ರಿಕಾ ಇವುಗಳ ತದ್ಭವ ರೂಪಗಳನ್ನು ಕೊಡಿರಿ.

[೩] ಕಿವಿಗೊಡು, ಕಿವಿ ಹಿಂಡು, ಕಣ್ಣು ತೆಗೆ, ಕೈಜೋಡಿಸು ಇವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.

(೨) [ಅ] ಕರ್ಮ — ಕುಕರ್ಮ, ಜನ — ಸುಜನ, ಇದರಂತೆ ಕು, ಸು, ಸತ್, ದುರ್ ಇವುಗಳನ್ನು ಉಪಯೋಗಿಸಿ ಎರಡೆರಡು ಶಬ್ದಗಳನ್ನು ಹೇಳಿರಿ.

[ಆ] ಗುರುಹಿರಿಯರು, ತಂದೆತಾಯಿಗಳು — ಇಂತಹ ಐದು ಜೋಡು ನುಡಿಗಳನ್ನು ಹೇಳಿರಿ.

ವಾಕ್‌ಶಿಕ್ಷಣ :—

(೧) 'ಬಾಳುವ ಹದ' ಈ ಪಾಠದಲ್ಲಿಯ ಮಾತುಗಳಿಗೂ, ಶುಕನಾಸನ ಉಪದೇಶಕ್ಕೂ ಇರುವ ಸಾಮ್ಯವನ್ನು ಕಂಡುಹಿಡಿಯಿರಿ.

(೨) ಸೋಮೇಶ್ವರ ಶತಕ, ರತ್ನಾಕರ ವರ್ಣಿಯ ಶತಕತ್ರಯ — ಇವುಗಳಿಂದ ಕೆಲವು ನುಡಿಗಳನ್ನು ಪಾಠ ಮಾಡಿರಿ.

(೩) ಪಲ, ವ್ರಿಕ್ಷ, ಸೀತೋಪಚಾರ, ಸುಸಿಕ್ಷಿತ — ಇವುಗಳ ಶುದ್ಧ ರೂಪಗಳನ್ನು ಬರೆಯಿರಿ.

ಚರ್ಚೆ :—

(೧) ' ಹಣವೇ ಎಲ್ಲ ಅನ್ಯಾಯದ ಮೂಲ '.

(೨) ' ಜಗತ್ತಿನ ಪ್ರಗತಿ ವೃದ್ಧರಿಂದ ಆಗಲಾರದು '.

ಬರೆಹ :—

ಶುಕನಾಸ ಮಂತ್ರಿಯ ಉಪದೇಶವನ್ನು ಸರಳ ಭಾಷೆಯಲ್ಲಿ ಬರೆಯಿರಿ.

# ೧೫. ಹುಲಿಯ ಬೇಟೆ

[ ಸಾಹಸದ ಜೀವನವನ್ನು ಚಿತ್ರಿಸುವ ಒಂದು ಕಥೆ. ತರುಣರು ಸಾಹಸಪ್ರಿಯರಾಗ ಬೇಕು. ಸ್ವತಂತ್ರ ಭಾರತವು ಸೈನ್ಯಪಡೆ, ವೈಮಾನಿಕ ದಳ, ನಾವಿಕ ದಳ ಮೊದಲಾದವುಗಳಲ್ಲಿ ಭಾಗವಹಿಸಲು ಸಾಹಸಪ್ರಿಯ ಯುವಕರನ್ನು ಅಪೇಕ್ಷಿಸುತ್ತಿದೆ. ]

ಜಗಜ್ಜಟ್ಟಿಯಾಗಬೇಕೆಂಬ ಮಹತ್ವಾಕಾಂಕ್ಷೆಯು ಎಳೆವಯಸ್ಸಿನಿಂದಲೇ ದಾದಾನಲ್ಲಿ ಒಡಮೂಡಿ ಬೆಳೆದುಬಂದಿತ್ತು. ಈ ಮಹತ್ವಾಕಾಂಕ್ಷೆಯನ್ನು ಈಡೇರಿಸಿಕೊಳ್ಳುವ ಪ್ರಯತ್ನವು ಎಡೆಬಿಡದೆ ಸಾಗಿತ್ತು. ಆದರೆ ಬಡ ಕುಟುಂಬದಲ್ಲಿ ಹುಟ್ಟಿದ ದಾದಾನ ಆಶೆ, ಬರಿ ಕನಸು ಎಂದು ಅವನ ತಂದೆಯು, ಇದ್ದ ಮೂರು ಕೂರಿಗೆ ಭೂಮಿಯನ್ನು ಸಾಲದಲ್ಲಿ ಮಾರಿಕೊಂಡಾಗ ಎಲ್ಲರಿಗೂ ಎನಿಸಿತ್ತು.

ಭೂಮಿ ಹೋದರೂ ದಾದಾ ತನ್ನ ನಿರ್ಧಾರ ಬಿಡಲಿಷ್ಟಪಡಲಿಲ್ಲ. ಮಹಾರಾಜರ ಗರಡಿಮನೆಯ ಹಿರಿಹುದ್ದರಿಯೊಡನೆ ಕುಸ್ತಿ ಆಡುವ ಆಹ್ವಾನ ಮಾಡಿದನು. ಮಹಾರಾಜರಿಗೆ ಅನಾಮಧೇಯನಾದ ದಾದಾನ ಈ ಔದ್ಧತ್ಯಕ್ಕೆ ಕಡುಕೋಪ ಬಂದಿರಬೇಕು. ತಮ್ಮ ಗರಡಿಮನೆಯಲ್ಲಿ ಕುಸ್ತಿ ಗಡಿಗಳ ವೈ ತಿಕ್ಕುವವರೊಡನೆ ಮೊದಲು ಆಡಿ ನೋಡು, ಎಂದು ತಿಳಿಸಿದರು. ದಾದಾನಿಗೆ ಮಹಾರಾಜರ ಈ ಉತ್ತರದಿಂದ ಸ್ವಲ್ಪ ನಿರುತ್ಸಾಹ ಆದರೂ ಅದನ್ನು ಸ್ವೀಕರಿಸದೆ ಗತ್ಯಂತರವಿರಲಿಲ್ಲ.

ಗರಡಿಮನೆಯಲ್ಲಿಯೇ ಕುಸ್ತಿಯು ನಡೆಯಬೇಕೆಂದು ಮಹಾರಾಜರು ವಿಧಿಸಿದ್ದರು. ದಾದಾನ ಅಂದಿನ ಕುಸ್ತಿಯ ರೀತಿ ಮಹಾರಾಜರ ತುಂಬ ಮೆಚ್ಚುಗೆಯನ್ನು ಪಡೆಯಿತು. ಕಣದ ಕುಸ್ತಿಗೆ ದಾದಾನ ಯೋಗ್ಯತೆಯುಂಟೆಂದು ಅವರ ಮನವರಿಕೆಯಾಯ್ತು. ದಾದಾನ ಅಪೇಕ್ಷೆಯಂತೆ ತಮ್ಮ ಆಸ್ಥಾನದ ಹಿರಿಯ ಮಲ್ಲನೊಡನೆ ಒಮ್ಮೆ ಕುಸ್ತಿಯ ಸಂಧಿಯನ್ನು ಕೊಡಲು ಅಡ್ಡಿಯಿಲ್ಲವೆಂದು ತೋರಿತು. ಗರಡಿಮನೆಯ ಹಿರಿಹುದ್ದರಿಯೊಡನೆ ದಾದಾನಿಗೆ ತನ್ನ ಮಲ್ಲಯುದ್ಧದ ಕೌಶಲವನ್ನು ತೋರಿಸುವ ಸಂಧಿ ದೊರೆಯುವದೆಂದು ನಂಬುಗೆಯಾಯ್ತು.

ಒಂದುವೇಳೆ ತನ್ನನ್ನು ಎದುರಿಸಿದರೆ ಕುಸ್ತಿಯಲ್ಲಿ ದಾದಾನನ್ನು ಮಣ್ಣು ಮುಕ್ಕಿಸಿ, ಜೀವವಿರುವ ವರೆಗೆ ಕುಸ್ತಿಯ ಹೆಸರೆತ್ತದಂತೆ ಮಾಡುವೆನೆಂದು ಆ ಪಂಜಾಬೀ ಮಲ್ಲನು ಸಾರಿದನು. ಈ ಮೊದಲು, ಅವನು ಸಂಸ್ಥಾನಕ್ಕೆ ಬಂದ ಕುಸ್ತಿಯ ಹುದ್ದರಿಗಳನ್ನೆಲ್ಲ ಮೆಟ್ಟಿ ಹಾಕಿದ್ದನು. ಅವನ ಯೋಗ್ಯತೆಯನ್ನು ಅರಿತವರು ಅವನನ್ನು ಕೆಣಕಿ ಮೈನುಗ್ಗು ಮಾಡಿಕೊಳ್ಳುವ ಗೋಜಿಗೆ ಹೋಗದಿರಲು ದಾದಾನಿಗೆ ಸೂಚಿಸಿದರು. ಆದರೆ ದಾದಾನ ಆತ್ಮವಿಶ್ವಾಸವು ಅವನಿಗೆ ತಲೆತಗ್ಗಿಸಿಕೊಂಡಿರಲು ಬಿಡಲಿಲ್ಲ. ಉತ್ಸಾಹವೂ ಕುಗ್ಗಲಿಲ್ಲ.

ಪಂಜಾಬೀ ಪೈಲವಾನನ ಪುಷ್ಟವಾದ ದೇಹ, ತೇಜಸ್ವಿ ಅಂಗಕಾಂತಿ, ನೋಡಿದವರನ್ನು ಮೆಚ್ಚಿಸಿ ಬಿಡುವ ಆ ನಿಲವು ! ಅವನಿದಿರು ದಾದಾನೇ ಪುಡಿಯಾಳು. ಸಾದುಗಪ್ಪು. ಅಂಗಸಾಧನೆಯಿಂದ ಹುರಿಕಟ್ಟಾದ ಮೈಕಟ್ಟಿನ, ಹರೆಯದ ಹುಮ್ಮಸವು ಉಕ್ಕುತ್ತಿರುವ ಚಪಲ ತರುಣನಾದ ಪಂಜಾಬಿಯ ಎದುರು ದಾದಾನ ಆಟ ಸಾಗಲಿಕ್ಕಿಲ್ಲವೆಂದು ಎಲ್ಲರ ಭಾವನೆಯಾಗಿತ್ತು. ಮೊದಲಿನೆರಡು ಸುತ್ತಿನಲ್ಲಿ ಪಂಜಾಬಿಯು ದಾದಾನನ್ನು ಒಮ್ಮೆ ಹತ್ತಿರ ಬರಗೊಟ್ಟು ತನ್ನ ಕಂಕುಳಲ್ಲಿ ಅದುಮಿ ಹಿಡಿದುಕೊಳ್ಳುವ ಹವಣಿಕೆಯಲ್ಲಿದ್ದ. ಮತ್ತೊಮ್ಮೆ ತಾನೇ ನೆಲಕ್ಕೆ ಫಕ್ಕನೆ ಬಾಗಿ ದಾದಾನ ಕಾಲು ಅಮಟುವ ಹಂಚಿಕೆಯಲ್ಲಿದ್ದ. ದಾದಾನು ಇವೆರಡಕ್ಕೂ ಪ್ರತಿ ಉಪಾಯಗಳಿಂದ ನುಸುಳಿ, ಪಂಜಾಬಿಯ ಪೇಚುಗಳು ನಾಟಲಾರವೆಂಬುದನ್ನು ಎಲ್ಲರ ನಿದರ್ಶನಕ್ಕೆ ತಂದುಕೊಟ್ಟ. ದಾದಾನ ಪಕ್ಷಪಾತಿಗಳಿಗೆ ಆದ ಹಿಗ್ಗು, ಆನಂದದ ಧನ್ಯೋದ್ಗಾರಗಳ ರೂಪದಿಂದ ವಾತಾವರಣವನ್ನೆಲ್ಲ ವ್ಯಾಪಿಸಿಬಿಟ್ಟಿತು. ಪಂಜಾಬಿಯ ಅನುಯಾಯಿಗಳು ತಮ್ಮ ಗುರುವಿನ ನೀರಿಳಿಯುವದನ್ನು ಕಂಡು ನಿರುತ್ಸಾಹಿಗಳಾದರು. ದಾದಾನು ಕಣ ಬಿಟ್ಟು ಹೋಗೆ ನೆಗೆಯುತ್ತಾನೆ, ಚಡ್ಡಿಯನ್ನು ಹಿಡಿಯುತ್ತಾನೆ ಇವೇ ಮುಂತಾದ ತಕರಾರುಗಳನ್ನು ಒಡ್ಡಲಾರಂಭಿಸಿದರು. ಹೀಗೆ ಪ್ರೇಕ್ಷಕರ ಮನಸ್ಸಿನ ಏರಿಳಿತಗಳು ನಡೆದಿರುವಾಗ ದಾದಾನು ಪಂಜಾಬಿಯ ಬೆನ್ನು ನೆಲಕ್ಕೆ ಹಚ್ಚಿ ಆತನ ಎದೆಯ ಮೇಲೆ ಒಂದು ಬಾರಿ ಚಪ್ಪರಿಸಿ ಸಡ್ಡು ಹೊಡೆಯುತ್ತ ನಿಂತ ನೋಟವು ಎಲ್ಲರನ್ನೂ ಅಚ್ಚರಿಗೊಳಿಸಿತು.

ಹಿರಿಹುದ್ದರಿಯಾದ ಪಂಜಾಬಿಯು ಸ್ವಗ್ರಾಮಕ್ಕೆ ತೆರಳಿದನು. ದಾದಾನು ಆಸ್ಥಾನದ ಮನ್ನಣೆಯನಾದನು. ದಾದಾನ ಶಕ್ತಿವರ್ಧನೆಗೆ ಪೋಷಕವಾದ ಪೌಷ್ಟಿಕ ಆಹಾರ ಪದಾರ್ಥಗಳನ್ನು ಅವನಿಗೆ ಒದಗಿಸುವ ರಾಜಾಜ್ಞೆಯಾಯಿತು. ದಾದಾನ ಅಂಗಸಾಮರ್ಥ್ಯದೊಡನೆ ಆತನ ಅಂಗಕಾಂತಿಯೂ ಜನರ ಪ್ರಶಂಸೆಯ ವಿಷಯವಾಯಿತು. ಮಲ್ಲಯುದ್ಧದಲ್ಲಿ ದಾದಾನನ್ನು ಎದುರಿಸುವ ಗಡಿಗಳಾರೂ ಉಳಿಯಲಿಲ್ಲ. ಜಯಲಕ್ಷ್ಮಿಯು ದಾದಾನಿಗೆ ಮೆಚ್ಚಿಕೊಂಡು ಅವನ ಕೊರಳಿಗೇ ಮಾಲೆ ಹಾಕುವಳೆಂದು ಜನರು ಆಡಿಕೊಳ್ಳುವ ಮಟ್ಟಿಗೆ ದಾದಾನ ಖ್ಯಾತಿಯು ಬೆಳೆಯಿತು. ಅದರಂತೆ ಅವನ ವಿಜಯಪರಂಪರೆಯೂ ಉಂಟಾಯಿತು.

ಮಹಾರಾಜರಿಗೆ ಕುಸ್ತಿಯಷ್ಟೇ ಬೇಟೆಯಲ್ಲೂ ಹುಚ್ಚು. ಹುಲಿಯ ಬೇಟೆಗಾಗಿ ನಿಬಿಡವಾದ ಅರಣ್ಯವಿದ್ದಲ್ಲಿಗೆ ತಮ್ಮ ಬೇಟೆಯಪಡೆಯೊಂದಿಗೆ ಮಹಾರಾಜರು ಹೋಗುವದು ವಾಡಿಕೆ. ಗರಡಿ ಮನೆಯ ಕೆಲ ಜಟ್ಟಿಗಳು ಮಹಾರಾಜರ ಬೆಂಗಾವಲಿಗೆ ಹೋಗುವ ಸಂಪ್ರದಾಯವೂ ಮೊದಲಿನಿಂದ ರೂಢವಾಗಿತ್ತು. ದಾದಾನು ಮಹಾರಾಜರಿಗೆ ತನ್ನ ಧೈರ್ಯ ಸಾಮರ್ಥ್ಯವನ್ನು ತೋರಿಸುವಂತಹ ಸಂಧಿಯನ್ನೆಂದೂ ಹುಸಿಹೋಗಗೊಡುತ್ತಿದ್ದಿಲ್ಲ. ಸಂಗಡ ದಾದಾನು ಇದ್ದಲ್ಲಿ ತಮ್ಮ ಜೀವಕ್ಕೆ ಸುರಕ್ಷಿತತೆ ಹೆಚ್ಚೆಂಬುದನ್ನು ಮಹಾರಾಜರೂ ಅರಿತಿದ್ದರು.

ಸಹ್ಯಾದ್ರಿಯ ಒಂದು ಪ್ರದೇಶ. ಗಿರಿಕಂದರಗಳ ದಟ್ಟಡವಿಯು ಘೋರಾರಣ್ಯದಲ್ಲಿ ಗಗನ ಚುಂಬಿತ ಮರಗಳೇ ಎತ್ತ ನೋಡಿದತ್ತ ಕಾಣುವವು. ಮನುಷ್ಯರು ಕಾಣದಷ್ಟು ಎತ್ತರವಾಗಿ ಬೆಳೆದ ಪೊದೆಗಳು. ಒಂದೆಡೆ ಸೂರ್ಯನು ನೆತ್ತಿಯ ಮೇಲೆ ಬಂದಾಗ ಮಾತ್ರ ಕಾಣುವಂಥ ಉನ್ನತ ಗಿರಿಶಿಖರ. ಇನ್ನೊಂದೆಡೆಗೆ ಪಾತಾಳಗಂಗೆಯ ನೆನಪು ಮಾಡಿಕೊಡುವಂತಹ ಕೊಳ್ಳ. ಇವುಗಳ ನಡುವೆ ಕಾಲು ದಾರಿಗುಂಟ ನಡೆಯುವ ಬೇಟೆಯ ತಂಡದೊಂದಿಗೆ ದಾದಾ ನಡೆಯುವಾಗ ಆತನಿಗೆ ತನ್ನ ಜನ್ಮ ಸಾಫಲ್ಯವಾಯಿತೆಂಬ ಆತ್ಮ ಸಂತೃಪ್ತಿಯು ಅವನ ನರನಾಡಿಗಳಲ್ಲಿ ತುಂಬಿತ್ತು. ಅಲ್ಲಿ ಪ್ರವಾಸಿಕರಿಗಾಗಿ ಕಟ್ಟಿದೊಂದು ಸರಕಾರಿಬಂಗಲೆಯಲ್ಲಿ ಮಹಾರಾಜರು ತಂಗಿದ್ದರು. ಹುಲಿಯ ಬೇಟೆಯ ಕುತೂಹಲವು ಅವರಿಗೆ ಅಸಹನೀಯವಾಗಿತ್ತು. ಹುಲಿಯನ್ನು ಆಕರ್ಷಿಸುವ ಉದ್ದೇಶದಿಂದ ಮೇಕೆಯನ್ನು ಕಟ್ಟುವ ಆಯಕಟ್ಟಿನ ಸ್ಥಳಗಳನ್ನು ಬಲ್ಲ ಬೇಟೆಯ ಆಳುಗಳಿಗೆ ಎರಡು ದಿನಗಳಾದರೂ, ಇನ್ನೂ ಒಂದು ಹುಲಿಯನ್ನೂ ಮಂಚಿಕೆಯ ಬಳಿ ಬರುವಂತೆ ಮಾಡಲಾಗಲಿಲ್ಲ. ಇದರಿಂದ ಮಹಾರಾಜರಲ್ಲಿ ನಿರಾಶೆಯು ಕಾತರಭಾವವು ಹೆಚ್ಚಿತು. ಹೋದ ಸಲ ದೊಡ್ಡ ಹುಲಿಯನ್ನು ಹೊಡೆದ ಸ್ಥಳಕ್ಕೆ ತಾವು ಹೋಗಿ, ಹೊಂಚು ಹಾಕಿ ಕುಳಿತು ಹುಲಿಯ ಬೇಟೆ ಮಾಡಿ, ಈ ತಂಡದವರನ್ನು ನಾಚಿಸಬೇಕೆಂಬ ವಿಚಾರವು ಅವರನ್ನು ಬಾಧಿಸಲಾರಂಭಿಸಿತು. ತಾವು ಏಕಾಕಿಯಾಗಿ ಹೋಗಲು ಅನುಯಾಯಿಗಳು ಅವಕಾಶವನ್ನು ಕೊಡರು; ವ್ಯಕ್ತಿಸ್ವಾತಂತ್ರ್ಯಕ್ಕೆ ಈ ರೀತಿ ಎರವಾದ ತಮ್ಮ ಅವಸ್ಥೆಯ ಬಗೆಗೆ ಅವರಿಗೆ ಹೇಗೆ ಹೇಗೋ ಎನಿಸುತ್ತಿತ್ತು. ಅವರಿದ್ದ ಬಂಗಲೆಯಲ್ಲಿ ಹೊಬಿಸಿಲು ಅದೇ ತಾನೆ ಬಿದ್ದಿತ್ತು. ಬೇಟೆಗಾರರೊಡನೆ ಹೋದ ದಾದಾ ಮರಳಿ ಬಂದನು. ಅವನ ಪ್ರಸನ್ನ ಮುಖದಿಂದ 'ಹುಲಿಯ ಬೇಟೆಯಾಡದೆ ಮರಳುವ ಪ್ರಸಂಗವು ಖಂಡಿತವಾಗಿಯೂ ಇಲ್ಲ' ಎಂದು ಮಹಾರಾಜರಿಗೆ ಎನಿಸಿತು.

ದಾದಾನನ್ನು ಕರೆಯಿಸಿ "ಬೇಟೆಯಾಡದೆ ಹೀಗೆ ಸುಮ್ಮನೆ ಕೂಡುವುದು ನನಗೆ ಸೇರದು; ಇಂದು ನಾವಿಬ್ಬರೇ ಹೋಗಿ ನೋಡಿಕೊಂಡು ಬರೋಣ ನಡೆ" ಎಂದರು. ದಾದಾನು ಮಹಾರಾಜರ ಸೂಚನೆಗೆ ಕೃತಜ್ಞತೆಯಿಂದ ತಲೆಬಾಗಿದನು. ಮಹಾರಾಜರು ತಮ್ಮ ರಾಯಫಲ್ ತಕ್ಕೊಂಡು ಹೊರಡಲು ದಾದಾನಿಗೆ ಸನ್ನೆ ಮಾಡಿದ್ದೇ

ತಸ; ಅದನ್ನೆತ್ತಿ ಅವನು ಮಹಾರಾಜರ ಮುಂದೆ ನಡೆದೇ ಬಿಟ್ಟನು. ಮಹಾರಾಜರು ಸೀಳುದಾರಿಯಿಂದ ಸಮೀಪದಲ್ಲಿಯೆ ತಿರುಗಾಡಿ ಬರಲು ಹೋಗುತ್ತಿರುವರೆಂದು ಉಳಿದವರು ಎಣಿಸಿದರು. ಮಹಾರಾಜರ ಜೊತೆಯಲ್ಲಿ ಹತ್ತಾಳಿನ ಕಸುವಿನ ದಾದಾ ಇರುವಾಗ ಇತರರ ಲೆಕ್ಕ ಅವರಿಗೇನು ಎಂದು ಕೆಲವರು ಆಡಿಕೊಂಡರು.

× × × ×

ಹೊತ್ತು ಮುಳುಗಿತು. ಚಂದ್ರನು ಬೆಳದಿಂಗಳಲ್ಲಿ ಅರಣ್ಯದ ದರಿ ಕಂದರ ಗಳೊಳಗೆ ಗಿಡಮರಗಳಡಿಯಲ್ಲಿ ಕಗ್ಗತ್ತಲೆಯ ಆಳವನ್ನು ತೋರಿಸುತ್ತಿರುವದನ್ನು ನೋಡಿ ದಾದಾ ಆಶ್ಚರ್ಯಪಟ್ಟನು. ಮೊದಲೇ ಸಿದ್ಧಪಡಿಸಿದ ಮಂಚಿಕೆಯ ಮೇಲೇರಿ ಕುಳಿತಾಗ ಮಹಾರಾಜರು ಉಸಿರಾಡಿಸುವುದು ಮಾತ್ರ ದಾದಾನಿಗೆ ಕೇಳಿ ಸುತ್ತಿತ್ತು. ಅಲ್ಲಿಯೇ ಬದಿಯ ಕೊಂಬೆಯ ಮೇಲೆ ತಾನೂ ಕುಳಿತು ಎದುರಿನ ಪರ್ವತ ಶಿಖರವನ್ನು ನೋಡಿ ಹಿಗ್ಗಿದ. ಇಂತಹ ಕಟ್ಟೇಕಾಂತದಲ್ಲಿ ಮಹಾರಾಜರ ಬೆಂಗಾವಲಿಗನಾಗಿ ಅವರಿಗೆ ಸೇವೆ ಸಲ್ಲಿಸುವ ಸೌಭಾಗ್ಯವು ತನಗೆ ದೊರೆತ ಬಗೆಗೆ ಧನ್ಯತೆಯೆನಿಸಿತು.

ಗಿಡಗಳಲ್ಲಿ ರಾತ್ರಿಹುಳಗಳ ಜರ್ ಎಂಬ ಶಬ್ದ, ಕೊಳ್ಳದಲ್ಲಿ ಭೋರ್ ಎಂಬ ಆರ್ಭಟೆಯ ಸದ್ದು, ಆ ಕಾನನದ ಏಕಾಂತದ ನಿಃಶಬ್ದ ಗಭೀರತೆಯನ್ನು ಆಗಾಗ ಭೇದಿಸುತ್ತಿತ್ತು. ಚಂದ್ರನು ಅಂದಿನ ಹುಣ್ಣಿಮೆಯ ಪೂರ್ಣತೇಜದಿಂದ ಮಹಾರಾಜರ ಬೇಟೆಯ ಆಟವನ್ನು ನೋಡಲು ನಡುಬಾನಿಗೆ ಆಗಲೇ ಏರಿದ್ದನು. ದಾದಾನ ಕಣ್ಣು, ಕಿವಿಗಳು ಬೇಟೆಯ ಸುಳುವು ಹಿಡಿಯಲು ತವಕಗೊಂಡಿದ್ದವು. ಏನೊಂದು ಪ್ರಾಣಿಯ ಓಟದ ಶಬ್ದ ಕಿವಿಗೆ ಬೀಳುತ್ತಲೆ ಅವನು ಮಹಾರಾಜರಿಗೆ ಸನ್ನೆ ಮಾಡುತ್ತಿದ್ದನು. ಬೆಳದಿಂಗಳಲ್ಲಿ ಕಾಡಹಂದಿಗಳ ಹಿಂಡು ಓಡಿ ಆಚೆಗೆ ಹೋಗುವದನ್ನು ನೋಡಿ ಹುಲಿಗಾಗಿ ಹೊಂಚು ಹಾಕಿದ ಮಹಾರಾಜರು ಹಂದಿ ಗಳಿಗೆ ಜೀವದಾನ ಮಾಡಿದರು.

ಒಮ್ಮಿಂದೊಮ್ಮೆ ಹುಲಿಯ ಗುಡುಗಿನಿಂದ ಆ ಅರಣ್ಯದ ನೀರವತೆಯ ಭಂಗ ವಾಯಿತು. ಆ ಗರ್ಜನೆ ಕೇಳಿದ ದಿಕ್ಕಿನತ್ತ ದಾದಾ ಮತ್ತು ಮಹಾರಾಜರ ಕಣ್ಣು ಗಳು ಗಕ್ಕನೆ ಹೊರಳಿದವು. ಪೊದೆಯೊಳಗೆ ಕೆಂಡದಂತೆ ಪ್ರಜ್ವಲಿಸುವ ಎರಡು ಕಣ್ಣುಗಳನ್ನು ನೋಡಿದಾಗ ಮಹಾರಾಜರ ಬಂದೂಕು ಆ ನಿಟ್ಟಿಗೆ ನೇರವಾಗಿ ತಿರು ಗಿತ್ತು. ಮಹಾರಾಜರು ಬೇಟೆಗೆ ಅಣಿಯಾಗಿದ್ದರು. ತಾನೂ ಒಂದು ಕೋವಿ ತರಲಿಲ್ಲವಲ್ಲ ಎಂದು ದಾದಾನಿಗೆ ವಿಷಾದವಾಯಿತು. ಪೊದೆಯಿಂದ ಟಣ್ಣನೆ ಕಾಲು ದಾರಿಗೆ ಹಾರಿ ಬಂದು, ಅತ್ತಿತ್ತ ಗಂಭೀರವಾಗಿ ನೋಡಿ, ಹುಲಿಯು ಮತ್ತೊಂದೆಡೆಗೆ ನೆಗೆಯುವದರಲ್ಲಿತ್ತು. ಅಷ್ಟರಲ್ಲಿ ಢಂ ಢಂ, ಎಂಬ ಸದ್ದಾಯಿತು. ಗುಂಡಿನ ಆ ಸಪ್ಪಳಕ್ಕೆ ದಾದಾನ ಕಣ್ಣು ಮುಚ್ಚಿದವು. ಎದುರಿನ ಶಿಖರದಿಂದ ಮಾರ್ದನಿ ಕೇಳ ಬಂತು. ದಾದಾನಲ್ಲಿ ಆವೇಶವು ಉಕ್ಕಿಬಂತು. ಮಹಾರಾಜರು ಹುಲಿ ಹೊಡೆ

ದರು! ಎಂಬ ಹಿಗ್ಗು ದಾದಾನಿಗೆ. ಸ್ವಪ್ರಯತ್ನದಿಂದಲೇ ಹುಲಿ ಹೊಡೆಯಬೇಕೆಂಬ ಇಚ್ಛೆ ಪೂರೈಸಿತೆಂಬ ಹರ್ಷಾತಿರೇಕ ಮಹಾರಾಜರಿಗೆ! ಅಷ್ಟರಲ್ಲಿ ಹೃದಯ ವನ್ನು ಭೇದಿಸುವ ಮತ್ತೊಂದು ಗುಡುಗು ಕೇಳಿ ದಾದಾನಿಗೆ ನಿಜಸ್ಥಿತಿಯ ಅರಿವು ಆಯಿತು. ಗುರಿ ತಪ್ಪಿತ್ತು. ಗುಂಡು ಬಂದ ನಿಟ್ಟಿನಲ್ಲಿಯೇ ಹುಲಿಯು ಒಂದೇ ಹಾರಿಕೆಯಲ್ಲಿ ಜಿಗಿದುಬಂದು ಮಹಾರಾಜರು ಕುಳಿತ ಗಿಡದ ಬುಡದಲ್ಲಿ ನಿಂತಿತು. ಆರ್ಭಟಿಸುತ್ತ ಗಿಡದ ಮೇಲೆ ಕುಳಿತವರ ನೆತ್ತರ ಹೀರುವ ಹವಣಿಕೆ ಹಾಕಿತು.

ಇಷ್ಟರಲ್ಲಿ ಹುಲಿಯ ಗುಡುಗಿಗೆ ಗಿಡದ ಮೇಲೆ ಕುಳಿತ ಮಂಗವೊಂದು ದೊಪ್ಪನೆ ನೆಲಕ್ಕೆ ಬಿದ್ದಿತು. ಹುಲಿಯು ಅತ್ತ ನೋಡಲಿಲ್ಲ. ಮಹಾರಾಜರು ಮಂಚಿ ಕೆಯಲ್ಲಿ ಚಳಿ ಬಂದವರಂತೆ ಥರಥರ ನಡುಗುತಿದ್ದುದನ್ನು ದಾದಾನು ಕಂಡನು. 'ಮಹಾರಾಜ, ಮತ್ತೊಂದು ಗುಂಡು ಹಾರಿಸಿರಿ' ಎಂದು ದಾದಾ ಕಾತರದಿಂದ ಅರಚಿಕೊಂಡನು. ತತ್ತರಿಸುವ ಕೈಗಳಿಂದ ಮಹಾರಾಜರು ಗುರಿಹೊಡೆಯಲು ಹೆಣಗುತ್ತಿದ್ದರು. ಬೆಮರು ಸುರಿಯುತ್ತಿತ್ತು. ಆಕಾಶವು ಬಿರಿಯುವಂತೆ ಆರ್ಭಟಿ ಸುವ ಹುಲಿಯ ಮತ್ತೊಂದು ಗರ್ಜನೆ! ಆ ಗರ್ಜನೆಗೆ ಅಳ್ಳೆದೆಯವರು ಗಿಡದಿಂದ ಉರುಳಿ ಬೀಳುವಂಥ ಸನ್ನಿವೇಶ. ಇಂಥ ಸಮಯದಲ್ಲಿ ಮಹಾರಾಜರು ಎರಡೂ ಕೈಗಳಿಂದ ತಮ್ಮ ತಲೆಯ ಮೇಲಿನ ಕೊಂಬೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಮಂಚಿಕೆಯಲ್ಲಿ ಅಂತೂ ಇಂತೂ ಉಳಿದರು. ಅವರಿಗೆ ತಮ್ಮ ಕೈಫಲಿನ ಅರಿವು ಇರಲಿಲ್ಲ. ತತ್ತರಿಸುವ ಕೈಗಳಿಂದ ಅದು ಆಗಲೇ ಕೆಳಗೆ ಬಿದ್ದುಹೋಗಿತ್ತು! ಹುಲಿಯ ಬೇಟೆಯೆಂದರೆ ಹಿರಿ ಹಿರಿ ಹಿಗ್ಗುವ ಮಹಾರಾಜರು ಆಗ ಪೂರಾ ಹೌಹಾರಿ ದವರಾಗಿದ್ದರು. ಬಾಯಿಂದ ಶಬ್ದಗಳೇ ಹೊರಡುವ ಸ್ಥಿತಿಯಲ್ಲಿರಲಿಲ್ಲ. ಆದರೆ ದಾದಾ ಮಾತ್ರ ಗಾಬರಿಯಾಗಲಿಲ್ಲ. ಕೆಚ್ಚೆದೆಯ ಬಂಟ. ಆತನಿಗೆ ಸಾವಿನ ಹೆದರಿಕೆ ಯಿದ್ದಿಲ್ಲ. "ಮಹಾರಾಜರ ಉಪ್ಪುಂಡು ಬೆಳೆದ ದೇಹ ತನ್ನದು. ಅವರ ಸೇವೆಯಲ್ಲಿ ಮಡಿದರೆ ಅದರಲ್ಲಿ ಧನ್ಯತೆಯೆ ಇದೆಯೆಂದು ಆತನ ದೃಢವಿಶ್ವಾಸ. ಅವರನ್ನು ಈ ಸಂಕಟದೊಳಗಿಂದ ಪಾರುಮಾಡುವುದು ತನ್ನ ಕರ್ತವ್ಯ. ನಿಜವಾಗಿ ಅವರು ಭಯ ಭೀತರಾಗಿರುವರು. ಸಾಹಸ ಮಾಡಿ ಅವರಲ್ಲಿ ಸೇರಿದ ಈ ಭೀತಿಯನ್ನು ಓಡಿಸಲೇ ಬೇಕು. ಮಹಾರಾಜರನ್ನು ಈ ಕುತ್ತಿನಿಂದ ಪಾರು ಮಾಡಲೇಬೇಕು" ಎಂಬ ವಿಚಾರಗಳು ಅವನಲ್ಲಿ ಮಿಂಚಿಹೋದವು. ಆರ್ಭಟಿಸಿ ಮೇಲಕ್ಕೆ ನೆಗೆಯುತ್ತಿದ್ದ ಹುಲಿಯ ಕಡೆಗೆ ದಾದಾನು ಹೊರಳಿದ್ದನು. "ಮಹಾರಾಜ! ಈ ಸೇವಕನ ರಕ್ತ ದಿಂದ ಹುಲಿರಾಯನನ್ನು ತಣಿಸುವೆ, ನೀವು ಅಪ್ಪಣೆ ಕೊಡಿರಿ. ಹುಲಿಯು ಹೋದರೂ ಬೆಳಕು ಹರಿಯುವ ವರೆಗೆ ಮಂಚಿಕೆಯಿಂದ ಕೆಳಗೆ ಇಳಿಯಬೇಡಿರಿ. ಧೈರ್ಯ ವಿರಲಿ" ಎಂದು ಹೇಳಹೇಳುತ್ತ ಸರ್ರನೆ ಜರಿದು ಮುಂದೆ ಸರಿದನು. ಆರ್ಭಟಿಸುವ ಹುಲಿಯು ಸಪ್ಪಳದತ್ತ ನೋಡುವಷ್ಟರಲ್ಲಿ ದಾದಾ ಹುಲಿಯ ಹಿಂಭಾಗದಲ್ಲಿ ಜಿಗಿದು, ಹಿಂದಿನಿಂದ ಹುಲಿಗೆ ಡಿಕ್ಕಿ ಹೊಡೆದಿದ್ದ. ಅದರ ಮುಂದಿನ ಎರಡೂ ಕಾಲುಗಳನ್ನು ತನ್ನ ಎರಡೂ ಕೈಗಳಿಂದ ಹಿಡಿದು, ಹಿಂಗಾಲ ಮೇಲೆ ಎದ್ದು ನಿಂತ ಹುಲಿಯ ಕಾಲಿಗೆ

ತನ್ನ ಎಡಗಾಲಿನಿಂದ ಒದ್ದು ಅದನ್ನು ನೆಲಕ್ಕೆ ಕೆಡವಿ, ಕುಸ್ತಿಯಲ್ಲಿ ಅಸಮುಬಲ ಗಡಿಯನ್ನು ಸವಾರಿ ಹಾಕಿ ಕುಳ್ಳಿರುವ ರೀವಿಯಲ್ಲಿ ಅದರೊಡನೆ ಕಾದಾಟ ನಡೆಸಿದ್ದ. ಹುಲಿಯ ದೈಹಿಕ ಶಕ್ತಿ, ದಾದಾನ ಶಕ್ತಿಯುಕ್ತಿಗಳ ಮುಂದೆ ಅಲ್ಪವೆನಿಸಿತು. ಹುಲಿಯು ಗುಡುಗೇ ಗುಡುಗಿತು. ನುಸುಳಿ ಪಾರಾಗಲು ಧಡಪಡಿಸಿತು. ಇದನ್ನು ನೋಡಿ ಮಹಾರಾಜರು ಚೇತರಿಸಿಕೊಂಡರು. ಕ್ಷಣಕಾಲವಾದರೂ ತಮ್ಮನ್ನು ಆವರಿಸಿದ್ದ ಭೀತಿಯ ನೆನಪಾಗಿ, ಆ ಸ್ಥಿತಿಯ ಬಗೆಗೆ ತಮ್ಮ ಪುಕ್ಕ ಜೀವವನ್ನು ಹಳಿದು, ತುಳಿದು, ಮೆಟ್ಟಿ, ನಿಂತವರಂತೆ, ಎದೆಗಾರಿಕೆಯಿಂದ ದಾದಾನಿಗೆ ಧೈರ್ಯ ಹೇಳಿದರು. 'ದಾದಾ!' ಎಂದು ಕೂಗಿದವರೇ ಬಿದ್ದ ಬಂದೂಕನ್ನು ಎತ್ತಿಕೊಳ್ಳಲು ಕೆಳಕ್ಕೆ ಹಾರಿದರು. ಅವರ ಮನಸ್ಸಿನಲ್ಲಿ ವಿಚಾರ ಚಕ್ರವು ಗರ್‍ರನೆ ತಿರುಗುತ್ತಿತ್ತು. ಪ್ರಾಣವನ್ನೇ ಪಣಕ್ಕೆ ಹಚ್ಚಿದ ಇಂಥ ವೀರನನ್ನು ಉಳಿಸಿಕೊಳ್ಳಲು ಪ್ರಯತ್ನಿಸದೆ ಜೀವಗಳ್ಳನಂತೆ ಅಲ್ಲಿಯೆ ಅವಿತುಕೊಂಡಿರಲು ಅವರ ಪೌರುಷವು ವಿರೋಧಿಸಿತು. ಸಾವು ಯಾರಿಗೆ ತಪ್ಪಿದೆ ? ನನ್ನ ಕರ್ತವ್ಯವನ್ನು ಜರುಗಿಸುವಲ್ಲಿ ಸಾವು ಬಂದರೆ ಅದು ಪುಣ್ಯವಂತಿಕೆಯ ಲಕ್ಷಣ. ಹೇಡಿಯಾಗಲಾರೆ. ಹೇಡಿಯನ್ನು ಹಡೆದ ಕಲಂಕವನ್ನು ನನ್ನ ತಾಯಿಗೆ ತಟ್ಟಗೊಡಲಾರೆ. ನನಗಾಗಿ ದಾದಾ ಹುಲಿಯ ಬಾಯಿಗೆ ಬಿದ್ದನೆಂಬ ಸಂಗತಿಯು ಮಹಾರಾಣಿಯ ಕಿವಿಗೆ ಬಿದ್ದರೆ ಕ್ಷತ್ರಿಯ ಕನ್ಯೆಯಾದ ಅವಳು ಏನೆಂದುಕೊಂಡಾಳು ? ಎಂಬ ವಿಚಾರ ಲಹರಿಯು ಹಾಯ್ದುಹೋಗುವಷ್ಟರಲ್ಲಿ ಅವರ ಬಾಯಿಂದ "ದಾದಾ ಬಂದೆ! ಒಂದೇ ನಿಮಿಷ ತಡೆ!" ಎಂಬ ಉದ್ಗಾರಗಳು ಹೊರಬಿದ್ದುವು.

ಹೆಬ್ಬುಲಿಯನ್ನು ಹತ್ತಿಕ್ಕಿ ಹಿಡಿದು ದಾದಾನ ಕೈಗಳು ಸೋತಿದ್ದವು. ಮಹಾರಾಜರು ತನ್ನ ರಕ್ಷಣೆಗಾಗಿ ಕೆಳಗೆ ಹಾರಿ ಬಂದುದನ್ನು ಕಂಡು, 'ತಮ್ಮ ಪ್ರಾಣವನ್ನೇ ಸಂಕಟದಲ್ಲಿ ನೂಕಿ, ಮಹಾರಾಜರು ಗಿಡದಿಂದ ಇಳಿದುಬಂದರಲ್ಲ ! ಎಂದು ಅವನಲ್ಲಿ ಹರ್ಷಾತಿರೇಕವಾಗಿ ಹೊಸ ಚೈತನ್ಯ ರೋಮ ರೋಮಗಳಲ್ಲಿ ಸಂಚರಿಸಿತು.

ಬಂದೂಕು ಬಿದ್ದ ಸ್ಥಳವು ಸುದೈವದಿಂದ ಹುಲಿಯ ಹಿಂಬದಿಗೆ ಇತ್ತು. ಮಹಾರಾಜರು ಒಮ್ಮೆಲೆ ಬಂದೂಕು ಎತ್ತಿದರು. ಗುಂಡು ಹಾಕಿದರೆ ಹುಲಿಯ ಬದಲು ದಾದಾನಿಗೇ ತಾಗುವ ಸಂಭವವಿತ್ತು. ದಾದಾನು ಆ ಹುಲಿಯನ್ನು ತಬ್ಬಿಕೊಂಡಿರುವಲ್ಲಿ ತನ್ನ ಶಕ್ತಿಸರ್ವಸ್ವವನ್ನೆಲ್ಲ ಕೇಂದ್ರೀಕರಿಸಿದ್ದನು. ಯೋಚಿಸುತ್ತ ನಿಂತರೆ, ದಾದಾನ ಶಕ್ತಿ ಬೇಗ ಕುಗ್ಗುವದೆಂಬ ಮನವರಿಕೆಯಾಯ್ತು. ಮಹಾರಾಜರು ಹುಲಿಯ ಮಗ್ಗುಲಲ್ಲಿ ಬಂದು ನಿಂತು ನೋಡಿದರು. ಹುಲಿಯ ದೇಹದ ಮೇಲೆ ದಾದಾನ ದೇಹ ಬಿದ್ದಿರುವಾಗ ಹುಲಿಯ ತಲೆಯೊಂದೇ ಗುಂಡು ಹಾಕಲು ಉಳಿದಿದಿರುವ ಭಾಗವೆಂದು ಹೊಳೆಯಿತು. ರಾಯಫಲ್ಲಿನ ಬಾಯಿಯನ್ನು ಹುಲಿಯ ಕಿವಿಯ ಹತ್ತಿರ ಹಿಡಿದರು. ರಾಯಫಲ್ಲು ಅದಕ್ಕೆ ಸೋಂಕಿ ಹುಲಿಯು ಒಮ್ಮೆಲೆ ಏಳುವ ಪ್ರಯತ್ನ ಮಾಡಿತು. ದಾದಾನ ತೋಳ ತೆಕ್ಕೆಯೊಳಗಿಂದ ನುಸುಳಿಕೊಂಡರೆ ಏನು ಗತಿ ? ಎಂಬ ಸಂದೇಹವೂ ಬಾರದಿರಲಿಲ್ಲ. ದಾದಾನ ಕಡೆಗೆ ನೋಡಿದಾಗ

ಆತನು ತಲೆಯಿಂದ ಸನ್ನೆಮಾಡಿ 'ಬೇಗ ಮುಗಿಸಿ ಬಿಡಿರಿ' ಎಂದು ಸೂಚಿಸಿದ. 'ಆದದ್ದಾಗಲಿ ಗುಂಡು ಹಾರಿಸುವೆ' ಎಂದು ಮಹಾರಾಜರು ಹುಲಿಯ ಕಿವಿಗೆ ಇಟ್ಟ ಗುರಿಯನ್ನು ಸರಿಯಾಗಿ ನೋಡಿ ರಾಯಫಲ ಕುದುರೆಯನ್ನು ಒತ್ತಿದರು. ಗುಂಡು ಢಂ, ಅಂದದ್ದೇ ತಡ ! ಹುಲಿಯು ಪುಟಿಚೆಂಡಿನಂತೆ ನೆಗೆದು ಹಾರಿ ಕೆಲ ಅಂತರದ ಮೇಲೆ ಬಿದ್ದಿತು. ನೆಗೆಯುವಾಗ ಅದು ಮಾಡಿದ ಗರ್ಜನೆಯು ದೂರದಲ್ಲಿದ್ದ ಡಾಕ ಬಂಗಲೆಗೂ ಕೇಳಿಸುವಷ್ಟು ತೀವ್ರವಾಗಿತ್ತು.

ಹುಲಿಯ ನೆಗೆತದೊಡನೆ ಅದಕ್ಕೆ ಸವಾರಿ ಹಾಕಿದ್ದ ದಾದಾನೂ ಅದರೊಡನೆ ಹಾರಿ ಹೋಗಿದ್ದನು. ಹುಲಿ ದೊಪ್ಪನೆ ಬಿದ್ದಾಗ ದಾದಾನಿಗೆ ತಗಲಿದ ಪೆಟ್ಟಿನಿಂದ ಅವನು ಮೂರ್ಛಿತನಾದನು. ದಾದಾ ಮಿಸುಕಾಡದ್ದು ಕಂಡು ಹುಲಿಯೊಡನೆ ಅವನದೂ ಕೊನೆಯಾಗಿರಬೇಕೆಂದು ತೋರಿತು. ದಾದಾ ! ದಾದಾ ! ಎಂದು ಮಹಾರಾಜರು ಎಳೆಮಕ್ಕಳಂತೆ ಅಳುತ್ತ ಹುಲಿ ಬಿದ್ದ ಸ್ಥಳಕ್ಕೆ ಧಾವಿಸಿದರು. ದಾದಾ ಮಾತ್ರ ಉಬ್ಬಸಪಡುತ್ತಿದ್ದ. ಆಗ ದಾದಾನು ಅರಿವು ಇಲ್ಲದೆ ಬಿದ್ದುಕೊಂಡಿದ್ದರಿಂದ ಮಹಾರಾಜರು ಆ ಹೆಬ್ಬುಲಿಯನ್ನು ಹೊಡೆದ ಆನಂದವನ್ನು ಅನುಭವಿಸುವ ಸ್ಥಿತಿಯಲ್ಲಿರಲಿಲ್ಲ. ದಾದಾನ ಸ್ಥಿತಿ ನೋಡಿ ಆನಂದದ ಬದಲು ದುಃಖವು ಆವರಿಸಿತು. ಅಲ್ಲದೆ ಆ ಕಾಡಿನಲ್ಲಿರುವ ಹುಲಿಯ ಜಾತಿಯೇ ತನ್ನ ನೆರವಿಗೆ ಒರುವಂತೆ ಸಾಯುವಾಗ ಅದು ಆರ್ತಸ್ವರದಲ್ಲಿ ಅರಚಿಕೊಂಡಿತ್ತು. ಮಹಾರಾಜರು ಅಸ್ವಸ್ಥ ಮನಸ್ಸಿನಿಂದ ದಾದಾನನ್ನು ನಿರೀಕ್ಷಿಸುತ್ತಿರುವಾಗಲೆ ದೂರದಲ್ಲಿ ಮತ್ತೊಂದು ಭೀಕರ ಗುಡುಗಿನ ಗರ್ಜನೆ ಕೇಳಬಂತು. ಕಾಡತೂಸು ಸೇರಿಸಿ ನಿಲ್ಲುವಷ್ಟರಲ್ಲಿ ಹುಲಿರಾಯನೊಂದು ಆರ್ಭಟಿಸುತ್ತ ಮಹಾರಾಜರ ಕಡೆಗೇ ಬರುತ್ತಿತ್ತು. ಈ ಸಲ ಮಹಾರಾಜರಿಗೆ ಹೆದರಿಕೆ ಬರಲಿಲ್ಲ. ಹುಲಿಯ ಸೇಡಿನ ಆವೇಶದಿಂದ ಸ್ನಾಯುಗಳು ಉಬ್ಬಿದುವು. ದಾದಾನನ್ನು ಒದುಕಿಸುವದಕ್ಕಾಗಿ ಮಾಡಿದ ತನ್ನ ಪ್ರಯತ್ನವನ್ನು ವ್ಯರ್ಥಮಾಡ ಬಂದ ಆ ಹುಲಿಯನ್ನು ನೆಗಚಿಯೇ ಬಿಡಬೇಕೆಂದು ನಿರ್ಧರಿಸಿದರು. ಇದುವೇ ತನ್ನ ಸತ್ತ್ವದ ಪರೀಕ್ಷೆಯ ಕಾಲ, ಎಂದವರೇ ದೂರದಲ್ಲಿ ಎದುರಿಗೆ ಹೊಳೆಯುವ ಎರಡು ಕಣ್ಣುಗಳ ನಡುವೆ ಗುರಿಯಿಟ್ಟು ಮಹಾರಾಜರು ಗುಂಡು ಹಾರಿಸಿದರು. ಆ ಗುಂಡು ಸುಂಯ್‌ಗುಡುತ್ತ ನೇರವಾಗಿ ಹುಲಿಗೆ ತಾಗಿತು. ಅದು ಗರ್ಜನೆಯೊಂದಿಗೆ ಜಿಗಿದು ಮೊದಲು ಹುಲಿಗೆ ದಾದಾ ಸವಾರಿ ಹಾಕಿ ಕುಳಿತ ಸ್ಥಳದಲ್ಲಿ ಬಂದು ಬಿದ್ದು ಪ್ರಾಣಬಿಟ್ಟಿತು !

ಈ ಗರ್ಜನೆಗೆ ದಾದಾನ ಮೂರ್ಛೆ ಹಾರಿತು. ಕಣ್ದೆರೆದುವು. ನೋಡುತ್ತಾನೆ! ಮಹಾರಾಜರು ಬೇಟೆಮಾಡಿದ ವನರಾಜನ ಬಳಿಯಲ್ಲಿ ನಿಂತಿದ್ದರು. ಇಬ್ಬರೂ ಒಬ್ಬರನ್ನೊಬ್ಬರು ನೋಡಿದರು. ಇಬ್ಬರ ಮುಖ ಮತ್ತು ನೋಟದಲ್ಲಿ ಕೃತಜ್ಞತಾ ಭಾವವು ಉಕ್ಕುತ್ತಿತ್ತು. ಯಾರ ಕೃತಜ್ಞತಾ ಭಾವವು ಹೆಚ್ಚು ಎಂಬುದನ್ನು ಆ ನೋಟದಿಂದ ತಿಳಿಯುವದು ಅಶಕ್ಯವಾಗಿತ್ತು !

—ಆರ್. ಬಿ. ಕುಲಕರ್ಣಿ.

## ಅಭ್ಯಸನಗಳು

ಪ್ರಶ್ನೆಗಳು:—

(೧) ದಾದಾನು ಮಹಾರಾಜರ ಪ್ರೀತಿಗೆ ಹೇಗೆ ಪಾತ್ರನಾದನು ?
(೨) ಮಹಾರಾಜರು ಸ್ವತಃ ಬೇಟೆಗೆ ಹೊರಟಾಗ ಮಹಾರಾಜರ ಮತ್ತು ಅವರ ಪರಿವಾರದವರ ಮನಸ್ಸಿನಲ್ಲಿಯ ವಿಚಾರಗಳೇನಿದ್ದವು ?
(೩) ದಾದಾನು ತನ್ನ ಜೀವನವನ್ನು ಗಂಡಾಂತರದಲ್ಲಿ ಏಕೆ ನೂಕಿದನು ?
(೪) ಹುಲಿಯ ಆಟವು ದಾದಾನ ಮುಂದೆ ನಡೆಯಲಿಲ್ಲವೇಕೆ ?
(೫) ಮಹಾರಾಜರು ತಮ್ಮ ಭೀತಿಯನ್ನು ಕಳೆದುಕೊಂಡ ಬಗೆ ಯಾವುದು ?
(೬) ಮಹಾರಾಜರ ಕೃಪೆಯಲ್ಲಿ ಬೆಳೆದ ದಾದಾನಿಗೆ ಅವರು ಕೃತಜ್ಞರಾಗಲು ಕಾರಣವೇನು ?

ಭಾಷಾಭ್ಯಾಸ:—

(೧) ವಿವಿಧ ವರ್ಣನೆಗಳಿಂದ ಕತೆಯು ಹೇಗೆ ರಸವತ್ತಾಗಿದೆ ಎಂಬುದನ್ನು ಇಲ್ಲಿ ನಿರೀಕ್ಷಿಸಬೇಕು.
ಈ ಪಾಠದಲ್ಲಿ ಬಂದ ವರ್ಣನಪರ ವಾಕ್ಯವೃಂದಗಳನ್ನು ಗುರುತಿಸಿರಿ. ಇಂತಹ ವಾಕ್ಯವೃಂದಗಳಲ್ಲಿ ನೀವು ಯಾವುದನ್ನು ಹೆಚ್ಚು ಮೆಚ್ಚುವಿರಿ ಎಂಬುದನ್ನು ಸಕಾರಣವಾಗಿ ಹೇಳಿರಿ.
(೨) ಸ್ವರ :— ಆರ್ತಸ್ವರ, ಮಧುರಸ್ವರ – ಹೀಗೆ ಯೋಗ್ಯ ವಿಶೇಷಣಗಳಿಂದ ಸ್ವರದ ಬದಲಾವಣೆಯನ್ನು ಹೇಳಿರಿ.
(೩) ದಾದಾನ ರೂಪ ಮತ್ತು ಸ್ವಭಾವ ಇವುಗಳನ್ನು ಬಣ್ಣಿಸುವ ವಾಕ್ಯಗಳನ್ನು ಈ ಪಾಠದಿಂದ ಎತ್ತಿ ಹೇಳಿರಿ.
(೪) [೧] ಜೀವಗಳ್ಳನಂತೆ ಅಲ್ಲಿಯೇ ಅವಿತುಕೊಂಡಿರಲು ಅವರ ಪೌರುಷವು ವಿರೋಧಿಸಿತು.
[೨] ಹೇಡಿಯನ್ನು ಹಡೆದ ಕಲಂಕವು ನನ್ನ ತಾಯಿಗೆ ತಟ್ಟಿಗೊಡಲಾರೆ.
[೩] ಯಾರ ಕೃತಜ್ಞತಾಭಾವವು ಹೆಚ್ಚು ಎಂಬುದನ್ನು ಆ ನೋಟದಿಂದ ತಿಳಿಯುವದು ಅಶಕ್ಯವಾಗಿತ್ತು.
ಈ ವಾಕ್ಯಗಳಲ್ಲಿಯ ವಿಚಾರವನ್ನು ಸ್ಪಷ್ಟವಾಗುವಂತೆ ಬರೆಯಿರಿ.
[೪] 'ಅವನಲ್ಲಿ ನನ್ನ ವಿಶ್ವಾಸವು ಹಾರಿತು' 'ಅವನಲ್ಲಿ ನನ್ನ ವಿಶ್ವಾಸವು ಹೋಯಿತು' ಇವೆರಡರಲ್ಲಿಯ ವ್ಯತ್ಯಾಸವನ್ನು ಹೇಳಿರಿ.

ಶಬ್ದವಿಚಾರ :—

(೧) ಮಣ್ಣುಮುಕ್ಕಿಸು, ಆಟಸಾಗು, ನೀರಿಳಿ, ತಲೆತಗ್ಗಿಸು, ಉಪ್ಪುಣ್ಣು — ಇವುಗಳನ್ನು ಉಪಯೋಗಿಸಿ ಒಂದೊಂದು ವಾಕ್ಯವನ್ನು ಬರೆಯಿರಿ.
(೨) ಬೆಂಗಾವಲು, ಜನ್ಮಸಾಫಲ್ಯ, ಪ್ರಾಣವನ್ನೇ ಪಣಕ್ಕೆ ಹಚ್ಚು, ಕುಸ್ತಿಗಡಿ — ಇವುಗಳ ಅರ್ಥವನ್ನು ಹೇಳಿರಿ.
(೩) ಕೂಗು — ಅರಚು — ಚೀರು; ಸನ್ನೆ — ಸೊನ್ನೆ; ಹೊಡೆ — ತೆನೆ; ಕಾವು — ಕಾಯು – ಇವುಗಳಲ್ಲಿಯ ಅರ್ಥಭೇದವನ್ನು ಹೇಳಿರಿ.

**ವಾಕ್ಶಿಕ್ಷಣ:—**

(೧) ಕೆಳಗಿನ ವಾಕ್ಯವೃಂದದಲ್ಲಿಯ ತಪ್ಪು ತಿದ್ದಿ ಬರೆಯಿರಿ.
ಹುಲಿಯನ್ನು ಆಕರ್ಷಿಸುವ ವುದ್ದೇಸದಿಂದ ಮೇಕೆಯನ್ನು ಕಟ್ಟಿ ಯೆರಡು ದಿನಗಳಾದರೂ ಯಿನ್ನೂ ವಂದು ಹುಲಿಯನ್ನು ಮಂಚಿಕೆಯ ಬಳಿ ಬರುವಂತೆ ಮಾಡಲಾಗಲಿಲ್ಲ. ಯಿದರಿಂದ ಮಹಾರಾಜರಲ್ಲಿ ನಿರಾಸೆಯು ಕಾತರ ಭಾವವು ಹೆಚ್ಚಿತು.

(೨) ಪಂಜಾಬಿ ಮಲ್ಲ ಮತ್ತು ದಾದಾ ಇವರಿಬ್ಬರಲ್ಲಿ ಆದ ಆವೇಶಯುಕ್ತ ಸಂಭಾಷಣೆಯನ್ನು ಊಹಿಸಿ ಬರೆದು ಅಭಿನಯಿಸಿರಿ.

**ಚರ್ಚೆ:—**

' ಬೇಟೆಯು ಅಹಿಂಸೆಯ ತತ್ತ್ವಕ್ಕೆ ವಿರೋಧವಿದೆ.'

**ಬರೆಹ:—**

(೧) ನಿಮ್ಮ ಶಾಲೆಯಲ್ಲಿ ಜರುಗಿದ ಕುಸ್ತಿಯ ಪಂದ್ಯಾಟದಲ್ಲಿಯ ಒಂದು ಕುಸ್ತಿಯನ್ನು ಬಣ್ಣಿಸಿರಿ.

(೨) ನಾಯಿಯು ಏರಿಬಂದಾಗ ಅದನ್ನು ಎದುರಿಸಿದ ಪ್ರಸಂಗವನ್ನು ಬಣ್ಣಿಸಿರಿ.

(೩) ಒಬ್ಬರನ್ನೊಬ್ಬರು ನೋಡುವ ಕೃತಜ್ಞತಾಭಾವದ ಚಿತ್ರಹನ್ನು ತೆಗೆಯಿರಿ.

# ೧೬. ಗೌರಜ್ಜಿ.

[ ಸುಮಾರು ಎರಡು ತಲೆಮಾರಿನ ಹಿಂದೆ ಇದ್ದ ನಮ್ಮ ನಾಡಿನ ಕುಟುಂಬಗಳ ಸಾಮಾನ್ಯ ಕಲ್ಪನೆಯು ಈ ಪಾಠದಿಂದ ಬರಬಹುದಾಗಿದೆ. ಬಾಲ್ಯದಲ್ಲಿ ವೈಧವ್ಯ ಬಂದ ಗೌರಜ್ಜಿಯ ನೆಪಮಾಡಿ ಅಂದಿನ ಗೃಹಸ್ಥಿತಿಯ ಶಬ್ದಚಿತ್ರವನ್ನು ಇಲ್ಲಿ ಬರೆದಿದ್ದಾರೆ. ಒಂದೊಂದು ಸಂಗತಿಯನ್ನು ಹೇಳುವ ಇಲ್ಲಿಯ ರೀತಿ ಮನನೀಯವಾಗಿದೆ.

ಶ್ರೀ. ಎ.ಎನ್.ಮೂರ್ತಿರಾಯರು ಬರೆದ 'ಹಗಲುಗನಸುಗಳು' ಎಂಬ ಸಂಗ್ರಹದಿಂದ ಈ ಭಾಗವನ್ನು ಆಯ್ದುಕೊಳ್ಳಲಾಗಿದೆ.]

ಗೌರಜ್ಜಿ ನಮ್ಮ ತಂದೆಯ ದೊಡ್ಡಮ್ಮ. ಅವರ ಯೌವನದಲ್ಲಿ ನಾವು ಆಕೆಯನ್ನು ಕಾಣೆವು. ನಮಗೆ ಸ್ವಲ್ಪ ಬುದ್ಧಿ ತಿಳಿಯುವ ವೇಳೆಗೆ ಅವರಿಗೆ ಸುಮಾರು ಅರವತ್ತೈದು ವರ್ಷವಿರಬಹುದು. ನಮ್ಮ ಸರಸು ಒಂದು ದಿನ ಅವರನ್ನು "ಅಜ್ಜಿ, ನೀನೂ ಚಿಕ್ಕವಳಾಗಿದ್ದಿಯಾ ?" ಎಂದು ಕೇಳಿದಳು. ಪಾಪ, ಜರೆಯಿಂದ ಕುಗ್ಗಿ ಉಪವಾಸಾದಿ ವ್ರತಗಳಿಂದ ಕೃಶವಾದ ಆ ದೇಹದಲ್ಲಿ ಹಿಂದೆ ಎಳೆತನದ ಲವಲವಿಕೆಯೂ ಯೌವನದ ಕಾಂತಿಯೂ ಇದ್ದುವೆಂದು ಮೂರು ವರ್ಷದ ಹುಡಿಗಿಗೆ ಹೇಗೆ ತಿಳಿಯಬೇಕು ? ಗೌರಜ್ಜಿ ಚಿಕ್ಕವರಾಗಿದ್ದಾಗ ಬಲು ಚೆಲುವೆಯಂತೆ. "ಹಳ್ಳಿಯ ಹೆಣ್ಣುಮಗಳಾದರೂ ಕೈತೊಳೆದುಕೊಂಡು ಮುಟ್ಟುವಹಾಗಿದ್ದರು; ತಲೆಯ ಕೂದಲಂತೂ ಮೊಣಕಾಲಿನ ವರೆಗೂ ಬರುತ್ತಿತ್ತಂತೆ" ಎಂದು ನಮ್ಮ ತಾಯಿ ಒಂದೊಂದು

ದಿನ ಹೇಳುವುದುಂಟು. ಅವರ ತಂದೆಯ ಮನೆಯವರು ಅವರನ್ನು ಪ್ರಾಣಕ್ಕಿಂತಲೂ ಹೆಚ್ಚಾಗಿ ಸಾಕಿ ಒಳ್ಳೆಯ ಮನೆಯನ್ನು ನೋಡಿ ಮದುವೆ ಮಾಡಿಕೊಟ್ಟರು. ಆದರೆ ಗಂಡನೊಡನೆ ಬಹಳ ದಿನ ಸಂಸಾರ ಮಾಡಿಕೊಂಡಿರುವುದು ಆಕೆಯ ಹಣೆಯಲ್ಲಿ ಬರೆದಿರಲಿಲ್ಲ. ಅವರಿಗೆ ಇನ್ನೂ ಹದಿನೆಂಟು ವರ್ಷವಾಗಿರುವಾಗಲೇ ವೈಧವ್ಯ ಪ್ರಾಪ್ತವಾಯಿತು. ಗಂಡನ ಮನೆಯಲ್ಲಿ ಇದ್ದ ಮೂರು ವರ್ಷವೂ ಆಕೆಗೆ ಸುಖವಿಲ್ಲ. ಹಿಂದಿನ ಕಾಲದ ಅತ್ತೆಯರ ಯಜಮಾನಿಕೆಯ ವಿಚಾರ ಕೇಳಬೇಕೆ ? ಅವರ ಮನೆಯಲ್ಲಿ ಎಲ್ಲಾ ವಿಷಯಗಳಲ್ಲೂ ಹಿಂದಿನ ಕಾಲದ ಪದ್ಧತಿ. ಸೊಸೆಯರು ಹಗಲು ಹೊತ್ತು ಸೂರ್ಯನಿಗೆ ಸಹ ಮುಖ ತೋರಿಸುವುದಕ್ಕಿಲ್ಲ. ರಾತ್ರಿಯ ಅನ್ನವೇನಾದರೂ ಮಿಕ್ಕಿದ್ದರೆ ಮಕ್ಕಳನ್ನು— ಆ ಮನೆಯ ಮಕ್ಕಳೆಂದರೆ ಒಂದು ಚಿಕ್ಕ ಪದಾತಿ ಸೈನ್ಯವಾಗಬಹುದು—ಚಿಕ್ಕ ಸೊಸೆಯನ್ನು ತೊಟ್ಟಿಯ ಅಂಚಿನಲ್ಲಿ ಕೂರಿಸಿ ಎಲ್ಲರಿಗೂ ಒಂದೊಂದು ತುತ್ತು ಹಾಕಿಬಿಡುತ್ತಿದ್ದರಂತೆ. ಅದಾದ ಮೇಲೆ ಹಗಲೆಲ್ಲಾ ಗಾಣದ ಎತ್ತಿನಂತೆ ದುಡಿದು ಮಧ್ಯಾಹ್ನ ಹಾಕಿದ ಬರಗೂಳನ್ನು ತಿಂದು ಕಾಲ ಹಾಕಬೇಕು. ಅಪರೂಪವಾಗಿ ಒಂದೊಂದು ವೇಳೆ "ನಮ್ಮ ಗೌರಿಯೇ ವಾಸಿ, ರಥದ ಹಾಗೆ ಕೆಲಸ ಮಾಡುತ್ತಾಳೆ" ಎಂದು ಅತ್ತೆಯವರಿಂದ ಶಹಬಾಸಗಿರಿ ಬರುವುದುಂಟು. ಆದರೆ ಸಾಮಾನ್ಯವಾಗಿ ಅವರ ಅತ್ತೆ ಸಿಡುಕು ಸ್ವಭಾವದವರು. ಸೊಸೆಯರು ದಿನಕ್ಕೊಂದು ಸಲವಾದರೂ ತಮಗೆ ಹೆದರಿ ನಡುಗಿ ಕಣ್ಣೀರು ಬಿಡದಿದ್ದರೆ ತಮ್ಮ ಯಜಮಾನಿಕೆ ಇದ್ದೇನು ಫಲ ಎನ್ನುವಂಥ ಹೆಂಗಸು. ಸೊಸೆ ಕುಳಿತಿದ್ದರೆ "ಕೂತುಬಿಟ್ಟಳು, ಮೊಳೆ ಬಡಿದುಕೊಂಡ ಹಾಗೆ; ಕೆಲಸಕ್ಕೆ ನಾನು ಇದ್ದೀನಲ್ಲ, ಪರಿಚಾರಗಿತ್ತಿ" ಎನ್ನುವರು; ನಿಂತಿದ್ದರೆ "ನಿಂತಳು ಕಂಬ ನಿಂತ ಹಾಗೆ; ದೇವರಿಗೆ ಹರಸಿಕೊಂಡಿದೀಯಾ, ನಿಲ್ಲುವ ಸೇವೆ ಮಾಡುತ್ತೇನೆ ಅಂತ" ಎನ್ನುವರು. ಗೌರಜ್ಜಿ ಆಗಾಗ ನಮಗೆ ಅವರ ಮನೆಯ ಕಥೆಯನ್ನೆಲ್ಲಾ ಹೇಳುವುದುಂಟು. ಅವರ ಮಾವನವರು ಊರಿನಲ್ಲಿ ಬಹಳ ಗಣ್ಯರಾದ ಮನುಷ್ಯರಂತೆ. ಮೆಂಬರು ನರಸಯ್ಯನವರೆಂದರೆ ಆ ತಾಲ್ಲೂಕಿನಲ್ಲೆಲ್ಲಾ ಪ್ರಸಿದ್ಧಿ. ಅಮಲ್ದಾರರು ಊರಿಗೆ ಬಂದರೆ ಅವರನ್ನು ಕರೆಯಿಸಿ ಹತ್ತಿರ ಕೂರಿಸಿಕೊಳ್ಳುತ್ತಿದ್ದರಂತೆ. ಅವರಿಗೆ ಐವತ್ತು ಅರವತ್ತು ಎಕರೆ ತರಿ ಜಮೀನು, ತೋಟ, ಹೊಲ ಎಲ್ಲಾ ಇದ್ದುವು. ಒಂದೊಂದು ಸಲ ಕಬ್ಬು ಹಾಕಿದರೆ ಬಂದವರಿಗೆಲ್ಲಾ ಕಬ್ಬಿನ ಹಾಲು ಕೊಟ್ಟರೂ ವರ್ಷಗಾಲ ಮನೆಗೆ ಬೆಲ್ಲವಾಗುವುದಲ್ಲದೆ, ಉಳಿದ ಬೆಲ್ಲವನ್ನು ಮಾರಿ ಬಳ್ಳಗಳಲ್ಲಿ ರೂಪಾಯಿ ತುಂಬಿ ತೊಲೆಯಮೇಲಿಡುತ್ತಿದ್ದರಂತೆ. ನರಸಯ್ಯನವರ ಮಾತೆಂದರೆ ಊರಿನಲ್ಲಿ ಸಿಂಹಾಜ್ಞೆ; ಅವರ ಅಪ್ಪಣೆಯಿಲ್ಲದೆ ಕಾಲುವೆಯ ಏರಿಯ ಮೇಲೆ ದನ ಬಿಡುವುದು, ಹುಲ್ಲು ಕೊಯ್ಯುವುದು ಅಂದರೇನು ! ಅವರು ಮೆಂಬರಾದ ಮೇಲೆ ಊರಿನ ಎಲ್ಲಾ ಹಕ್ಕೂ ಅವರಿಗೇ ಸೇರಿಹೋಯಿತೆಂದು ಆ ಹಳ್ಳಿಯವರು ಭಾವಿಸಿದರೋ ಏನೋ. ಗೌರಜ್ಜಿಗಂತೂ ಅದೇ ಸ್ಥಿರವಾದ ನಂಬಿಕೆ. ಇದರ ಮೇಲೆ ನರಸಯ್ಯನವರು ಅಮಲ್ದಾರರ ಹತ್ತಿರ ಸದರವಾಗಿ ಮಾತಾಡತಕ್ಕವರು !

ಆ ಗತವೈಭವವನ್ನು ಹೇಳಿಕೊಳ್ಳಲು ಆಕೆಗೆ ಬಲು ಉತ್ಸಾಹ. ನಾವು ದೊಡ್ಡ ವರಾದ ಮೇಲೆ ಆ ಕಥೆಯನ್ನೆಲ್ಲಾ ಕೇಳಿ ಸ್ವಲ್ಪ ಹಾಸ್ಯ ಮಾಡಿದರೆ "ಹೋಗರೋ, ಈಗಿನ ಕಾಲದ ಹುಡುಗರೇ ಹೀಗೆ! ನಮ್ಮ ಕಾಲದಲ್ಲಿ ಹುಡುಗರು ಹೀಗೆಲ್ಲ ಲಲ್ಲೆ ಬಡಿದುಕೊಂಡು ನಗುವುದೆಂದರೇನು? ಸೀಳಿ ತೋರಣ ಕಟ್ಟಿಬಿಡುತ್ತಿದ್ದರು" ಎನ್ನುವರು. ಅವರಿಗೆ ನಮ್ಮ ಮೇಲೆ ಕೋಪವೆಂದಲ್ಲ; ಹಿಂದಿನ ಕಾಲದವರು ಸಂಸಾರವೆಂದರೆ ಎಷ್ಟು ಕಟ್ಟುನಿಟ್ಟಿನಲ್ಲಿ ಇಟ್ಟಿದ್ದರೆಂಬುದನ್ನು ಹೇಳಿಕೊಳ್ಳಬೇಕೆಂದು ಆಸೆ. ಅವರು ಯಾವ ವಿಷಯವಾಗಿ ಮಾತಾಡುತ್ತಿದ್ದರೂ ಹೇಗಾದರೂ ಮಾಡಿ ತಮ್ಮ ಮನೆಯವರ ದೊಡ್ಡಸ್ತಿಕೆಯ ಕಡೆಗೆ ಮಾತು ತಿರುಗಿಸಿಬಿಡುವರು. ತಮ್ಮ ಮಾವನವರ ಮನೆಯ ವಿಷಯವಾಗಿ ಅವರು ಹಾಸ್ಯ ಮಾಡಿ ನಕ್ಕದ್ದು ನನಗೆ ತಿಳಿದ ಮಟ್ಟಿಗೆ ಒಂದೇ ಒಂದು ಸಲ. ಅವರ ತಂದೆ ರಾಮಣ್ಣನವರು ಮಗಳನ್ನು ಗಂಡನ ಮನೆಗೆ ಬಿಟ್ಟುಹೋಗುವುದಕ್ಕೆ ಬಂದಿದ್ದರಂತೆ. ನರಸಯ್ಯನವರು ಅಷ್ಟು ಅನುಕೂಲ ಸ್ಥರಾಗಿದ್ದರೂ ಊಟ ಉಪಚಾರಗಳ ವಿಷಯದಲ್ಲಿ ಅವರ ಕೈ ಹಿಡಿತ ಸ್ವಲ್ಪ ಹೆಚ್ಚಾಗಿಯೇ ಇದ್ದಿತೆಂದು ತೋರುತ್ತದೆ. ಅವರ ಮನೆಯಲ್ಲಿ ಸಾರು ಕಿಚ್ಚಿನ ಕಿಡಿ; ತುಪ್ಪದ ಕಲ್ಸರೆಯನ್ನು ಎಲ್ಲರೆದುರಿಗೂ ಒಂದು ಸಲ ಪ್ರದರ್ಶನ ಮಾಡಿ ತೆಗೆದುಕೊಂಡು ಹೋಗುವರು. ರಾಮಣ್ಣನವರ ಮನೆಯಲ್ಲಿ ಯಾವಾಗಲೂ ಕರಾವಿದ್ದು ಚೆನ್ನಾಗಿ ತುಪ್ಪ ಹಾಕಿಕೊಂಡು ಅವರಿಗೆ ಅಭ್ಯಾಸ; ಊಟಕ್ಕೆ ಕುಳಿತಿದ್ದಾಗ ಖಾರವನ್ನು ತಡೆಯಲಾರದೆ ಒಂದು ಸಲ ಬಿಕ್ಕಳಿಸಿದರು. ಬೀಗರು ಅದನ್ನು ಕೇಳಿ "ರಾಮಣ್ಣನವರಿಗೆ ಖಾರವೇನೋ, ಸಿಹಿನೀರು ಬಡಿಸಿರಿ" ಎಂದರಂತೆ. ಗೌರಜ್ಜಿ ಇದೊಂದು ಕಥೆಯನ್ನು ಮಾತ್ರ ಸ್ವಲ್ಪ ಹಾಸ್ಯಧ್ವನಿಯಿಂದ ಹೇಳುವರು. ಕೊನೆಗೆ ತಮ್ಮ ಅತ್ತೆಯ ವಿಷಯದಲ್ಲೂ ಅವರಿಗೆ ಒಂದು ವಿಧವಾದ ಮೆಚ್ಚಿಕೆಯೇ ಇದ್ದಂತೆ ತೋರುತ್ತದೆ. ಸಂಜೆಯ ಹೊಂಬಿಸಿಲಿನಲ್ಲಿ ದೂರದಲ್ಲಿರುವ ಗಿಡಮರಗಳಿಲ್ಲದ ಬರಿಯ ಕಲ್ಲುಬೆಟ್ಟಕ್ಕೂ ಚಿನ್ನದ ಮೆರಗು ಬರುವುದು; ಹಾಗೆಯೇ ಜನಗಳಿಗೆ ವಯಸ್ಸಾದ ಮೇಲೆ ಹಿಂದಿನ ಕಾಲಕ್ಕೆ ಸಂಬಂಧಪಟ್ಟದ್ದೆಲ್ಲ ಒಂದು ಕಾಂತಿಯನ್ನು ತಳೆದಂತೆ ತೋರಬಹುದು. ಅಥವಾ ಬಹುಕಾಲ ಸಂಸಾರದ ಸುಖದುಃಖಗಳಲ್ಲಿ ನುರಿತು ಪರಿಪಕ್ವವಾದ ಅವರ ಹೃದಯಕ್ಕೆ ಮಾನವ ಮನೋಧರ್ಮದಲ್ಲಿ ಇತರರಿಗೆ ಸಿಕ್ಕದ ಯಾವುದೋ ಒಂದು ಅಮೂಲ್ಯವಾದ ರಹಸ್ಯವು ಸಿಕ್ಕಿ, ಇತರರಿಗೆ ದೊಡ್ಡದಾಗಿ ಕಾಣುವ ಹುಳುಕುಗಳೆಲ್ಲ ಅವರಿಗೆ ಅತ್ಯಲ್ಪವಾಗಿ ತೋರುವುವೋ ಏನೋ. ಅಂತೂ ಗೌರಜ್ಜಿ ಹಿಂದಿನ ಕಾಲದವರ ಅವಗುಣಗಳನ್ನು ಹೇಳುವಾಗಲೂ ಅದೂ ಹೊಗಳಿಕೆಯ ಮಾತು ಎನ್ನುವ ಹಾಗೆಯೇ ಹೇಳಿಬಿಡುವರು.

ಗೌರಜ್ಜಿ ಆಗಾಗ ತಮ್ಮ ತೌರೂರಿನ ವಿಷಯವನ್ನು ಹೇಳುವುದುಂಟು. ಅವರ ತೌರುಮನೆ ಹೊನ್ನಹಳ್ಳಿಯಲ್ಲಿ. ಅದು ಮಲೆನಾಡಿನ ಕಡೆಯ ಊರು. ಕೆರೆಯ ಕೆಳಗೆ ದೊಡ್ಡ ತೋಟಗಳು. ಅವರ ಮನೆಯವರು ಎರಡು ಎಕರೆ ತೋಟ ಮಾಡಿಕೊಂಡು ಅದರಲ್ಲಿ ಅನ್ನ ಬಟ್ಟೆ ಮೊದಲುಗೊಂಡು ದನದ ಮೇವಿನವರೆಗೂ ತಮ್ಮ ಸಂಸಾರ

ವನ್ನೆಲ್ಲಾ ನಿರ್ವಹಿಸುತ್ತಿದ್ದರು. ತೋಟವೆಂದರೂ ನಂದನವನದ ಹಾಗಿರುವುದಂತೆ; ಮಧ್ಯಾಹ್ನ ಹನ್ನೆರಡು ಗಂಟೆಯಲ್ಲೂ ನೆಲದ ಮೇಲೆ ಬಿಸಿಲು ಬೀಳುತ್ತಿರಲಿಲ್ಲ. "ಎಲ್ಲಾ ಹಾಳುಮಾಡಿಕೊಂಡುವು.... ಈಗಲೂ ಇದಾರೆ, ಹುಡುಗರು; ಇದ್ದರೇನು, ಲೆಕ್ಕಕ್ಕಿಲ್ಲ ಜಮೆಗಿಲ್ಲ" ಎಂದು ಗೌರಜ್ಜಿ ತಮ್ಮ ಅಣ್ಣನ ಮಕ್ಕಳ ಮೇಲೆ ಒಂದೊಂದು ವೇಳೆ ಕೋಪಿಸುವರು. ಆಕೆ ಚಿಕ್ಕ ಹುಡಿಗಿಯಾಗಿದ್ದಾಗ ಅವರ ಅಣ್ಣ ತೋಟಕ್ಕೆ ಅಗಿಯುವುದಕ್ಕೆ ಹೋಗಿದ್ದರೆ— ಅಲ್ಲಿಗೆ ತಿಂಡಿಯನ್ನು ತೆಗೆದುಕೊಂಡು ಹೋಗುತ್ತಿದ್ದ ರಂತೆ. ಆ ತೋಟದ ಸೊಬಗು, ಕಿತ್ತಳೆ ಮರಗಳಲ್ಲಿ ಕೆಂಪೇರುತ್ತಿದ್ದ ಕಾಯಿ, ಅಲ್ಲಲ್ಲಿಯೇ ಅಡಕೆಸೋಗಿನಲ್ಲಿ ಬಚ್ಚಿಟ್ಟಿರುತ್ತಿದ್ದ ಪರಂಗಿ, ಮಾದಲ ಮುಂತಾದ ಹಣ್ಣು — ಇದರ ವಿಷಯವನ್ನೆಲ್ಲ ಕೇಳುತ್ತಿದ್ದರೆ ನಮಗೆ ಬಾಯಲ್ಲಿ ನೀರು ಊರು ವುದು; ಮಲ್ಲಿಗೆಯ ಗಿಡಗಳಲ್ಲಿ ಬುಟ್ಟಿ ಬುಟ್ಟಿ ಮೊಗ್ಗು ಸಿಕ್ಕುತ್ತಿತ್ತಂತೆ. ಇದನ್ನು ಕೇಳಿದಾಗಲೆಲ್ಲ ನಮ್ಮ ಸರಸುವಿಗೆ ಹೊಟ್ಟೆಕಿಚ್ಚು.

ನಮ್ಮ ತಂದೆ ಅಲ್ಲಿದ್ದಾಗ ತೋಟಕ್ಕೆ ಹೋಗಿ ಬಲು ಹಾವಳಿ ಮಾಡುತ್ತಿದ್ದ ರಂತೆ. " ಬಲು ತುಂಟ ಕಣ್ರ್ರೇ, ನಿಮ್ಮಪ್ಪ" ಎಂದು ಕಥೆ ಪ್ರಾರಂಭವಾದೊಡನೆಯೆ ನಮ್ಮ ಕಿವಿ ನೆಟ್ಟಗಾಗುವುದು. ಈಗ ಲಕ್ಷಣವಾಗಿ, ಸಭ್ಯರಂತೆ ಸರ್ಜ ಬಟ್ಟೆಯ ಸೂಟು ಹಾಕಿಕೊಂಡು ಆಫೀಸಿನಿಂದ ಬಂದು, ನಾವು ಗಲಾಟೆ ಮಾಡುತ್ತಿದ್ದರೆ ಮುಖ ಗಂಟುಹಾಕಿಕೊಂಡು "ಏನು ಧಾಂದಲೆ ಮಾಡುತವಪ್ಪ ಇವು, ಮನೆ ಸಂತೆಯಾಗಿ ಹೋಯಿತು," ಎನ್ನುವವರನ್ನು ತುಂಟನೆಂದರೆ ನಮ್ಮ ಕಿವಿ ನೆಟ್ಟಗಾ ಗುವುದು ಹೆಚ್ಚೆ ? ನಮ್ಮ ತಂದೆ ಮಠಕ್ಕೆ ಹೋಗುತ್ತೇನೆಂದು ಮನೆಯಿಂದ ಹೊರಟು ಊರಿನ ಹುಡುಗರು ಇಬ್ಬರು ಮೂವರನ್ನು ಕಟ್ಟಿಕೊಂಡು, ಮನೆಯಿಂದ ಅಕ್ಕಿಯ ಹಿಟ್ಟನ್ನು ಕದ್ದು, ತೋಟದಲ್ಲಿ ತೆಂಗಿನ ಹಣ್ಣನ್ನು ಕೆಡವಿ, ತುಂಬು ಕಾಯಿ ಹಾಕಿ ರೊಟ್ಟಿ ಮಾಡಿ ಎಲ್ಲರೂ ತಿಂದು, ಮಠದಿಂದ ಹುಡುಗರು ಬರುವ ಹೊತ್ತಿಗೆ ಸರಿ ಯಾಗಿ ಮನೆಗೆ ಬರುತ್ತಿದ್ದರಂತೆ. ಒಂದು ದಿನ ಮನೆಯವರು ಬೇಡವೆಂದು ಹೇಳಿ ದ್ದರೂ ಕೆರೆಯಲ್ಲಿ ಈಜಾಡಿ, ಅಲ್ಲಿಂದ ಜೊತೆಯವರೊಡನೆ ತೋಟಕ್ಕೆ ಹೋಗಿ ಅಲ್ಲಿ ಕೋಡಬಳೆ ಮಾಡಬೇಕೆಂದು ಹವಣಿಸುತ್ತಿದ್ದಾಗ ಸಿಕ್ಕಿಕೊಂಡು ಚೆನ್ನಾಗಿ ಏಟನ್ನೂ ತಿಂದರಂತೆ, ನಾವು ತಿಂಡಿ ಕೇಳಿದರೆ " ಸದಾ ತಿಂಡಿಯ ಮೇಲೆ ಯೋಚನೆ, ಓದಿಲ್ಲ, ಬರಾವಿಲ್ಲ" ಎನ್ನುವ ನಮ್ಮ ತಂದೆ. ಗೌರಜ್ಜಿ ಈ ಕಥೆಯನ್ನೆಲ್ಲಾ ಹೇಳುತ್ತಿದ್ದರೆ ಕಥಾನಾಯಕರು ಒಂದು ವಿಧವಾದ ಜಾಣಕಿವುಡನ್ನು ಬರಮಾಡಿಕೊಂಡು ಗಂಭೀರ ವಾಗಿ ಏನೋ ಯೋಚನೆ ಮಾಡುವವರಂತೆ ಕುಳಿತಿರಲು ಯತ್ನಿಸುವರು; ಅದು ಸಾಧ್ಯವಾಗದೆ ಕೊನೆಗೆ ಮುಖವನ್ನು ಕೆಂಪಗೆ ಮಾಡಿಕೊಂಡು ಸ್ವಲ್ಪ ನಕ್ಕು ಹೊರಟುಹೋಗುವರು. ಅವರ ಮುಖವನ್ನು ನೋಡಿದರೆ ತಮ್ಮ ಅಕೃತ್ಯಗಳಿಗಾಗಿ ಅವರು ಸ್ವಲ್ಪವೂ ಸಂತಾಪಪಟ್ಟಂತೆ ತೋರುತ್ತಿರಲಿಲ್ಲ. ಹಿಂದಿನ ದಿನಗಳನ್ನು ಜ್ಞಾಪಿಸಿಕೊಂಡು ಬಹಳ ಸುಖವನ್ನು ಅನುಭವಿಸಿದಂತೆಯೇ ತೋರುತ್ತಿತ್ತು. ಆದರೆ

ಹುಡುಗರೆದುರಿಗೆ ತಮ್ಮ ಚರಿತ್ರೆಯನ್ನೆಲ್ಲಾ ಹೇಳಿಬಿಟ್ಟರೆ ಮನೆಯಲ್ಲಿ ತಮ್ಮ ದರ್ಪ ಕಡಿಮೆಯಾಗಬಹುದೆಂದು ಸ್ವಲ್ಪ ಅಸಮಾಧಾನವಾಗುತ್ತಿತ್ತೋ ಏನೋ.

ಗೌರಜ್ಜಿ ಮನೆಯಲ್ಲಿದ್ದಾಗ ಹುಡುಗರ ಸಹಾಯಕ್ಕೆ ಒಂದು ದೊಡ್ಡ ಸೈನ್ಯವಿದ್ದ ಹಾಗೆ. ನಾವೇನಾದರೂ ರಂಪುಮಾಡುತ್ತಿದ್ದಾಗ ನಮ್ಮ ತಾಯಿ "ಮನೆಗೆ ಬರಲಿ ಆಗುತ್ತೆ, ಬೆನ್ನಿಗೆ ಎಣ್ಣೆ ಸವರಿಕೊಂಡಿರಿ" ಎಂದರೆ ನಾವು ಅಜ್ಜಿಗೆ ಹೋಗಿ ಚಾಡಿ ಹೇಳಿಬಿಡುತ್ತಿದ್ದೆವು. ನಮ್ಮ ಸರಸುವಿಗೂ ಈ ಗುಟ್ಟು ತಿಳಿದುಹೋಗಿತ್ತು. ಏನಾದರೂ ಮೊಂಡತನ ಮಾಡಿದಾಗ ನಮ್ಮ ತಂದೆ ಸ್ವಲ್ಪ ಬೆನ್ನು ಬೆಚ್ಚಗೆ ಮಾಡಿದರೆ ಸಾಕು, ಅಜ್ಜಿಯ ಕಿವಿಗೆ ಕೇಳುವ ಹಾಗೆ ಅತ್ತುಬಿಡುತ್ತಿದ್ದಳು. ಆಕೆ ಬಂದ ಮೇಲೆ ನಮ್ಮ ತಂದೆ ಒಂದು ಮಾತು ಹಾಕುವುದಕ್ಕೂ ಅವಕಾಶವಾಗುತ್ತಿರಲಿಲ್ಲ. "ರತ್ನದಂತ ಮಗು, ಏನೋ ಚೇಷ್ಟೆ ಮಾಡಿದರೆ ಹೀಗೆ ಹೊಡಿಯುವುದೆ ? ಮಕ್ಕಳಲ್ಲದೆ ದೊಡ್ಡವರು ಚೇಷ್ಟೆ ಮಾಡುತ್ತಾರೆಯೆ ? ( ಈ ತರ್ಕಕ್ಕೆ ಯಾರು ತಾನೆ ಉತ್ತರಕೊಟ್ಟಾರು!) ನಿಮ್ಮಂಥವರಿಗೆ ಮಕ್ಕಳನ್ನೇಕೆ ಕೊಟ್ಟನೋ ಕಣ್ಣಿಲ್ಲದ ದೇವರು ! ನೀನು ಹುಟ್ಟುವಾಗಲೆ ಬುದ್ಧಿ ತಿಳಿದು ಹುಟ್ಟಿದೆ ಅಲ್ಲವೆ ! " ಸರಿ, ನಮ್ಮ ತಂದೆ ಚಿಕ್ಕವರಾಗಿದ್ದಾಗ ಮಾಡುತ್ತಿದ್ದ ಹಾವಳಿಯ ವರ್ಣನೆಯೆಲ್ಲಾ ಬರುವ ವೇಳೆಗೆ ಅವರು ಪಲಾಯನವಾಗಿ ಹೋಗಬೇಕು, ಇಲ್ಲವೆ ಕೋಪವಳಿದು ನಗುತ್ತ ಕುಳಿತುಕೊಳ್ಳಬೇಕು.

ಮಕ್ಕಳೆಂದರೆ ಗೌರಜ್ಜಿಗೆ ಪ್ರಾಣ. ರಾತ್ರಿ ಹುಡುಗರನ್ನೆಲ್ಲಾ ಮಲಗಿಸಿ ಅವರಿಗೆ ಕಥೆ ಹೇಳುವರು. "ದೊರೆ ಮಗ ಮಂತ್ರಿ ಮಗ ಇಬ್ಬರೂ ಹೀಗೆ ಮಾತಾಡುತ್ತಾ ಇದ್ದಾಗ, ಮರದ ಮೇಲೆ ಗಂಡಭೇರುಂಡ ಪಕ್ಷಿಗಳು ಅವರ ಮಾತು ಕೇಳುತ್ತಾ ಇದ್ದುವು," ಎಂದು ಕಥೆ ಮುಂದುವರಿಯುತ್ತಿದ್ದರೆ ಹುಡುಗರು ಹೂಗುಟ್ಟುತ್ತಾ ಹಾಗೆಯೆ ನಿದ್ರೆಹೋಗುವರು. ನಮ್ಮ ಹೂಗುಟ್ಟುವಿಕೆ ನಿಂತ ಎಷ್ಟೋ ಹೊತ್ತಿನವರೆಗೂ ಕಥೆ ಮುಂದಕ್ಕೆ ಸಾಗುತ್ತಲೇ ಇರುವುದು. ಎಷ್ಟೋ ದಿನ ನನಗೆ ರಾಜಪುತ್ರನು ಎಣ್ಣೆಯ ಕೊಪ್ಪರಿಗೆಯಲ್ಲಿ ನಾಗವಲ್ಲಿಯ ಮುಖವನ್ನು ನೋಡುವ ಸಮಯಕ್ಕೆ ಎಚ್ಚರವಾಗುತ್ತಿತ್ತು.

ಹಬ್ಬಗಳು ಬಂದುವೆಂದರೆ ನಮಗೆಲ್ಲಾ ಆಗದು. ಬೆಳಗ್ಗೆ ತಿಂಡಿಯಿಲ್ಲ ತೀರ್ಥವಿಲ್ಲ; ಸ್ನಾನಮಾಡಿ ವಿಭೂತಿ ಇಟ್ಟುಕೊಂಡು ದೇವರ ಮುಂದೆ ಕುಳಿತಿರುವುದೆಂದರೆ ಮಕ್ಕಳಿಗೆ ಜೈಲಿಗೆ ಹಾಕಿದಂತೆಯೇ ಸರಿ. ಒಳಕ್ಕೆ ಹೋದರೆ ಮಡಿ ಕೆಟ್ಟುಹೋಗುವುದೆಂದು ಹಾರಾಟ; ಬೀದಿಗೆ ಹೋಗುವುದಕ್ಕೆ ಅಪ್ಪಣೆಯಿಲ್ಲ. ಗಟ್ಟಿಯಾಗಿ ನಕ್ಕು ಕುಣಿದಾಡಿದರೆ ದೇವರ ಪೂಜೆಗೆ ಮನಸ್ಸೇ ನಿಲ್ಲುವುದಿಲ್ಲವೆಂದು ಕೋಪಮಾಡುವರು. ಸಾಲದ ಕಡಿಮೆಗೆ ಹೊಟ್ಟೆ ಹಸಿವು ಬೇರೆ—ಅಥವಾ ಹಸಿವಿಲ್ಲದಿದ್ದರೂ ತಿಂಡಿಯ ಮೇಲಿನ ಆಸೆ, ಅಂತೂ ಹಬ್ಬಗಳು ಬಂದರೆ ಮಕ್ಕಳ ಪಾಡು ಬೇಡ,—ಬೋನಿನಲ್ಲಿಟ್ಟ ಹುಲಿಯ ಹಾಗೆ ಇಲ್ಲಿಂದ ಅಲ್ಲಿಗೆ ಪರದಾಡುವುವು. ಇಂಥ ಕಾಲದಲ್ಲಿ, ಗೌರಜ್ಜಿಯೇ ನಮಗೆ ಶರಣು. ಅವರು ಹಿಂದಿನ ಕಾಲದವರಾಗಿ ವ್ರತನಿಯಮಗಳು ಬಹಳ ಹೆಚ್ಚಾ

ದರೂ ಮಕ್ಕಳ ಮೇಲಿನ ಪ್ರೇಮ ಅದಕ್ಕಿಂತಲೂ ಹೆಚ್ಚು. ಹುಡುಗರ ಪಾಡನ್ನು ನೋಡಿ ತಮ್ಮ ವೇಷವನ್ನೂ ಮರೆತು, ದೇವರ ಪಕ್ಷವನ್ನು ಬಿಟ್ಟು ನಮ್ಮ ಪಕ್ಷವನ್ನು ವಹಿಸುವರು. "ಪಾಪ, ಮಕ್ಕಳು ದೇವರ ಹಾಗೆ. ಹಬ್ಬ ಅಂದರೆ ಅವಕ್ಕೆ ಹತಹತಿ. ಅದೇನು ಹಾಗೆ ಅಟ್ಟಿಕೊಳ್ಳುತ್ತೀರಿರಿ ? ಅವಕ್ಕೇನು ಉಪವಾಸದ ಕಟ್ಟು ? ಏನಾದರೂ ಕೊಟ್ಟುಬಿಡಬಾರದೆ ?" ಎಂದು ನಮ್ಮನ್ನು ಕರೆದುಕೊಂಡು ಹೋಗಿ ಅವಲಕ್ಕಿ ಬೆಲ್ಲವೋ, ಅರಳೋ ಏನಾದರೂ ಕೊಟ್ಟು ಕಳುಹಿಸುವರು. ಅವರ ಶಾಸ್ತ್ರದ ಪ್ರಕಾರ ಐದು ವರ್ಷದ ಒಳಗಿನ ಮಕ್ಕಳೆಲ್ಲಾ ದೇವರ ಹಾಗೆ. ಐದು ವರ್ಷಕ್ಕೆ ಮೀರಿದವರು ನಾವು ಕೆಲವರಿದ್ದರೂ ನಮ್ಮಲ್ಲಿಯೂ ದೇವತ್ವವನ್ನಾರೋಪಿಸಿ ನಮಗೂ ತಿಂಡಿ ಕೊಟ್ಟುಬಿಡುವರು. ನಮ್ಮ ತಾಯಿ ಇದನ್ನೆಲ್ಲಾ ನೋಡಿ ಸ್ವಲ್ಪ ಅಸಮಾಧಾನಪಟ್ಟುಕೊಂಡು "ಹಬ್ಬ ಅನ್ನುವುದಿಲ್ಲ, ಹರಿದಿನ ಅನ್ನುವುದಿಲ್ಲ, ಹೊಟ್ಟೆಯ ಆತುರ ಬಂದಿವೆ ಇವಕ್ಕೆ" ಎನ್ನುವರು. ನಮ್ಮ ಜೇಬಿನಲ್ಲಿ ಅವಲಕ್ಕಿ ಇರುವವರೆಗೂ ಅವರು ಎಷ್ಟು ರೇಗಿದರೇನು ?

ಚಿಕ್ಕಂದಿನಲ್ಲೇ ವೈಧವ್ಯ ಪ್ರಾಪ್ತವಾಗಿ ಮಕ್ಕಳೂ ಇಲ್ಲದೆ ಇರುವವರಿಗೆ ಹೃದಯವು ಕಲ್ಲಾಗಿಹೋಗುವುದೆಂದು ನಮ್ಮವರು ಹೇಳುವುದುಂಟು. ಅದು ನಿಜವಿದ್ದರೂ ಇರಬಹುದು. ಅಂಥವರು ತಾವು ಹಸಿದು ಪ್ರಾಣಬಿಡುತ್ತಿರುವಾಗ ಇತರರು ಮಿಷ್ಟಾನ್ನ ಭೋಜನ ಮಾಡುವುದನ್ನು ನೋಡುತ್ತಿರಬೇಕು. ಪತಿಪ್ರೇಮ ರಹಿತರಾಗಿ, ಎಳೆಯ ಮಕ್ಕಳನ್ನು ಲಾಲಿಸಿ ಅವುಗಳ ಆಟವನ್ನು ನೋಡಿ ಹಿಗ್ಗುವ ಭಾಗ್ಯವಿಲ್ಲದೆ, ಇತರರು ಬೆಳಕಿನಲ್ಲಿರುವಾಗ ತಮ್ಮ ಭಾಗಕ್ಕೆ ಪ್ರಪಂಚವೆಲ್ಲ ಅಂಧಕಾರಮಯವೆಂದು ತಿಳಿದು ನೊಂದುಕೊಳ್ಳುತ್ತ, ಹೆರರ ಸೌಖ್ಯಕ್ಕಾಗಿ ದುಡಿದು ದುಡಿದು ಜೀವನನ್ನು ತೇಯುವವರಿಗೆ ಹೃದಯ ಕಲ್ಲಾಗುವುದೇನೂ ಹೆಚ್ಚಲ್ಲ. ಸ್ತ್ರೀಯರಿಗೆ ಮಾತೃಪ್ರೇಮವು ಉಕ್ಕಿ ಬರುವಾಗ ಅದಕ್ಕೆ ಒಂದು ಆಶ್ರಯವಿಲ್ಲದಿದ್ದರೆ ಅದೇ ಒಂದು ಕಾಠಿಣ್ಯವಾಗಿ ಪರಿಣಮಿಸುವುದು. ಪ್ರೇಮಲತೆ ತನಗೆ ತಾನೆ ಹಬ್ಬಲಾರದು. ಅದಕ್ಕೆ ಅನುಕೂಲವಾದ ಆಶ್ರಯವೊಂದು ಸಿಕ್ಕದಿದ್ದರೆ ಲತೆ ಒಣಗಿ ಹೋಗುವುದು ಹಾಗಿರಲಿ, ಅದರ ಸ್ಥಳದಲ್ಲಿ ವಿಷಮೂಲಿಕೆಯೊಂದು ಉತ್ಪನ್ನವಾಗಬಹುದು. ಗೌರಜ್ಜಿಗೆ ಮಕ್ಕಳಿಲ್ಲ. ಆದರೂ ಚಿಕ್ಕವಯಸ್ಸಿನಿಂದಲೂ ಸಮೀಪ ಬಂಧುಗಳ ಮಕ್ಕಳನ್ನು ಸಾಕಿ ಸಲಹಿದ್ದುದರಿಂದ ಇಂಥ ಆಶ್ರಯ ಅವರಿಗೆ ದೊರೆತಿತ್ತು. ಅವರ ಸ್ವಭಾವದಲ್ಲಿ ಕಾಠಿಣ್ಯಕ್ಕೆ ಬದಲಾಗಿ ಅಪೂರ್ವವಾದ ಒಂದು ಮಾರ್ದವವು ತೋರಿಬರುತ್ತಿತ್ತು. ತಮ್ಮ ದುಃಖವನ್ನು ಹೇಗೆ ಅಡಗಿಸಿಕೊಂಡರೋ, ಬಂಧುಗಳು ನಿರ್ಲಕ್ಷ್ಯವಾಗಿ ಅಸಡ್ಡೆಯಾಗಿ ಎಸೆದ ವಾಗ್ಬಾಣಗಳ ವೇದನೆಯನ್ನು ಹೇಗೆ ಸಹಿಸಿದರೋ—ಒಂದು ದಿನವಾದರೂ ಅವರು ಆ ವಿಷಯದ ಮಾತೆತ್ತಿದವರಲ್ಲ. ತಮ್ಮ ಕಣ್ಣೆದುರಿಗೆ ಬೆಳೆದವರು ಸುಖವಾಗಿರುವುದನ್ನು ನೋಡಿ ಆನಂದಪಟ್ಟುಕೊಂಡು ಇದ್ದುಬಿಡುವರು. ಆದರೂ ಕೊನೆಕೊನೆಗೆ ಅವರ ಮನಸ್ಸಿನಲ್ಲಿ ಒಂದು ವಿಧವಾದ ಚಲಚಿತ್ತತೆ ತೋರುತ್ತಿತ್ತು. ನಾಲ್ಕು ದಿನ ನಮ್ಮ ಮನೆಯಲ್ಲಿ

# ೧೭. ಮನುಷ್ಯ ಮತ್ತು ಕಾರಖಾನೆ

[ ಗಾಂಧೀಜಿಯವರು ಯಂತ್ರ ವಿರೋಧಿಗಳಲ್ಲ; ಆದರೆ ಕಾರಖಾನೆಗಳ ವಿರೋಧಿಗಳು. ವ್ಯಕ್ತಿಯ ಸ್ವಾತಂತ್ರ್ಯವನ್ನು ಹಾಳುಮಾಡುವ ಕಾರಖಾನೆಗಳ ವಿರುದ್ಧ ಅವರ ಹೋರಾಟ ವಿದೆ.]

ನಾನು ಕೇವಲ ಯಂತ್ರವಿರೋಧಿಯಲ್ಲ. ಆದರೆ ಯಂತ್ರದ ಹುಚ್ಚು ಜನರಿಗೆ ಹಿಡಿದುದನ್ನು ನಾನು ವಿರೋಧಿಸುವೆ. ಶ್ರಮವನ್ನುಳಿಸುವ ಯಂತ್ರಗಳ ಬಗ್ಗೆ ಜನರಲ್ಲಿ ಒಂದು ಹುಚ್ಚು ಹೊಕ್ಕಿದೆ. ಜನರು ಯಂತ್ರಗಳ ನಿರ್ಮಾಣದಿಂದ ಶ್ರಮವನ್ನುಳಿಸುವ ಪ್ರಯತ್ನಮಾಡುತ್ತಿರುವರು. ಅದರಿಂದ ಸಾವಿರಾರು ಜನರು ನಿರುದ್ಯೋಗಿಗಳಾಗಿ ಬೀದಿಗಳಲ್ಲಿ ಅಲೆಯುತ್ತ ಉಪವಾಸದಿಂದ ತೊಳಲಿ ಸಾಯುವ ಹೊತ್ತು ಬರುವದು. ನಾನು ವೇಳೆ ಹಾಗು ಶ್ರಮ ಇವೆರಡನ್ನೂ ಉಳಿಸಬೇಕೆನ್ನುವೆ. ಆದರೆ ಕೇವಲ ಕೆಲವೊಂದು ಸ್ವಲ್ಪ ಜನರ ಸಲುವಾಗಿಯಲ್ಲ, ಇಡೀ ಮಾನವಕುಲಕ್ಕಾಗಿ. ಸಂಪತ್ತು ಕೇವಲ ನಾಲ್ಕು ಜನರ ಕೈಯಲ್ಲಿ ಕೇಂದ್ರಿತವಾಗದೆ ಅದು ಎಲ್ಲರಿಗೂ ದೊರೆಯಬೇಕೆಂದು ನನ್ನ ಇಚ್ಛೆ. ಇಂದು ಕಾರಖಾನೆಗಳ ಮೂಲಕ ಲಕ್ಷಾಂತರ ಜನರನ್ನು ಗುಲಾಮರನ್ನಾಗಿ ಮಾಡಿ, ತಮ್ಮ ಮುಷ್ಟಿಯಲ್ಲಿ ಹಿಡಿದಿಟ್ಟುಕೊಳ್ಳುವದು, ಸ್ವಲ್ಪ ಜನರಿಗೆ ಸಾಧ್ಯವಾಗಿದೆ. ಶ್ರಮವನ್ನುಳಿಸಬೇಕೆಂಬ ಬುದ್ಧಿಯು ನಿರ್ಮಾಣವಾದುದು ಕೇವಲ ಪರೋಪಕಾರದ ಮೂಲಕವಲ್ಲ. ಆದರೆ ಬರಿಯ ಧನಲೋಭದಿಂದ. ಈ ಪರಿಸ್ಥಿತಿಯ ವಿರುದ್ಧ ನಾನು ನನ್ನ ಶಕ್ತಿ ಮೀರಿ ಹೋರಾಡುತ್ತಿರುವೆ.

ಈ ಜಗತ್ತಿನಲ್ಲಿ ಮುಖ್ಯವಾಗಿ ಮನುಷ್ಯನ ಕಲ್ಯಾಣವೇ ಹೆಗ್ಗುರಿಯಾಗಿರಬೇಕು. ಯಂತ್ರಗಳು ಮನುಷ್ಯನನ್ನು ಪಂಗುವನ್ನಾಗಿ ಮಾಡಕೂಡದು.

ಹಲವೇ ಜನರ ಕೈಯಲ್ಲಿ ಧನ ಹಾಗು ಅಧಿಕಾರ ಇವುಗಳನ್ನಿಟ್ಟುಕೊಳ್ಳುವ ಹಾಗು ಅನೇಕರ ಶ್ರಮವನ್ನು ಸೂರೆಗೊಳ್ಳುವ ಉದ್ದೇಶದಿಂದ ಯಂತ್ರಗಳ ಸಂಘಟನೆ ಮಾಡುವದು ಸರ್ವಥಾ ಅನ್ಯಾಯದ್ದೆಂದು ನಾನು ಭಾವಿಸುವೆ. ಆಧುನಿಕ ಕಾಲದಲ್ಲಿ ಯಂತ್ರಶಕ್ತಿಯ ಉಪಯೋಗವು ಬಹುಶಃ ಮೇಲಿನ ಎರಡು ಉದ್ದೇಶಗಳಿಗಾಗಿಯೇ ಆಗುತ್ತಿದೆ. ಯಂತ್ರಗಳ ಆ ದುರುಪಯೋಗವನ್ನು ತಪ್ಪಿಸುವದಕ್ಕಾಗಿ ರಾಟಿಯ ಚಳವಳಿಯ ಸಂಘಟನೆ ವ್ಯವಸ್ಥಿತ ರೀತಿಯಿಂದ ನಡೆದಿದೆ. ನನ್ನ ಯೋಜನೆಯಂತೆ ಯಂತ್ರಗಳನ್ನು ನಡೆಸುವವರು ಕೇವಲ ತಮ್ಮ ಸ್ವಾರ್ಥವನ್ನು ಸಾಧಿಸುವದರಲ್ಲಿ ಮಗ್ನರಾಗದೆ, ಕೇವಲ ತಮ್ಮ ರಾಷ್ಟ್ರದ ಹಿತವನ್ನಷ್ಟೆ ನೋಡದೆ ಇಡೀ ಮಾನವ ಕುಲದ ಹಿತದತ್ತ ಲಕ್ಷ್ಯಗೊಡತಕ್ಕದ್ದು.

ಯಂತ್ರಗಳಿಗೂ ಒಂದು ಸ್ಥಾನವಿದೆ. ಅವೇನೂ ಇನ್ನು ಇಲ್ಲದಂತಾಗಲಾರವು. ಆದರೆ ಅವಶ್ಯಕ ಶಾರೀರಿಕ ಶ್ರಮವನ್ನು ಅವು ತಪ್ಪಿಸಕೂಡದು. ಹಳ್ಳಿಯಲ್ಲಿ ಅಥವಾ ಮನೆಯಲ್ಲಿ ಉಪಯೋಗಿಸಲಿಕ್ಕೆ ಬರುವ ಯಂತ್ರದಲ್ಲಿ ಸುಧಾರಣೆಯಾಗು

ವದು ಇಷ್ಟ. ಆದರೆ ವಿದ್ಯುತ್ ಮುಂತಾದ ಶಕ್ತಿಗಳ ಸಹಾಯದಿಂದ ರಾಟಿಗಳನ್ನು ನಡೆಸಿ ಶಾರೀರಿಕ ಶ್ರಮಕ್ಕೆ ಆಸ್ಪದವಿಲ್ಲದಂತೆ ಮಾಡುವದು ದೊಡ್ಡ ಅಪರಾಧವೆಂದು ನಾನು ತಿಳಿಯುವೆ. ಏಕೆಂದರೆ ಅದರಿಂದ ತಮ್ಮ ತಮ್ಮ ಮನೆಗಳಲ್ಲಿ ದುಡಿಯುತ್ತಿರುವ ಲಕ್ಷಾಂತರ ರೈತರ ಉದ್ಯೋಗವು ನಷ್ಟವಾಗಿ ಅವರು ನಿರುದ್ಯೋಗಿಗಳಾಗುವರು. ಅವರಿಗೆ ಬೇರೆ ಉದ್ಯೋಗವನ್ನು ಕಲ್ಪಿಸಿಕೊಟ್ಟರೆ ಆ ಮಾತು ಬೇರೆ. ಯಂತ್ರ ಸಹಾಯದಿಂದ ಅಸಂಖ್ಯಾತ ಸರಕುಗಳನ್ನು ನಿರ್ಮಾಣಮಾಡುವವರು, ಜನರ ಅವಶ್ಯಕತೆಯೆಷ್ಟು, ತಾವು ನಿರ್ಮಾಣ ಮಾಡುವದೆಷ್ಟು ಎಂಬತ್ತ ಲಕ್ಷ್ಯಗೊಡುವದಿಲ್ಲ. ಹೀಗೆ ಸರಕು ನಿರ್ಮಾಣಮಾಡುವದರಿಂದ ಜಗತ್ತಿಗೆ ಹಿತವಾಗಿದ್ದರೆ ಹಾಗೆ



ಮಾಡಲು ಅಡ್ಡಿಯಿಲ್ಲ. ಆದರೆ ವಸ್ತುಸ್ಥಿತಿ ಹಾಗಿಲ್ಲ. ಈ ಬಗೆಯಾಗಿ ಅಸಂಖ್ಯಾತ ಸರಕುಗಳನ್ನು ನಿರ್ಮಾಣ ಮಾಡುವದರಿಂದ ಲೋಕದ ಅಕಲ್ಯಾಣವೇ ಇದೆಯೆಂದು ಕಂಡುಬರುತ್ತದೆ. ಎಲ್ಲ ದೇಶಗಳೂ ಈ ವಸ್ತುಗಳನ್ನು ಮಿತಿಮೀರಿ ಸಿದ್ಧಪಡಿಸಿದರೆ ಅವುಗಳನ್ನು ಕೊಳ್ಳುವವರಾರು ! ಇತಿ ಮಿತಿಯಿಲ್ಲದೆ ಯಂತ್ರಗಳಿಂದ ವಸ್ತುಗಳನ್ನು ನಿರ್ಮಾಣ ಮಾಡುವ ಪದ್ಧತಿಯು ತನ್ನ ತನಗೆ ಮುಳುವಾಗುತ್ತಿದೆ. ಜನಕ್ಕೆ ಈ ಹುಚ್ಚು ಹಿಡಿದುದರಿಂದಲೆ ಕಾರಖಾನೆಗಳಿಂದ ಜಗತ್ತು ಗಂಡಾಂತರಕ್ಕೆ ಒಳಗಾಗಿದೆ ಎಂದು ನಾನು ಸ್ಪಷ್ಟವಾಗಿ ಸಾರುತ್ತೇನೆ.

ಒಂದು ಕಾರಖಾನೆ ಸುಮಾರು ನೂರಾರು ಜನರಿಗೆ ಕೆಲಸ ಕೊಡುವದು. ಆದರೆ ಅದೇ ಕಾಲಕ್ಕೆ ಅದರಿಂದ ಸಾವಿರಾರು ಜನರು ನಿರುದ್ಯೋಗಿಗಳಾಗುತ್ತಾರೆ.

ಒಂದು ಎಣ್ಣೆ ಗಿರಣಿ ಹಾಕಿ ನಾನು ಸಾವಿರಾರು ಮಣಗಟ್ಟಲೆ ಎಣ್ಣೆಯ ಉತ್ಪಾದನೆ ಮಾಡಬಲ್ಲೆನು. ಆದರೆ ಸಾವಿರಾರು ಗಾಣಿಗರು ಆ ಮೂಲಕ ನಿರುದ್ಯೋಗಿಗಳಾಗುವರು. ಇದು ಶಕ್ತಿಯ ವಿಘಾತಕ ಉಪಯೋಗವು. ಅದೇ ಕೈಕೆಲಸದಿಂದ ಲಕ್ಷಾಂತರ ಜನರ ಹೊಟ್ಟೆ ತುಂಬುತ್ತಿದ್ದರೆ ಅದು ವಿಧಾಯಕ ಕಾರ್ಯವು, ಹಾಗು ಇದು ಜನಸಾಮಾನ್ಯರ ಹಿತವನ್ನು ಸಾಧಿಸುವಂತಹದು. ವಿದ್ಯುತ್ ಮುಂತಾದ ಶಕ್ತಿಗಳ ಸಹಾಯದಿಂದ ದೊಡ್ಡ ಪ್ರಮಾಣದಲ್ಲಿ ಉತ್ಪಾದನೆ ಮಾಡುವ ಕಾರ-ಖಾನೆಯು, ರಾಷ್ಟ್ರೀಕರಣವಾಗಿದ್ದರೂ ಅದು ಉಪಕಾರಕವಾಗಲರಿಯದು.

ಲಕ್ಷಾಂತರ ಜನರ ಶ್ರಮವನ್ನುಳಿಸಿ ಅವರಿಗೆ ಬೌದ್ಧಿಕ ವಿಕಾಸ ಮುಂತಾದವುಗಳನ್ನು ಸಾಧಿಸಲು ಹೆಚ್ಚು ಬಿಡುವನ್ನು ಏಕೆ ಕಲ್ಪಿಸಿಕೊಡಬಾರದೆಂದು ನನ್ನನ್ನು ಜನರು ಕೇಳುವರು. ಆದರೆ ವಿಶ್ರಾಂತಿಗೂ ಒಂದು ಮಿತಿಯಿದೆ. ತನ್ನ ಶ್ರಮದಿಂದ ತನ್ನ ಅನ್ನವನ್ನು ಮನುಷ್ಯನು ದೊರಕಿಸಬೇಕೆಂಬದು ದೇವರ ಸಂಕಲ್ಪವಿರುವದು. ಆದುದರಿಂದ ಕೇವಲ ಒಂದು ಇಂದ್ರಜಾಲದಿಂದ ನಮಗೆ ಬೇಕಾದ ವಸ್ತುಗಳನ್ನೆಲ್ಲ ಉತ್ಪನ್ನ ಮಾಡುವ ಕಲ್ಪನೆ ಕೂಡ ಭಯಾನಕವೆನಿಸುವದು.

ಕಾರಖಾನೆಯೆಂದರೆ ಒಂದು ಇಲ್ಲವೆ ನೂರಾರು ಹಾವುಗಳಿರಬಹುದಾದ ಒಂದು ಹುತ್ತು. ಕಾರಖಾನೆಯಿದ್ದಲ್ಲಿ ದೊಡ್ಡ ದೊಡ್ಡ ಪಟ್ಟಣಗಳು ತಲೆ ಎತ್ತುವವು. ಪಟ್ಟಣಗಳೆಂದೊಡನೆ ರೇಲ್ವೆ, ಟ್ರಾಮು ಇವು ಅವಶ್ಯ. ವಿದ್ಯುತ್ತೂ ಇವುಗಳ ಹಿಂದೆಯೇ ಬಂದೇ ತೀರುವದು. ಚಲನವಲನದ ಕೃತ್ರಿಮ ಸಾಧನಗಳಿದ್ದಲ್ಲಿಯೇ ಜನರ ಆರೋಗ್ಯವು ಕೆಟ್ಟಿರುವದೆಂದು ಪ್ರಾಮಾಣಿಕ ಡಾಕ್ಟರರ ಅಭಿಪ್ರಾಯವಿರುವದು. ನಾನೊಂದು ಯುರೋಪದ ಪಟ್ಟಣದಲ್ಲಿರುವಾಗ ಅಲ್ಲಿ ಹಣದ ಕೊರತೆಯುಂಟಾಯಿತು. ಆಗ ಟ್ರಾಮವೆ ಕಂಪನಿ, ಡಾಕ್ಟರರು, ವಕೀಲರು ಇವರ ಉತ್ಪನ್ನ ಕುಗ್ಗಿತು. ಆದರೆ ಜನರ ಆರೋಗ್ಯ ಸುಧಾರಿಸಿತು ! ಕಾರಖಾನೆಗಳಿಂದ ಎಳ್ಳಷ್ಟೂ ಲಾಭ ನನಗೆ ತೋರುವದಿಲ್ಲ.

ಭಾರತವು ಲಕ್ಷಾಂತರ ಹಳ್ಳಿಗಳ ದೇಶ. ಕಾರಖಾನೆಯನ್ನು ಸ್ಥಾಪಿಸಿ ಪಟ್ಟಣಗಳನ್ನು ಬಲಿಸುವದರಿಂದ ಹಳ್ಳಿಗಳು ಹಾಳಾಗುತ್ತವೆ. ಈ ಮಾನವ ರೂಪಿ ಕೋಟ್ಯಂತರ ಜೀವಂತ ಯಂತ್ರಗಳನ್ನು ನಾಶಮಾಡಿ ಒಂದು ಕಾರಖಾನೆ ಸ್ಥಾಪನೆ ಮಾಡುವದು ಅನ್ಯಾಯ. ಮನುಷ್ಯನಿಗೆ ನೆರವಾಗಿ ಆತನ ಕೆಲಸವನ್ನು ಹಗುರು ಮಾಡುವಂತಹ ಯಂತ್ರಗಳು ಬೇಕು. ಕಾರಖಾನೆಗಳ ಪದ್ಧತಿಯಿಂದ ಲಕ್ಷಾಂತರ ಜನರು ಕೂಳುಗೇಡಾಗುವರು ಮತ್ತು ಸ್ವಲ್ಪೇ ಜನರ ಕೈಯಲ್ಲಿ ಸಂಪತ್ತು ಕೂಡಿ ಬೀಳುವದು.

—ಗಾಂಧೀಜಿ.

## ಅಭ್ಯಸನಗಳು

ಪ್ರಶ್ನೆಗಳು :—

(೧) ಯಂತ್ರ ಎಂದರೇನು ?

(೨) ಕಾರಖಾನೆಗಳಿಂದಾಗುವ ಹಾನಿಗಳಾವವು ?

(೩) ಗಾಂಧೀಜಿಯವರು ಎಂತಹ ಯಂತ್ರಗಳು ಸ್ವಾಗತಾರ್ಹವೆಂದರು ?

(೪) ಸರಕುಗಳನ್ನು ಲಕ್ಷಾವಧಿ ಪಟ್ಟು ಹೆಚ್ಚಿನ ಪ್ರಮಾಣದಲ್ಲಿ ನಿರ್ಮಿಸಿದರೆ ಜಗತ್ತಿಗೆ ಅದರಿಂದ ಹಾನಿಯೇನು ?

(೫) ಗಾಂಧೀಜಿಯವರು ಪಟ್ಟಣಗಳಿಗಿಂತ ಹಳ್ಳಿಗಳಿಗೇ ಎಲ್ಲ ಮಹತ್ವವನ್ನು ಕೊಟ್ಟ ಕಾರಣವೇನು ?

(೬) 'ರಾಷ್ಟ್ರೀಕರಣ' ಎಂದರೇನು? ರಾಷ್ಟ್ರೀಕರಣವಾದರೂ ಕಾರಖಾನೆಗಳು ಲೋಕ ಹಿತಕ್ಕೆ ವಿರೋಧಕವೆಂದು ಗಾಂಧೀಜಿ ಹೇಳುವ ಕಾರಣವೇನು ?

ಭಾಷಾಭ್ಯಾಸ :—

ನೇರವಾದ ಮಾತು ಗಾಂಧೀಜಿಯವರ ಶೈಲಿಯ ಜೀವಾಳ. ತಮ್ಮ ವಿಚಾರಗಳನ್ನು ಸುಸ್ಪಷ್ಟ ಶಬ್ದಗಳಲ್ಲಿ ಪರಿಣಾಮಕಾರಿಯಾಗಿ ಹೇಳುವ ಆ ಶೈಲಿಯ ಸಾಮರ್ಥ್ಯ ವನ್ನು ಇಲ್ಲಿ ಮನಗಾಣಬಹುದು.

ಕೆಳಗಣ ವಾಕ್ಯಗಳನ್ನು ಸ್ಪಷ್ಟೀಕರಿಸಿರಿ.

[೧] (ಯಂತ್ರಗಳನ್ನು ನಿರ್ಮಿಸಿ) ಶ್ರಮವನ್ನುಳಿಸಬೇಕೆಂಬ ಬುದ್ಧಿಯು ಕೇವಲ ಪರೋಪಕಾರದ ಮೂಲಕವಲ್ಲ.

[೨] ಯಂತ್ರಗಳು ಮನುಷ್ಯನನ್ನು ಪಂಗುವನ್ನಾಗಿ ಮಾಡಿವೆ.

[೩] ಕಾರಖಾನೆಗಳಿಂದ ಜಗತ್ತು ಗಂಡಾಂತರಕ್ಕೆ ಒಳಗಾಗಿದೆ.

[೪] ಕಾರಖಾನೆಗಳೆಂದರೆ ಹಾವಿನ ಹುತ್ತು.

ವಿಚಾರಗಳ ಸ್ಪಷ್ಟತೆಯನ್ನು ಕಡಿಮೆ ಮಾಡುವ ಅಲಂಕಾರಿಕ ಕೃತ್ರಿಮ ಭಾಷೆಯು ತ್ಯಾಜ್ಯವಾದುದು. ಬೆಡಗಿನ ಭಾಷೆಯ ಮೋಹವು ನಿಜವಾದ ವಿಚಾರ ಭಾವನೆಗಳ ದಾರಿದ್ರ್ಯವನ್ನು ಸೂಚಿಸುತ್ತದೆ. ಗಾಂಧೀಜಿಯವರು ಅಳುಕು ಇಲ್ಲದೆ ಬಿಚ್ಚು ಮಾತಿನಲ್ಲಿ ಹೇಳುತ್ತಿದ್ದರೂ ನಯ ವಿನಯಗಳನ್ನು ಪಾಲಿ ಸುವಲ್ಲಿ ಮಾತು ಮಾತಿಗೂ ದಕ್ಷರಾಗಿರುತ್ತಿದ್ದರು. ಗಾಂಧೀಜಿಯವರ ಶೈಲಿಯ ಹಿರಿಮೆಯು ಇದರಲ್ಲಿಯೇ ಅಡಕವಾಗಿರುವದು.

ಶಬ್ದ ವಿಚಾರ :—

ನಾಲ್ಕು ಜನ, ದೈವದವರು, ಬಹು ಜನ ಸಮಾಜ; ಜಂಗುಳಿ, ಗುಂಪು, ತಂಡ, ಪಂಗಡ, ಬಣ—ಈ ಶಬ್ದಗಳನ್ನು ಉಪಯೋಗಿಸಿ ಅವುಗಳಲ್ಲಿಯ ಅರ್ಥಭೇದವು ಸ್ಪಷ್ಟವಾಗುವಂತೆ ಒಂದೊಂದು ವಾಕ್ಯ ಬರೆಯಿರಿ.

ವಾಕ್‌ಶಿಕ್ಷಣ :—

ಗಾಂಧೀಜಿಯವರನ್ನು ಪತ್ರಿಕಾ ವ್ಯವಸಾಯಿಒಬ್ಬನು ಕೇಳುವ ಪ್ರಶ್ನೆಗಳಿಗೆ ಪಾಠದೊಳಗಿನ ವಿಚಾರಗಳು ಉತ್ತರರೂಪದಿಂದ ಬರುವಂತೆ; ಪ್ರಶ್ನೆಗಳು ಅದಕ್ಕೆ ಗಾಂಧೀಜಿಯವರು ಉತ್ತರ ಕೊಡುವ ರೀತಿಯನ್ನು ಅನುಕರಿಸಿ ತೋರಿಸಿರಿ.

ಚರ್ಚೆ :—

ಮುಂಬೈಯಂತಹ ಮಹಾನಗರಗಳು ಮಾನವ ಸಂಸ್ಕೃತಿಗೆ ಕಲಂಕ.

ಬರೆಹ :—

‘ ಸ್ವದೇಶಿ ವ್ರತವನ್ನು ಸ್ವೀಕರಿಸಿ ಗ್ರಾಮೋದ್ಯೋಗಗಳಿಗೆ ಉತ್ತೇಜನ ಕೊಡಿರಿ’. ಎಂದು ಗಾಂಧೀಜಿಯವರ ಲೇಖನದ ಮಾದರಿಯಲ್ಲಿ ಒಂದು ಪ್ರಬಂಧ ಬರೆಯಿರಿ.



# ೧೮. ಸೇಬು

[ ನಮ್ಮ ನೆರೆಹೊರೆಯ ಪ್ರಾಂತಗಳ ಸುಪ್ರಸಿದ್ಧ ಲೇಖಕರ ಒಳ್ಳೆಯ ಕೃತಿಗಳ ಪರಿಚಯ ಮಾಡಿಕೊಡುವ ದೃಷ್ಟಿಯಿಂದ ಬಂಗಾಳಿ ಕತೆಯನ್ನು ಇಲ್ಲಿ ಕೊಡಲಾಗಿದೆ. ಒಳ್ಳೆ ಪರಿಣಾಮಕಾರಿಯಾಗುವಂತೆ ಕಥೆಯನ್ನು ಚಿತ್ರಿಸಿದ ಬಗೆಯು ಅಭ್ಯಸನೀಯವಾಗಿದೆ.]

ಸೋಮವಾರ ನಸುಕಿನಲ್ಲಿ ಎದ್ದವನೇ, ಆರು ವರ್ಷದ ಮಗುವಾದ ಬುಧಾ. ಮಲಗಿರುವ ತನ್ನ ತಂದೆಯ ಕಿವಿಯಲ್ಲಿ ಮೆಲ್ಲನೆ, “ಅಪ್ಪಾ, ಇವತ್ತ್ಯ ಸೋಮವಾರಾ, ಇವತ್ತ ತರತೀ ಹೌದಲ್ಲೊ ಮತ್ತ್ಯ?” ಎಂದು ನುಡಿದ.

ನಟವರನು ಹರಕು ಚಾಪೆಯ ಮೇಲೆ ಮತ್ತೊಂದು ಮಗ್ಗುಲಾಗಿ ನಿದ್ದೆಯ ದನಿಯಲ್ಲಿಯೇ “ಹೂಂ ತರತೇನಿ” ಎಂದ. ಹುಡುಗನ ಮುಖ ನಗೆಯಿಂದ ತುಂಬಿ ಹೋಯಿತು. ಕೂಡಲೇ ಅವನು ಹೊರಗೆ ಓಡಿಹೋಗಿ, ಎದುರಿನ ಬಂಗ್ಲೆಯಲ್ಲಿರುವ ತನ್ನ ಗೆಳೆಯನಾದ ಶ್ರೀಕಾಂತನನ್ನು ಕರೆದು “ಇವತ್ತು ಸಂಜಿಮುಂದ ನಮ್ಮಪ್ಪ ತರತೇನಿ ಅಂತ ಹೇಳ್ಯಾನ; ನೋಡ್ಯಾರ ನೋಡು” ಎಂದು ಹೇಳಿದ.

ತಂದೆ ಮಕ್ಕಳು ಇಷ್ಟು ಗುಟ್ಟಾಗಿ ಮಾತನಾಡುತ್ತಿದ್ದ ವಿಷಯ, ಒಂದು ಸೇಬು ಹಣ್ಣು. ಆ ದಿನ ಶ್ರೀಕಾಂತ ಮಹಾ ಉತ್ಸಾಹದಿಂದ ಒಂದು ಸೇಬು ಹಣ್ಣನ್ನು ತಿನ್ನುತ್ತ ಬೀದಿಯಲ್ಲಿ ನಿಂತುಕೊಂಡಿದ್ದ. ಬುಧಾ ಬಾಗಿಲಲ್ಲಿ ಇಳಿಬಿಟ್ಟ ಬಿದುರಿನ ಹರಕು ಪರದೆಯ ಸಂದಿನೊಳಗಿಂದ, ಶ್ರೀಕಾಂತನ ಈ ಅಶನಲೀಲೆಯನ್ನು ಎಷ್ಟೋ ಹೊತ್ತು ನೋಡಿಯೇ ನೋಡಿದ. ಕೊನೆಗೆ ಲೋಭವನ್ನು ತಡೆಯಲು ದುಸ್ಸಾಧ್ಯವಾಗಲು, ಹೊರಗೆ ಬಂದು ಶ್ರೀಕಾಂತನಿಗೆ “ಏನೋ ಅದು ತಿಂಬೋದು, ಸಿರಿಕಾಂತಾ ?” ಎಂದು ಕೇಳಿದ. ಶ್ರೀಕಾಂತನು ನಿರ್ವಿಕಾರ ಭಾವದಿಂದ “ಸೇಬು” ಎಂದ. “ನನಗೊಂದು ಚೂರು ಕೊಡಲ್ಲಾ” ಎಂದು ಬುಧಾ ಬೇಡಿದ.

ಉಳಿದ ಚೂರು ಹಣ್ಣನ್ನು ಪಟಕ್ಕನೆ ಬಾಯಲ್ಲಿ ಹಾಕಿಕೊಂಡು ಶ್ರೀಕಾಂತ “ಊಂ ಹೂಂ” ಎಂದ. ಆಮೇಲೆ ಅದನ್ನೆಲ್ಲ ತಿಂದಾದನಂತರ “ನಮ್ಮಪ್ಪ ನನಗೆ ತಂದುಕೊಟ್ಟಾನ, ನಿಮ್ಮಪ್ಪ ಯಾಕ ತರೂದುಲ್ಲಲ್ಲಪ್ಪ?” ಎಂದು ಕೇಳಿದ.

ತಿಂಗಳಿಗೆ ಇಪ್ಪತ್ತೆರಡು ರೂಪಾಯಿ ಸಂಬಳದ ಕಾರಕೂನನ ಮಗನಿಗೆ, ಐದು ನೂರು ರೂಪಾಯಿ ಸಂಬಳದ ತಂದೆಯ ಮಗನ ಈ ಜಟಿಲ ಪ್ರಶ್ನೆಗೆ ಉತ್ತರವನ್ನು ಕೊಡುವದಾಗಲಿಲ್ಲ. ಆತ ಅಳುಮೋರೆಯನ್ನು ಮಾಡಿಕೊಂಡು ತನ್ನ ತಂದೆಯ ಬಳಿಗೆ ಬಂದ. ನಟವರನಾಗ ಹರಕು ಅಂಗಿಯ ಮೇಲೆ ಮಾಸಿದ ಶಾಲನ್ನು ಹೊದೆದುಕೊಂಡು, ಒಂಭತ್ತರ ಗಾಡಿಯನ್ನು ಹಿಡಿಯಬೇಕೆಂದು ಹೊರಟಿದ್ದನು. ಬುಧಾ ಆತನೆದುರಿಗೆ ಬಂದು ನಿಂತುಕೊಂಡು "ಅಪ್ಪಾ, ಇವತ್ತ ನನಗೊಂದು ಸೇಬು ಹಣ್ಣನ್ನು ತಂದುಕೊಡು" ಎಂದು ಹೇಳಿದ. "ಒಳ್ಳೇದು" ಎಂದು ಹೇಳಿ ನಟವರ ಹೊರಟುಹೋದ.

ಸಂಜೆಯ ಗಾಡಿಯಿಂದ ನಟವರ ಆಫೀಸಿನಿಂದ ತಿರುಗಿ ಬರುತ್ತಿರುವಾಗ ದಾರಿಯಲ್ಲಿಯೆ ಬುಧಾ ಆತನ ಕಣ್ಣಿಗೆ ಬಿದ್ದ. ಉಳಿದ ದಿನಗಳಲ್ಲಿ ಇಷ್ಟುಹೊತ್ತೆಂದರೆ ಬುಧನಿಗೆ ಆರು ತಾಸು ರಾತ್ರಿ. ಆದರೆ ಇಂದು ಸೇಬು ಹಣ್ಣಿನ ಮೂಲಕ ಅವನಿಗೆ ನಿದ್ದೆ ಹತ್ತಲಿಲ್ಲ. ತಾಯಿ ಬಲುಮೆಯಿಂದ ಅವನನ್ನು ಮಲಗಿಸಹೋಗಿದ್ದಳೇನೋ ನಿಜ; ಆದರೆ ಸಂಜೆಯ ಕಡೆಗೆ ರೈಲುಗಾಡಿಯು ಸಿಳ್ಳು ಹೊಡೆದು ಸ್ಟೇಷನ್ನಿಗೆ ಬಂದ ಕೂಡಲೇ ಆತನು ನಿದ್ದೆಯ ಸೋಗನ್ನು ತೊರೆದು, ಅಡಿಗೆಯ ಮನೆಯ ಕಡೆಗೊಮ್ಮೆ ಅಂಜುತ್ತ ನೋಡಿ, ಮನೆಯೊಳಗಿಂದ ಹೊರಗೆ ಓಡಿ ಬಂದ. ಸ್ವಲ್ಪ ದೂರ ಹೋಗುವದರಲ್ಲಿಯೆ ತಂದೆ ಬಂದ. ತಂದೆಯನ್ನು ಕಂಡಕೂಡಲೇ ಬುಧಾ ತನ್ನ ಕೈಚಾಚಿ. "ನನ್ನ ಸೇಬುಹಣ್ಣು ಎಲ್ಲಿ ಅದ ಕೊಡಪಾ!" ಎಂದು ಕೇಳಿದ. "ಚು ಚು ಚು! ಮರೆತು ಬಂದೆನಲ್ಲೋ ಬುಧಾ; ನಾಳೆ ತಗೊಂಡು ಬರತೇನಿ, ಆಂ!" ಎಂದು ನಟವರನೆಂದ.

ನಿಮಿಷದಲ್ಲಿ ಬುಧನ ಮುಖ ಇಷ್ಟಾಯಿತು. ಒಂದು ನಿಟ್ಟುಸಿರು ಬಿಟ್ಟು "ಆತಪಾ, ಹಾಂಗs ಆಗಲಿ" ಎಂದು ಆತನೆಂದ. ನಟವರ ಹೇಳಿದ ಮಾತು ನಿಜವಾಗಿರಲಿಲ್ಲ. ದಾರಿಯಲ್ಲಿ ಬರುವಾಗ ಬುಧಾ ಹೇಳಿದ್ದು ಆತನಿಗೆ ನೆನಪಾಗಿತ್ತು. ಆದರೆ ಕಿಸೆಯಲ್ಲಿ ಒಂದು ಪೈ ಸಹ ಇರಲಿಲ್ಲ. ಆಫೀಸಿನ ಸಿಪಾಯಿಯಾದ ರಾಮಶರಣಸಿಂಹನ ಕಡೆಗೆ ನಾಲ್ಕಾಣೆ ಕೈಗಡ ಕೇಳಿದ; ಫಲವಾಗಲಿಲ್ಲ. ನಾಳೆ ನಾಲ್ಕಾಣೆ ಎಲ್ಲಿಂದ ತರಬೇಕೆಂಬುದು ನಟವರನಿಗೆ ಗೊತ್ತಿರಲಿಲ್ಲ; ಆದರೆ ಮಗನನ್ನು ಸಮಾಧಾನಪಡಿಸುವದಕ್ಕಾಗಿ ಮತ್ತೆ ಹೀಗೆ ಮಾತು ಕೊಟ್ಟ.

ಅದರ ಮರುದಿನವೂ ಬುಧಾ ಇಡೀ ದಿನ ಸಂಜೆಯ ದಾರಿಯನ್ನು ನೋಡುತ್ತಾ ಕಳೆದ. ಇಂದು ಅಪ್ಪ ಸೇಬುಹಣ್ಣು ತರುವದರಲ್ಲಿ ಅವನಿಗೆ ಎಳ್ಳಷ್ಟಾದರೂ ಸಂಶಯವಿರಲಿಲ್ಲ. ಹೊರಗಿನ ಬಾಗಿಲ ಬಳಿಯಲ್ಲಿಯೇ ಆತ ನಿಂತುಕೊಂಡಿದ್ದ. ದೂರದಲ್ಲಿಯೇ ತಂದೆಯನ್ನು ಕಂಡು ಓಡಿಹೋಗಿ, ಆತನ ಕೈಹಿಡಿದು "ಹೂಂ ಎಲ್ಲ್ಯದ ನನ್ನ ಸೇಬುಹಣ್ಣು, ಕೊಡು ಮತ್ತs" ಎಂದು ಬೇಡಿದ. ಆ ಕ್ಷಣ ನಟವರನ ಮುಖ ವಿಕೃತವಾಯಿತು. "ಓಹೋಹೋ ಇದೇ ಕಿಸೆಯಲ್ಲಿಟ್ಟಿದ್ದೆ. ಎಲ್ಲಿಯಾದರೂ

ಬಿದ್ದುಹೋಯಿತೊ ಏನೋ! ಬಿದ್ದಿರಲಿಕ್ಕೇ ಬೇಕು" ಎಂದು ಕಿಸೆಯಲ್ಲಿ ಕೈಹಾಕಿ ನುಡಿದ. ಬುಧಾನನ್ನು ಸಮಾಧಾನಪಡಿಸಲು ಇದರ ಹೊರತು ಬೇರೊಂದು ಉಪಾಯ ವಿರಲಿಲ್ಲ. ಆದರೆ ಹೀಗೆ ತನ್ನ ಮಗನನ್ನು ಠಕ್ಕಿಸುವಾಗ ಆತನ ಕಣ್ಣುಗಳಲ್ಲಿ ನೀರು ತುಂಬಿಬಂದವು.

ಬುಧಾ ತನ್ನ ತಂದೆಯ ಕೈ ಬಿಟ್ಟುಬಿಟ್ಟ. ಆಮೇಲೆ ಹಾಗೆ ಹೊರಟವ ಹಿಂತಿರುಗಿ ಬಂದು "ಅಪ್ಪಾ, ಆ ಹಣ್ಣು ಎಷ್ಟು ದೊಡ್ಡದಿತ್ತು ?" ಎಂದು ಕೇಳಿದ.

ನಟವರ ಕೈಮಾಡಿ ಏನೋ ಒಂದು ಕಲ್ಪಿತ ಪರಿಮಾಣವನ್ನು ತೋರಿಸಿದ.

"ಹಂಗಾರ ಭಾಳ ದೊಡ್ಡದಿತ್ತಪ್ಪಾ! ಇರಲಿ ನಾಳ್ಯಾರ ತಗೊಂಡು ಬರ್ತೀಯಾ ?" ಎಂದು ಬುಧಾ ಎಂದ.

ನಾಡದು ಸೋಮವಾರ, ಸಂಬಳವಾಗುವ ದಿನ. ನಟವರ ಆತನಿಗೆ "ನಾಳೆ ಆಗೋದಿಲ್ಲ, ಸೋಮವಾರ ತಗೊಂಡು ಬರತೇನಿ" ಎಂದು ಹೇಳಿದ.

"ಸೋಮಾರಾ ಅಂದ್ರ ಎಂದ್ಯ ?" ಎಂದು ಬುಧಾ ಕೇಳಿದ.

"ನಾಳೆ ಇಲ್ಲ ನಾಡದು ಸೋಮವಾರ; ಎರಡು ಹಣ್ಣು ತರತೇನಿ ಆತೋ ಇಲ್ಲೋ ?" ಎಂದು ನಟವರ ಹೇಳಿದ.

ಬುಧಾ ಹಿರಿ ಹಿರಿ ಹಿಗ್ಗಿದ. "ಹಣ್ಣು ಒಳ್ಳೆ ದೊಡ್ಡವಿರಬೇಕು. ಮತ್ತು ಕೆಂಪಾಗಿ ಇರಬೇಕು ನೋಡು" ಎಂದು ಹೇಳಿದ.

"ಒಳ್ಳೇದು" ಎಂದು ನಟವರನೆಂದ.

ಬುಧಾ ಕುಣಿಯುತ್ತ ಕುಣಿಯುತ್ತ ಮನೆಯ ಒಳಕ್ಕೆ ಬಂದು ತಾಯಿಯ ಮುಂದೆ ಹೇಳಿದ. "ಅವ್ವಾ, ಅಪ್ಪ ನನಗ ಎರಡು ಸೇಬುಹಣ್ಣು ತಂದುಕೊಡತೇನಿ ಅಂತ ಹೇಳ್ಯಾನ. ನಿನಗ ಗೊತ್ತ ಅದ್ಯ ಏನು ? ಭಾಳ ದೊಡ್ಡವೂ !"

ಅಡಿಗೆ ಮನೆಯೊಳಗಿಂದ ಬುಧಾನ ತಾಯಿ ಪತಿಯ ಕಡೆಗೆ ನೋಡಿ, "ನೋಡಿದಿರಾ, ಇನ್ನೂ ಹಣ್ಣು ಸಿಕ್ಕಿಲ್ಲ, ಈಗಲೇ ಎಷ್ಟು ಸಂತೋಷ! ನಾಳೆ ಹಣ್ಣು ಬಂದರಂತೂ ಎಷ್ಟು ಕುಣಿದಾಡುತ್ತಾನೋ ! ಕಂದಯ್ಯ !" ಎಂದು ನುಡಿದಳು.

ಸೋಮವಾರ ದಿನ ಆಫೀಸಿಗೆ ಹೋಗುವಾಗ ಪೇಟೆಯಲ್ಲಿ ಹಣ್ಣು ಮಾರುವ ಒಬ್ಬ ಕಾಬೂಲಿ ಅಂಗಡಿಗೆ ಹೋಗಿ, ಆರಿಸಿ ಆರಿಸಿ ಎರಡು ಸೇಬುಹಣ್ಣನ್ನು ತೆಗೆದು, ಅವುಗಳ ಬೆಲೆ ಗೊತ್ತು ಮಾಡಿ ಖಾನಸಾಹೇಬರಿಗೆ "ಇವೆರಡೂ ಹಣ್ಣುಗಳನ್ನು ಬೇರೆ ತೆಗೆದಿಡಿರಿ. ಆಫೀಸಿನಿಂದ ತಿರುಗಿ ಬರುವಾಗ ಇವನ್ನು ತೆಗೆದುಕೊಂಡು ಹೋಗುತ್ತೇನೆ" ಎಂದು ಹೇಳಿ ಹೋದ.

ಅಂಗಡಿಯಲ್ಲಿಯ ತುಂಬ ಸೊಗಸಾದ ಹಣ್ಣುಗಳೆರಡು ಅವು ಬಹು ದಿನಗಳಿಂದ ಹಂಬಲಿಸುತ್ತಿರುವ ತನ್ನ ಮಗನಕೈಯಲ್ಲಿ ಆತನು ಬಯಸಿದ ಹಣ್ಣುಗಳೆರಡನ್ನೂ ಹಾಕಿದಾಗ ಆತನ ಮುಖವು ಆನಂದದಿಂದ ಹೇಗೆ ಅರಳುವದೆಂಬುದನ್ನು ಕಲ್ಪನೆಯಲ್ಲಿಯೇ ನೋಡಿದಾಗ, ನಟವರನ ಸಪ್ಪಗಿನ ಮುಖದ ಮೇಲೆಯೂ ಉಲ್ಲಾಸವು ಮಿನುಗಿತು.

ಮೂರು ಹೊಡೆದ ಕೂಡಲೇ ತಿಂಗಳಿನ ಪಗಾರದ ಬಿಲ್ಲನ್ನು ತೆಗೆದುಕೊಳ್ಳುವ ದಕ್ಕಾಗಿ ಹೆಡ್‌ಕ್ಲಾರ್ಕನ ಕಡೆಗೆ ಹೋದ. ಹೆಡ್‌ಕ್ಲಾರ್ಕು ಬಿಲ್ಲನ್ನು ಆತನೆದುರಿಗೆ ಹಿಡಿದ.

ಬಿಲ್ ನೋಡಿದ ಕೂಡಲೇ ನಟವರನ ಎದೆ ಧಸಕ್ಕೆಂದಿತು. ಬಿಲ್ಲಿನ ಬದಿ ಯಲ್ಲಿ "ಕೆಲಸವನ್ನು ಪೂರ್ಣ ಮಾಡದೇ ಇದ್ದುದಕ್ಕಾಗಿ ನಟವರದತ್ತನ ತಿಂಗಳ ಪಗಾರವನ್ನು ಸದ್ಯಕ್ಕೆ ಹಿಡಿದಿಟ್ಟಿದೆ," ಎಂದು ಬರೆಯಲಾಗಿತ್ತು. ಕೆಂಪು ಪೆನ್ಸಿಲಿ ನಿಂದ ಬರೆದ ಆ ಇಂಗ್ಲೀಷ ಅಕ್ಷರಗಳು ಆತನ ಎದೆಯ ಮೇಲೆ ಒಂದು ಬಂಡೆಯ ನ್ನೆತ್ತಿ ಅಪ್ಪಳಿಸಿದಂತಾಯಿತು. ತುಸು ಹೊತ್ತು ಸ್ತಬ್ಧನಾಗಿ ನಿಂತು ಅಳುದನಿಯಲ್ಲಿ ಆತನೆಂದ: "ರಾಯರೆ."

" ನನಗೇನೂ ಮಾಡಲಿಕ್ಕೆ ಬರುವಂತೆ ಇಲ್ಲರೀ. ಸಾಹೇಬ ಬಹಳ 'ಕಾಯ್ದೇಶೀರ' ಮನುಷ್ಯನೆಂಬುದು ನಿಮಗೆ ಗೊತ್ತಿದೆಯಷ್ಟೇ ? ಬೇಕಾದರೆ ನೀವೇ ಸಾಹೇಬರ ಕಡೆಗೆ ಹೋಗಿ ಅವರನ್ನು ಭೆಟ್ಟಿಯಾಗಿ ಬನ್ನಿರಿ," ಎಂದರು ರಾಯರು.

ಬಿಲ್ಲನ್ನು ತೆಗೆದುಕೊಂಡು ನಟವರ ಅನೇಕ ವಿಧವಾಗಿ ಚಿಂತಿಸುತ್ತ ದೊಡ್ಡ ಸಾಹೇಬರ ಆಫೀಸಿನ ಬಾಗಿಲಲ್ಲಿ ಬಂದು ನಿಂತುಕೊಂಡ. ಸಿಪಾಯಿಯು ಒಳಗೆ ತಿಳಿಸಿದ ನಂತರ ಅಪ್ಪಣೆಯಾಯಿತು. " ಕಮ್ ಇನ್. "

ನಟವರನು ದೊಡ್ಡದೊಂದು ಸಲಾಮು ಮಾಡಿ ಎಂದ, " ಸರ್ ನನ್ನ ತಿಂಗಳ ಪಗಾರ — "

ಸಾಹೇಬರು ಆಗ ವಾಲ್ಟೇಯರದಲ್ಲಿರುವ ತಮ್ಮ ಹೆಂಡತಿಗೆ ಮುಂಬರುವ ಕ್ರಿಸ್‌ಮಸ್ಸಿನ ನಿಮಿತ್ತವಾಗಿ ಉಪಹಾರವನ್ನು ಕಳುಹಿಸುವ ವ್ಯವಸ್ಥೆಯಲ್ಲಿ ತೊಡಗಿ ದ್ದರು. ನಟವರನ ಎಲ್ಲ ಮಾತನ್ನು ಕೇಳುವಷ್ಟು ಅವಕಾಶವಿರಲಿಲ್ಲ. ಇಂಗ್ರೇಜಿ ಯಲ್ಲಿಯೇ ಹೇಳಿದರು, "ಅದಾಗದು, ಕೆಲಸವನ್ನು ಸರಿಯಾಗಿ ಮಾಡದಿದ್ದರೆ ಕೇಳು ವವನಲ್ಲ ನಾನು! ಹೋಗಿರಿ."

ನಟವರ ಅತ್ತುಬಿಟ್ಟ. "ಸರ್, ನಾಳೆ ಇಡೀ ರಾತ್ರಿ ಕುಳಿತು ಎಲ್ಲವನ್ನು ಮುಗಿಸಿಬಿಡುವೆನು" ಎಂದು ಹೇಳಿದ.

"ಹಾಗಾದರೆ ನಾಡದು ಪಗಾರವನ್ನು ಕೊಡಲಾಗುವದು" ಎಂದರು.

"ಸರ್, ಒಂದು ರೂಪಾಯಿ – ಕಡೆಗೆ ಎಂಟಾಣೆಯಾದರೂ ಕೊಡಲು ಅಪ್ಪಣೆ ಮಾಡಿದರೆ—"

"ನಾಟ್ ಎ ಫಾರ್ದಿಂಗ್ ಗೋ ಔಟ" ಎಂದು ಗರ್ಜಿಸಿ ಸಾಹೇಬರು ಎರಡು ಸೇಬುಹಣ್ಣಿನ ಬುಟ್ಟಿಗಳನ್ನು ಮೇಜಿನ ಮೇಲೆ ಇಟ್ಟು, ಮೇಲೆ 'ಲೇಬಲ್' ಅಂಟಿ ಸಿದರು. "ಫಾರ್ ಹ್ಯಾರೀ". "ಫಾರ್ ನೆಲೀ." ಹ್ಯಾರೀ ಸಾಹೇಬರ ಮಗ; ನೇಲೀ ಮಗಳು. ಇಬ್ಬರೂ ತಾಯಿಯ ಕೂಡ ಸ್ವಾಸ್ಥ್ಯವಾಸದಲ್ಲಿದ್ದರು.

ಒಂದು ನೀಳವಾದ ಉಸಿರನ್ನು ಬಿಟ್ಟು ನಟವರ ಹೊರಗೆ ಬಂದ. ಆ ಮೇಲೆ ಆ ಬಿಲ್ಲನ್ನು ಹೆಡ್‌ಕ್ಲಾರ್ಕನ ಕೈಯಲ್ಲಿ ಕೊಟ್ಟು "ಕೆಲಸವಾಗಲಿಲ್ಲ" ಎಂದು ಹೇಳಿದ. ಒಮ್ಮೆ ಆತನ ತಲೆಯಲ್ಲಿ ವಿಚಾರ ಬಂದಿತು — ರಾಯರ ಕೈಯಿಂದ ಒಂದು ರೂಪಾಯಿ ಕೈಗಡ ಇಸಿದುಕೊಳ್ಳಬೇಕೆಂದು. ಆದರೆ ಅಕಸ್ಮಾತ್ ಇಡೀ ಪ್ರಪಂಚದ ವಿಷಯವಾಗಿಯೆ ಆತನಿಗೆ ಏನೋ ಒಂದು ಬಗೆಯ ತಿರಸ್ಕಾರವುಂಟಾಯಿತು. ಮನಸ್ಸಿನಲ್ಲಿ ಬಂದ ವಿಚಾರವನ್ನು ಕಾರ್ಯದಲ್ಲಿಳಿಸುವ ಪ್ರವೃತ್ತಿಯುಂಟಾಗಲಿಲ್ಲ.

ದಾರಿಯಲ್ಲೆಲ್ಲ ಬುಧಾನ ಕನವರಿಕೆಯೋ ಕನವರಿಕೆ. ನಿನ್ನೆ ಆದಿತ್ಯವಾರ; ಸೋಮವಾರ ಹಣ್ಣು ತರುವೆನೆಂದು ಹೇಳಿದುದರ ನೆನಪನ್ನು ಬುಧಾ ತನಗೆ ಮತ್ತೆ ಮತ್ತೆ ಮಾಡಿಕೊಟ್ಟಿದ್ದಾನೆ. ಪಾಪ ! ಇವತ್ತು ಆತ ಇಡೀ ದಿವಸ ದಾರಿಯ ಕಡೆಗೆ ಕಣ್ಣಿಟ್ಟುಕೊಂಡು ಕುಳಿತಿರಬಹುದು. ಇಷ್ಟು ಹೊತ್ತಿಗೆ ನಿಶ್ಚಯವಾಗಿಯೂ ಅವನು ಸ್ಟೇಷನ್ನಿನ ದಾರಿಯಲ್ಲಿ ನಿಂತುಕೊಂಡು ತನ್ನನ್ನು ನಿರೀಕ್ಷಿಸುತ್ತಿರಬಹುದು. ತನ್ನನ್ನು ನೋಡಿದ ಕೂಡಲೇ ಓಡಿ ಬರುವನು. ಆಮೇಲೆ ?

ಹೀಗೆಯೇ ಯೋಚಿಸುತ್ತ ತಾನು ಪೇಟೆಗೆ ಬಂದು ಮುಟ್ಟಿದುದರ ಧ್ಯಾನವೇ ಇರಲಿಲ್ಲ. ನಟವರನಿಗೆ, ಅಕಸ್ಮಾತ್ ಯಾವನೋ ಹಾಯ್ದುದರಿಂದ ಅವನಿಗೆ ಎಚ್ಚರಾದಂತಾಯಿತು. ದಾರಿಯ ಎದುರು ಬದಿಯಲ್ಲಿಯೆ ಆ ಹಣ್ಣಿನ ಅಂಗಡಿ. ಸಾವಕಾಶವಾಗಿ ಆ ದಾರಿಯನ್ನು ದಾಟಿ ಅಂಗಡಿಯ ಎದುರಿಗೆ ನಿಂತುಕೊಂಡು ಆ ಎರಡೂ ಸೇಬುಹಣ್ಣುಗಳ ಕಡೆಗೆ ನೋಡಿದ. ಬುಧಾನ ನೆನಪಾಯಿತು. ಆಗ ಆತನಿಗೆ ಒಂದು ನಗ್ನಕಾಯ ಶಿಶುವು ಆಗ್ರಹದಿಂದ ಕೈ ಚಾಚಿ, ಆತನ ಮುಖದ ಕಡೆಗೆ ನೋಡುತ್ತ " ಅಪ್ಪಾ ಸೇಬು ? " ಎಂದು ಕೇಳುತ್ತಿರುವಂತೆ ಭಾಸವಾಯಿತು.

ಭಾವಾವೇಶದಲ್ಲಿ ನಟವರ ಅವೆರಡೂ ಹಣ್ಣುಗಳನ್ನೆತ್ತಿಕೊಂಡ.

ಮರುಕ್ಷಣದಲ್ಲಿಯೆ ಯಾವನೋ ಬಂದು ಘಟ್ಟಿಯಾಗಿ ಆತನ ಕೈ ಹಿಡಿದು " ಕಳ್ಳ ಕಳ್ಳ " ಎಂದು ಕೂಗಿದ. ಆಮೇಲೆ ಏನಾಯಿತೆಂಬುದು ಆತನಿಗೆ ತಿಳಿಯಲಿಲ್ಲ. ಪ್ರಜ್ಞೆ ಬಂದಾಗ ಆತ ಪೋಲೀಸರ " ಲಾಕಪ್ಪಿ "ನಲ್ಲಿದ್ದ.

ಐದು ಗಂಟೆಯಿಂದ ಬುಧಾ ಸ್ಟೇಷನ್ನಿನ ದಾರಿಯಲ್ಲಿ ನಿಂತುಕೊಂಡಿದ್ದ. ಆರುವರೆಯ ಗಾಡಿಯು ಭಸ್ ಭಸ್ ಎನ್ನುತ್ತ ಸ್ಟೇಷನ್ನಿಗೆ ಬಂದ ಕೂಡಲೆ ಆನಂದದಿಂದ ಆತನ ಮೈ ನವಿರಿತು. ಆಮೇಲೆ ಒಬ್ಬೊಬ್ಬರೇ ಸ್ಟೇಷನ್ನಿನೊಳಗಿಂದ ಹೊರಬಿದ್ದು ದಾರಿಯನ್ನು ಸಾಗತೊಡಗಲು ಆತನಿಗೆ ಧೈರ್ಯವುಳಿಯಲಿಲ್ಲ. ಮುಂದೆ ಮುಂದೆ ಹೋಗತೊಡಗಿದ. ದೂರವಲ್ಲಿದ್ದ ಪ್ರತಿಯೊಬ್ಬ ಮನುಷ್ಯನೂ ತನ್ನ ತಂದೆಯಂತೆ ಕಾಣಿಸುತ್ತಿದ್ದ; ಆತುರತೆಯಿಂದ ಮುಂದೆ ಬಂದು ಆ ದಾರಿಕಾರನ ಮುಖವನ್ನು ನೋಡಿ ಮತ್ತೆ ತಿರುಗಿ ಬರುತ್ತಿದ್ದ. ಹೀಗೆಯೇ ಒಂದು ತಾಸು ಹೊತ್ತು ಕಳೆದು ಕೊನೆಗೆ ದಾರಿಯಲ್ಲಿ ಓಡಾಡುವವರು ಯಾರೂ ಕಾಣದಂತಾಗಲು ನಿರಾಶನಾಗಿ

ಮೋರೆ ಒಣಗಿಸಿಕೊಂಡು ಮನೆಗೆ ಬಂದು "ಅವ್ವಾ, ಅಪ್ಪ ಇನ್ನೂ ಬರಲಿಲ್ಲ; ಬಂದಕೂಡಲೆ ನನ್ನನ್ನೆಬ್ಬಿಸಬೇಕು, ಆಂ!" ಎಂದು ಹೇಳಿ ಹಾಸಿಗೆಯ ಮೇಲೆ ಬಿದ್ದುಕೊಂಡ.

ಇದಾದನಂತರ ರಾತ್ರಿ ಒಂಬತ್ತರ ಗಾಡಿಯಿದ್ದಿತು. ಇಂದು ಪಗಾರದ ದಿನ; ಸಾಮಾನುಗಳನ್ನೆಲ್ಲ ಕೊಂಡುಕೊಂಡು ಬರಬೇಕೆಂದರೆ ತಡವಾಗಿ ಬರಬಹುದೆಂದು ಭಾವಿಸಿ ಹೈಮವತಿಯು "ಒಳ್ಳೆದು, ನೀನು ಮಲಗಿಕೋ, ಹೊತ್ತು ಆಗೇದ" ಎಂದು ಹೇಳಿದಳು.

ರಾತ್ರಿ ತನ್ನ ಹರಕು ಅಂಗಿಯ ಕಿಸೆಗಳೆರಡೂ ಸೇಬುಹಣ್ಣಿನಿಂದ ತುಂಬಿ ಉಬ್ಬಿವೆಯೆಂದು ಬುಧಾ ಕನಸು ನೋಡುತ್ತಿರುವಾಗ, ಸಬ್‌ಇನಸ್ಪೆಕ್ಟರನು ರಿಪೋರ್ಟು ಬರೆಯುವದನ್ನು ಮುಗಿಸಿ, ಕಳವಿನ ಆರೋಪದ ಮೇಲೆ ನಟವರ ದತ್ತನನ್ನು ಕೋರ್ಟಿನಲ್ಲಿ ಹಾಜರ ಮಾಡಲು ಆರ್ಡರ್ ಬರೆಯುತ್ತಿದ್ದ.

(ರವೀಂದ್ರನಾಥ ಮೈತ್ರರ ಬಂಗಾಲಿ ಕತೆಯ ಅನುವಾದ.)

—ಅನುವಾದಕ ಗೋ. ಲ. ಹಳ್ಳೆಪ್ಪನವರ.

## ಅಭ್ಯಸನಗಳು

ಪ್ರಶ್ನೆಗಳು :—

(೧) ಬುಧಾನು ಅಳುಮೋರೆ ಮಾಡುವದಕ್ಕೆ ಕಾರಣವೇನು ?

(೨) ನಟವರನ ಕಣ್ಣುಗಳಲ್ಲಿ ನೀರು ಏಕೆ ತುಂಬಿದವು ?

(೩) ಬುಧಾನು ತಂದೆಯ ಆಶ್ವಾಸನದಿಂದಲೇ ಆನಂದವನ್ನು ಹೇಗೆ ಪಡೆಯುತ್ತಿದ್ದನು ?

(೪) ಬುಧಾನ ಆನಂದ ನಟವರನ ಹೃದಯದಲ್ಲಿ ಯಾವ ಭಾವನೆಯನ್ನು ಹುಟ್ಟಿಸುತ್ತಿತ್ತು ?

(೫) ಹಣ್ಣು ಸಿಗುವದರಿಂದ ಮಗುವಿಗೆ ಆಗುವ ಸಂತೋಷದಲ್ಲಿ ನಟವರನು ಹೇಗೆ ಮೈಮರೆತನು ?

(೬) ಬುಧಾನು ಸ್ಟೇಶನಿನಲ್ಲಿ ತಂದೆಯ ದಾರಿಯನ್ನು ಹೇಗೆ ಕಾಯುತ್ತಿದ್ದನು ?

(೭) ನಟವರನು ಸೇಬು ಹಣ್ಣನ್ನು ತರಲು ಎಷ್ಟು ಬಗೆಯಿಂದ ಪ್ರಯತ್ನ ಮಾಡಿದನು?

ಭಾಷಾಭ್ಯಾಸ :—

(೧) ನಟವರನ ಸಾಹೇಬರ ಕೋಣೆಯಲ್ಲಿ ಸೇಬೂ ಹಣ್ಣಿನ ಬುಟ್ಟಿಗಳಿಟ್ಟಿದ್ದವೆಂದು ಕತೆಗಾರರು ಏಕೆ ಹೇಳಿದ್ದಾರೆ?

ಶಬ್ದವಿಚಾರ:—

(೧) ಕಣ್ಣಿಗೆ ಬೀಳು, ಸೋಗು ಹಾಕು, ವಿಕೃತವಾಗು ಇವುಗಳ ಅರ್ಥವನ್ನು ಹೇಳಿರಿ.

(೨) ಹಿರಿಹಿರಿ ಹಿಗ್ಗು — ಇದರಂತೆ ಮಿಂಚು, ತಿರುಗು, ತಿನ್ನು, ಸುರಿ, ಮರುಗು ಇವುಗಳ ಹಿಂದೆ 'ಹಿರಿಹಿರಿ' ಈ ಬಗೆಯ ಅವ್ಯಯಗಳನ್ನು ಹಚ್ಚಿ ಬರೆಯಿರಿ.

(೩) ಮುಖ – ಬಾಡು, ಕಪ್ಪಿಡು, ಅರಳು — ಇವುಗಳಲ್ಲಿರುವ ಅರ್ಥಭೇದವನ್ನು ಹೇಳಿರಿ.

ವಾಕ್‌ಶಿಕ್ಷಣ:—

(೧) ಈ ಕಥೆಯನ್ನು ನಾಟಕ ರೂಪದಲ್ಲಿ ಬರೆದು ಅಭಿನಯಿಸಿರಿ.

ಚರ್ಚೆ—

(೧) ನಟವರನು ನಿಜವಾಗಿಯೂ ಅಪರಾಧಿಯೇನು? ಅವನು ಮಾಡಿದ್ದು ಕಳವೇ?

(೨) ನಟವರನ ಮನೋವ್ಯಥೆಗೆ ಕಾರಣರಾರು? ಮಗನೇ? ಸಮಾಜವೇ? ಬಡತನವೇ? ಪ್ಯೈಗಳ್ಳತನವೇ?

(೩) ಬಡವ ಬಲ್ಲಿದರಲ್ಲಿಯ ಭೇದವೇನು?

ಬರೆಹ:—

ಪ್ಯೈತುಂಬ ಉದ್ದರಿ ಮಾಡಿಕೊಂಡವನು ಅಂಗಡಿಕಾರನನ್ನು ಸಮಾಧಾನ ಪಡಿಸುವದಕ್ಕಾಗಿ ಹೇಳುವ ಐದು ನೆವಗಳನ್ನು ಬರೆಯಿರಿ.

# ೧೯. ಬಾಳುವ ಹದ

[ಶ್ರೀ. ಶಂ. ಬಾ. ಜೋಶಿ ಅವರು ಬರೆದ 'ದಾರಿಯ ಬುತ್ತಿ'ಯಿಂದ ಎತ್ತಿಕೊಂಡ ಭಾಗವಿದು. ಕಟ್ಟಿದ ಬುತ್ತಿ, ನಿಂತ ನೀರು, ಕಲಿಕೆಯ ಮಾತು ಕೊನೆಸಾಗುವುವಲ್ಲ. ಗಿಳಿಯೋದು ನಿರರ್ಥಕ!

ಓದುಗನು ತನ್ನೊಳಗಿನ ತಿಳಿವನ್ನು ಜಾಗ್ರತಗೊಳಿಸಲು, ಸ್ವತಂತ್ರ ವಿಚಾರಶಕ್ತಿಯನ್ನು ಕುದುರಿಸಿಕೊಳ್ಳಲು ಕೆಳಗಿನ ಲೋಕಾನುಭವದ ಮಾತುಗಳನ್ನು ತಮ್ಮ ವಿಚಾರ, ವಿಮರ್ಶೆ, ಪ್ರಯೋಗಗಳಿಂದ ಬೆಳಿಸಿಕೊಳ್ಳಬೇಕು.]

## ನಿನ್ನ ನೆಲೆನೋಡು

ನಿನ್ನ ಬುದ್ಧಿವಂತಿಕೆ, ನಿನ್ನ ವಿವೇಕ, ನಿನ್ನ ಅಳವು, ನಿನ್ನ ಒಲವುಗಳು ನಿನಗೆ ಗೊತ್ತಿರಲಿ. ನಿನ್ನ ಒಡೆಯನು ನೀನಾಗಬೇಕಾಗಿದ್ದರೆ, ನಿನ್ನನ್ನು ನೀನು ಅರಿ. ಇಂದು ಆಳಾಗಿರುವ ನೀನು ಅರಿತೊಡನೆ ಅರಸಾಗುವೆ. ಮೋರೆ ನೋಡುವ ಕನ್ನಡಿಗಳಿವೆ, ಆದರೆ ಮನಸ್ಸಿಗೆ ಕನ್ನಡಿಗಳಿಲ್ಲ. ವಿಮರ್ಶಾಯುಕ್ತ ವಿಚಾರವು ಮನಸಿನ ಕನ್ನಡಿಯಿದ್ದಂತೆ. ಇದರ ನೆರವಿನಿಂದ ನಿನ್ನ ಅಂತರಂಗವನ್ನು ಅರಿತುಕೋ. ಆತ್ಮದರ್ಶನವನ್ನು ಪಡೆ. ಈ ಕನ್ನಡಿಯಿಂದ ಕಂಡ ನಿನ್ನ ಕುಂದು ಕೊರತೆಗಳನ್ನು ಹೋಗಲಾಡಿಸಿಕೊಂಡು ಪರಿಪೂರ್ಣನಾಗಲು ಹವಣಿಸು. ನಿನ್ನ ಬುದ್ಧಿಶಕ್ತಿಯನ್ನು ಆಗಾಗ ಒರೆಗೆ ಹಚ್ಚಿ, ಪರಿಕಿಸು. ಕಾರ್ಯಶಕ್ತಿಯನ್ನು ಕೆಲಸ ಕೈಕೊಂಡು ಅಳೆ. ಸಮಯಗಳನ್ನು ತಂದುಕೊಂಡು ಧೈರ್ಯದ ಅಳವನ್ನು ಅರಿ. ಎಲ್ಲ ಹೊತ್ತಿನಲ್ಲಿಯೂ ನಿನ್ನ ತಲೆ ತಣ್ಣಗಿಟ್ಟು, ತಿಳಿದುನೋಡು. ಇಂತು ಬಲ್ಲಿದನೂ ಬಲವಂತನೂ ಆದ ಬಲ್ಲಾಳಾಗು. ಇದುವೆ ನಿನ್ನ ಗೆಲುವಿನ ಹೆದ್ದಾರಿ.

## ಗಡಿಬಿಡಿ

ಗಡಿಬಿಡಿ ಬೇಡ. ಗಡಿಬಿಡಿ—ಅಸವಸ—ಕಸಿವಿಸಿಗಳು ಕೊನೆಗಾಲದ ಅವಲಕ್ಷಣಗಳು. ಗಡಿಬಿಡಿ ಮನೋವಿಕೃತಿಯು ಹೆಗ್ಗುರುತು. ತಾಳ್ಮೆಯಿಂದೊಡ ಗೂಡಿದ ಉದಾರ ಹೃದಯವೇ ತಡೆಯಬಲ್ಲುದು. ಅಸಹನೆಯು ಅನುದಾರತೆಯ ಕುರುಹು. ಸಿಡುಕಿನವರು ತಡೆಯಲಾರರು;—ತಾಳಲಾರರು. ತಡೆಯಲು ತಂಗ ಬೇಕು; ತಂಪು ಬೇಕು. ಸಡಿಲಿದ್ದರೆ ತಡೆವುದೇನು? ತಡೆವುದಕ್ಕೆ ಬಿಗುವು ಬೇಕು; ಬಿಗುವು ಇದ್ದರೆ ಬೀಳುವ ಭಯವಿಲ್ಲ. ತಾಳಿದವನೇ ಬಾಳುವನು. ತಾಳ್ಮೆ ಇಲ್ಲದೆ ಸ್ಥೈರಣೆಯಿಲ್ಲ. ಸ್ಥೈರಣೆಯಿಲ್ಲದೆ ಸೈಪು (ಶಾಂತಿ) ಇಲ್ಲ. ಸೈಪು ಇಲ್ಲ ದವನಿಗೆ ಸುಖವಿಲ್ಲ. ಸಂತೋಷವಂತೂ ಮೊದಲೇ ಇಲ್ಲ. ಸುಖಸಂತೋಷ ಗಳನ್ನರಿಯದ ಬಾಳು ಬಾಳೆ? ಹಾಳು.

## ದೀರ್ಘಾಯುಷ್ಯದ ಗುಟ್ಟು

ಹಸಿಯದೆ ಉಣಬೇಡ; ಹಸಿದು ಉಣದಿರಬೇಡ, ಎಂಬುದು ನಿಜವಾದರೂ ಅಲ್ಪಾಯುಷ್ಯಕ್ಕೆ ಬೇರೆ ಎರಡು ಮುಖ್ಯ ಕಾರಣಗಳಿವೆ. ಒಂದು ಅಜ್ಞಾನ; ಇನ್ನೊಂದು ಅನೀತಿ. ಬದುಕುವ ಬಗ್ಗೆ ಗೊತ್ತಿಲ್ಲದ ತಿಳಿಗೇಡಿಗಳು ಹಲರು; ಬಾಯಿಕಟ್ಟಿ, ಕೈಪ ಬಿಗಿದು ಹೆಚ್ಚು ದಿನ ಬಾಳುವುದರಲ್ಲೇನು ಸೊಗಸು? ಎಂಬ ದುಂದುಗಾರರು ಕೆಲರು. ಸದಾಚಾರಕ್ಕೆ ಸುಖವು ನಿಶ್ಚಿತವಿರುವಂತೆ, ದುರಾಚಾರಕ್ಕೆ ದುಃಖವೂ ಕಟ್ಟಿಟ್ಟದ್ದೇ. ಸಂಯಮದ ಚುಕ್ಕಾಣೆಯನ್ನು ಬಿಸುಟಿ, ಪ್ರಪಂಚದಲ್ಲಿ ಪ್ರವಾಹಪತಿತರಾಗಿ ಹೊರಟವರು ಮುಳುಗುವುದರಲ್ಲಿ ಏನು ಸಂದೇಹವೇ? ಸಜ್ಜನಿಕೆಗೆ ಸಾವು ಇಲ್ಲ. ಒಳ್ಳಡೆಯ ಮೂಲಕವಾಗಿ ಆತ್ಮದ ಅಮರತ್ವದ ಅಂಶವು ದೇಹಕ್ಕೂ ದೊರೆಯುವುದು. ಸುಚರಿತರ ಆಸೆ ಆಕಾಂಕ್ಷೆಗಳು, ಅವರ ಕೃತಿಗಳು ಮಾತ್ರವಲ್ಲ, ಅವರ ಜೀವಮಾನವೂ ದೀರ್ಘಕಾಲದವರೆಗೆ ತಾಳಿ ಬಾಳುವುದು.

## ಕಲಿಯಲು ಬದುಕು—ಬದುಕಲೂ ಕಲಿ

ಬರಿ ವಿಚಾರವೇ ಬಾಳಿನಲ್ಲಿ ಸಾಲದು; ಆಚಾರವೂ ಬೇಕು. ನೆಗಳ್ತೆ (ಕೃತಿ) ಇಲ್ಲದ ಎಣಿಕೆಯು ಅರ್ಧಾಂಗ; ಎರಡೂ ಕೂಡಿದ್ದಾಗ ಪೂರ್ಣ. ದೂರಿನ ವಿಚಾರ ನಡಿಸಿದವರಿಗೆ ತಮ್ಮ ಅಡಿಯಲ್ಲಿದ್ದುದನ್ನು ಅರಿತುಕೊಳ್ಳಲು ಬಿಡುವೇ ಇರುವುದಿಲ್ಲ. ತಜ್ಞರಿಗೆ, ಜ್ಞಾನಿಗಳಿಗೆ ವ್ಯವಹಾರಜ್ಞಾನವಿರುವುದಿಲ್ಲೆಂದು ಸಾಮಾನ್ಯಜನಗಳ ಆರೋಪ ವಿದೆ. ಈ ತೆರನಾಗಿ ಸಾಮಾನ್ಯರಿಂದ ನಗಿಸಿಕೊಳ್ಳದಂತೆ ಬಾಳುವುದು ಬಲ್ಲಿದರಿಗೆ ಅಸಾಧ್ಯವೆ? ಜ್ಞಾನಕ್ಕಾಗಿ ಇರುವ ಜೀವನವು ಪವಿತ್ರವೆಂಬುದು ನಿಜ. ಆದರೆ ಜೀವನದ ಹದವು ತಿಳಿಯದ ಜ್ಞಾನವೂ ನಿಷ್ಪ್ರಯೋಜಕ.

## ನಡೆನುಡಿಯಲ್ಲಿ ನಯವಿರಲಿ

ನಯವೆ ನಿಮ್ಮನ್ನು ಮುಂದಕ್ಕೆ ಒಯ್ಯುವುದು. ನಾಲ್ವರ ಪ್ರೀತಿಗೆ ಪಾತ್ರ ರನ್ನಾಗಿ ಮಾಡುವುದು. ನಯವಿಲ್ಲದವರು, ಸುಸಂಸ್ಕೃತರೇ ಅಲ್ಲ. ಹಲವರ

ಒಲವನ್ನು ಗಳಿಸುವ ಮಂತ್ರಶಕ್ತಿಯು ನಯದಲ್ಲಿದೆ. ಉರುಟುತನವು ಹಗೆಗಳನ್ನು ಹುಟ್ಟಿಸುವುದು. ಅಜ್ಞಾನದ ಉರುಟುತನವು ತಿರಸ್ಕಾರಕ್ಕೆ ಕಾರಣವಾಗುವುದು. ಹೆಮ್ಮೆಯಿಂದ ಹುಟ್ಟಿದುದು ಹೊಟ್ಟೆಯಲ್ಲಿ ಕಿಚ್ಚನ್ನು ಹೆಚ್ಚಿಸುವುದು. ಸುಸಂಸ್ಕಾರ ವಿಹೀನತೆಯಿಂದ ತಲೆದೋರಿದುದು, 'ಕುಲಗೇಡಿ' ಎಂಬ ಹೆಸರು ತರುವುದು. ಮೊದ್ದುತನ ಅಥವಾ ಉದ್ಧಟತನಕ್ಕಿಂತ ನಯ ವಿನಯಗಳು ಎಷ್ಟಿದ್ದರೂ ಕೇಡಲ್ಲ. ನಯದಲ್ಲಿಯೂ ವೈವಿಧ್ಯವಿರಲಿ, ನಾವೀನ್ಯವಿರಲಿ. ಎಲ್ಲೆಲ್ಲಿಯೂ ಯಾವಾಗಲೂ ಒಂದೇ ತೆರನಾದ ನಯವಿದ್ದರೆ ಅದರ ಸೊಗಸು ಕಡಿಮೆಯಾಗುವುದು; ಅದರಿಂದ ತಾರತಮ್ಯವಿಹೀನತೆಯ ಆರೋಪವು ಬರುವುದು. ಎದುರಾಳಿಯೊಡನೆ ನಯದಿಂದ ಇದ್ದರೆ ಅದು ನಿಮ್ಮ ಔದಾರ್ಯಕ್ಕೆ ಸಾಕ್ಷಿ. ನಯದಿಂದ ಹಾನಿ ಕಡಿಮೆ; ಲಾಭವೇ ಹೆಚ್ಚು. ಮಾನಕೊಡುವವರೇ ಮಾನಪಡೆಯುವುದು. ನಯ-ವಿನಯ, ಮಾನ-ಮರ್ಯಾದೆಗಳನ್ನು ಬಳಸಿದಷ್ಟು ಅವು ನಿಮ್ಮಲ್ಲಿ ಉಳಿಯುವವು.

## ನಾಲ್ವರ ಬಾಯಲ್ಲಿರು

ಎಲ್ಲರಿಗೂ ಬೇಕಾದವನಾಗಲು ಸವಿನುಡಿಯೆ ಮಂತ್ರ; ನಯ ವಿನಯವೇ ಸಾಧನ. ನಿನ್ನಲ್ಲಿ ಹುದುಗಿಕೊಂಡಿರುವ, ಹಲವರಿಗೆ ಆನಂದದಾಯಕವಾದ ಶಕ್ತಿಯನ್ನು ಹೆಚ್ಚಿಸು. ಈ ಶಕ್ತಿಯ ಅಯಸ್ಕಾಂತದ ಬಲದಿಂದ ಎಲ್ಲರನ್ನೂ ನಿನ್ನೆಡೆಗೆ ಆಕರ್ಷಿಸು. ಕೆಲಸ ಸಾಧಿಸುವ ಗಡಿಬಿಡಿಗಿಂತ ಹೆರವರ ಅಂತಃಕರಣವನ್ನು ಗೆಲ್ಲುವ ಹಂಬಲವೇ ಹೆಚ್ಚಾಗಿರಲಿ. ಗುಣವೊಂದಿದ್ದರೆ ಸಾಲದು. ನಯ ವಿನಯದಿಂದ ಒಡಗೂಡಿದ ಗುಣದ ಬೆಲೆ ನೂರ್ಮಡಿ ಹೆಚ್ಚಾಗುವುದು. ಹಲವರ (ಹೃದಯದ) ಮೇಲೆ ಅಧಿಕಾರ ನಡೆಸಲು ಇದುವೆ ಮಿಗಿಲಾದ ಸಾಧನ. ಲೋಕ ಮಾನ್ಯನಾಗುವುದು ದೈವಾಧೀನ; ಆದರೂ ಮೇಲೆ ಕಾಣಿಸಿದ ಸಾಧನೆಯ ಬಲದಿಂದ ಕೆಲಮಟ್ಟಿಗಾದರೂ ಸಿದ್ಧಿಯನ್ನು ಪಡೆಯಬಹುದು. "ಯೋಗಃ ಕರ್ಮಸು ಕೌಶಲಂ." ಆದುದರಿಂದ ಇದನ್ನು ಸಾಧಿಸುವ ಕೌಶಲವೂ ಒಂದು ಯೋಗವೇ! ಸ್ವಭಾವತಃ ಒಳ್ಳೆಯದರ ಕಡೆಗೆ ಒಲವಿದ್ದವರಿಗೆ ಈ ಯೋಗವು ಇನ್ನೂ ಚೆನ್ನಾಗಿ ಫಲಿಸುವುದು. ನಿನ್ನ ಮನಸ್ಸು ವಿಶಾಲವಾಗಿ, ಎಲ್ಲರ ಹಿತವನ್ನು ಹಾರೈಸುವವನು ನೀನಾದರೆ ಎಲ್ಲರೂ ನಿನ್ನ ಹಿತಚಿಂತಕರಾಗುವರು.

## ನಾಲಗೆಯು ಕುಲವನು ಅರುಹುವುದು

ಎಲುವಿಲ್ಲದ ನಾಲಗೆ. ಬೇಕಾದತ್ತ ಹೊರಳುವುದು. ಬೇಕಾದಷ್ಟು ಗಳಹುವುದು. ಹಲ್ಲಿನ ಪಂಜರವನ್ನು ಸ್ವಲ್ಪ ಸಡಲಿಸಿದರೆ ಆಯ್ತು; ಬೇಕಾದಂತಹರ ಮೇಲೆ ಏರಿ ಹೋಗುವುದು. ಆಗ ಅದನ್ನು ತಡೆವುದೂ ಅಸಾಧ್ಯ. ದೇಹದ ಆರೋಗ್ಯವನ್ನು ನಾಡಿಯಿಂದ ತಿಳಿಯಬಹುದಾದರೆ ಜೀವಾತ್ಮನ ಯೋಗ್ಯತೆಯನ್ನು ನಾಲಗೆಯಿಂದ ಹೇಳಬಹುದು. ನಾಲಗೆಯೆಂಬ ನಾಡಿಯಿಂದ ಹೃದಯಾಂತರಾಳದೊಳಗಿನ ಎಲ್ಲ ಚಲನವಲನಗಳೂ ಗೊತ್ತಾಗುತ್ತವೆ. ಮುನಿಗಳು ಮೌನದಿಂದ ತಮ್ಮ ಬೆಲೆಯನ್ನು ಹೆಚ್ಚಿಸಿಕೊಳ್ಳುತ್ತಾರೆ. ನಾಲಗೆಯ ಮೇಲೆ ಕಣ್ಣಿದೆ. ಆದುದ

ರಿಂದ ಕಣ್ಣಿನ ಕೈಯ್ಯಲ್ಲಿ ನಾಲಗೆಯಿರಲಿ. ಕಣ್ಣು ಮುಚ್ಚಿ ನಾಲಗೆ ಹರಿಬಿಡುವುದು ಆತ್ಮಘಾತ. ಸಾಮಾನ್ಯವಾಗಿ ಈಗಿರುವ ಎರಡು ಕಣ್ಣುಗಳ ಮೇಲೊಂದು ಹಣೆ ಗಣ್ಣು (ಒಳಗಣ್ಣು) ಉಂಟು. ಅದುವೆ ತೃತೀಯ ನೇತ್ರ. ನಾಲಗೆಯ ಮೇಲಣ ಒಡೆತನವಿಲ್ಲದವನು ಇದನ್ನು ಪಡೆಯಲಾರನು. (ಮೌನಿ) ಯೋಗಿಯ ಭಾಗ್ಯವಿದು. ಆತನೇ ಮುಕ್ಕಣ್ಣನು; ಜ್ಞಾನಿ.

—ಶಂ. ಬಾ. ಜೋಶಿ.

## ಅಭ್ಯಸನಗಳು

ಪ್ರಶ್ನೆಗಳು :—

(೧) ಬುದ್ಧಿಶಕ್ತಿ, ಕಾರ್ಯಶಕ್ತಿ, ಧೈರ್ಯದ ಅಳವು ಇವುಗಳನ್ನು ಹೇಗೆ ಅಳೆದು ಕೊಳ್ಳಬೇಕು ?

(೨) ತಾಳ್ಮೆಯಿಲ್ಲದವನಿಗೆ ಸುಖವಿಲ್ಲವೇಕೆ ?

(೩) ನಮ್ಮ ಆಯುಷ್ಯವು ಏತರಿಂದ ಹಾಳಾಗುವುದು ?

(೪) ಜೀವನದಲ್ಲಿ ನಯದ ಮಹತ್ತ್ವವೇನು?

(೫) ಮುಕ್ಕಣ್ಣನು ಯಾರು ?

ಭಾಷಾಭ್ಯಾಸ :—

(೧) ನಿಮ್ಮ ಆಯುಷ್ಯದಲ್ಲಿಯೂ ನೆನಪಿಡಲರ್ಹವಾದ ಮಹತ್ತ್ವದ ಮಾತುಗಳು ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಇಲ್ಲಿ ಒಡಮೂಡಿ ನಿಂತಿರುವುದನ್ನು ನೀವು ನೋಡಬೇಕು. ಉಚಿತ ಶಬ್ದಗಳಿಂದಲೂ, ಸಣ್ಣ ಸಣ್ಣ ವಾಕ್ಯಗಳಿಂದಲೂ ಇಂತಹ ಮಾತು ಗಳನ್ನು ನೆನಪಿಟ್ಟುಕೊಳ್ಳಿರಿ.

(೨) ಸಜ್ಜನಿಕೆಗೆ ಸಾವು ಇಲ್ಲ. ಕಲಿಯಲು ಬದುಕು; ಬದುಕಲೂ ಕಲಿ. ನಾಲಿಗೆಯು ಕುಲವನ್ನು ಆರುಹುವುದು. ಈ ವಾಕ್ಯಗಳಲ್ಲಿರುವ ವಿಚಾರವನ್ನು ವಿಸ್ತರಿಸಿ ಬರೆಯಿರಿ.

ಶಬ್ದವಿಚಾರ :—

(೧) ಬುದ್ಧಿವಂತಿಕೆ, ಒಲವು, ಎಣಿಕೆ, ನೆಗಳ್ತೆ, ಸಜ್ಜನಿಕೆ, ಪರಿಕಿಸು, ತಾಳ್ಮೆ, ಗೆಲುವು, ಉರುಟುತನ, ದುಂದುಗಾರ ಇವುಗಳ ರೂಪಸಿದ್ಧಿಯನ್ನು ಹೇಳಿರಿ.

(೨) ತಡೆ — ತಾಳು; ಹೋಗು — ಹೊರಡು; ಕುನ್ನಿ — ಕರು — ಮರಿ; ಇವು ಗಳಲ್ಲಿಯ ಅರ್ಥಭೇದವನ್ನು ಹೇಳಿರಿ.

(೩) ಬಲ್ಲಾಳು, ಕುಲಗೇಡಿ, ಪ್ರವಾಹಪತಿತ, ಅಮರತ್ವ — ಇವುಗಳ ಅರ್ಥವನ್ನು ಹೇಳಿರಿ.

(೪) ಓದು, ಬದುಕು, ಕುಣಿ, ಹೊಡೆ, ಆಡು ಇವುಗಳನ್ನು ನಾಮವಾಗಿಯೂ ಮತ್ತು ಧಾತುವಾಗಿಯೂ ಉಪಯೋಗಿಸಿರಿ.

(೫) ತಿಳಿಗೇಡಿ, ಮಾನಗೇಡಿ — ಇಂತಹ 'ಕೇಡಿ' 'ಗೇಡಿ' ಯುಕ್ತ ಐದು ಶಬ್ದ ಗಳನ್ನು ಹೇಳಿರಿ.

ನಡೆ – ಒಳ್ನಡೆ — ಹೀಗೆ ಒಳ್ ಎಂಬ ವಿಶೇಷಣವನ್ನು ಹಚ್ಚಿ ಐದು ನಾಮ ಪದಗಳನ್ನು ಸಿದ್ಧಪಡಿಸಿರಿ.

ಒಲವನ್ನು ಗಳಿಸುವ ಮಂತ್ರಶಕ್ತಿಯು ನಯದಲ್ಲಿದೆ. ಉರುಟುತನವು ಹಗೆಗಳನ್ನು ಹುಟ್ಟಿಸುವುದು. ಅಜ್ಞಾನದ ಉರುಟುತನವು ತಿರಸ್ಕಾರಕ್ಕೆ ಕಾರಣವಾಗುವುದು. ಹೆಮ್ಮೆಯಿಂದ ಹುಟ್ಟಿದುದು ಹೊಟ್ಟೆಯಲ್ಲಿ ಕಿಚ್ಚನ್ನು ಹೆಚ್ಚಿಸುವುದು. ಸುಸಂಸ್ಕಾರ ವಿಹೀನತೆಯಿಂದ ತಲೆದೋರಿದುದು, 'ಕುಲಗೇಡಿ' ಎಂಬ ಹೆಸರು ತರುವುದು. ಮೊದ್ದುತನ ಅಥವಾ ಉದ್ಧಟತನಕ್ಕಿಂತ ನಯ ವಿನಯಗಳು ಎಷ್ಟಿದ್ದರೂ ಕೇಡಲ್ಲ. ನಯದಲ್ಲಿಯೂ ವೈವಿಧ್ಯವಿರಲಿ, ನಾವೀನ್ಯವಿರಲಿ. ಎಲ್ಲೆಲ್ಲಿಯೂ ಯಾವಾಗಲೂ ಒಂದೇ ತೆರನಾದ ನಯವಿದ್ದರೆ ಅದರ ಸೊಗಸು ಕಡಿಮೆಯಾಗುವುದು; ಅದರಿಂದ ತಾರತಮ್ಯವಿಹೀನತೆಯ ಆರೋಪವು ಬರುವುದು. ಎದುರಾಳಿಯೊಡನೆ ನಯದಿಂದ ಇದ್ದರೆ ಅದು ನಿಮ್ಮ ಔದಾರ್ಯಕ್ಕೆ ಸಾಕ್ಷಿ. ನಯದಿಂದ ಹಾನಿ ಕಡಿಮೆ; ಲಾಭವೇ ಹೆಚ್ಚು. ಮಾನಕೊಡುವವರೇ ಮಾನಪಡೆಯುವುದು. ನಯ–ವಿನಯ, ಮಾನ–ಮರ್ಯಾದೆಗಳನ್ನು ಬಳಸಿದಷ್ಟು ಅವು ನಿಮ್ಮಲ್ಲಿ ಉಳಿಯುವವು.

## ನಾಲ್ವರ ಬಾಯಲ್ಲಿರು

ಎಲ್ಲರಿಗೂ ಬೇಕಾದವನಾಗಲು ಸವಿನುಡಿಯೆ ಮಂತ್ರ; ನಯ ವಿನಯವೇ ಸಾಧನ. ನಿನ್ನಲ್ಲಿ ಹುದುಗಿಕೊಂಡಿರುವ, ಹಲವರಿಗೆ ಆನಂದದಾಯಕವಾದ ಶಕ್ತಿಯನ್ನು ಹೆಚ್ಚಿಸು. ಈ ಶಕ್ತಿಯ ಅಯಸ್ಕಾಂತದ ಬಲದಿಂದ ಎಲ್ಲರನ್ನೂ ನಿನ್ನೆಡೆಗೆ ಆಕರ್ಷಿಸು. ಕೆಲಸ ಸಾಧಿಸುವ ಗಡಿಬಿಡಿಗಿಂತ ಹೆರವರ ಅಂತಃಕರಣವನ್ನು ಗೆಲ್ಲುವ ಹಂಬಲವೇ ಹೆಚ್ಚಾಗಿರಲಿ. ಗುಣವೊಂದಿದ್ದರೆ ಸಾಲದು. ನಯ ವಿನಯದಿಂದ ಒಡಗೂಡಿದ ಗುಣದ ಬೆಲೆ ನೂರ್ಮಡಿ ಹೆಚ್ಚಾಗುವುದು. ಹಲವರ (ಹೃದಯದ) ಮೇಲೆ ಅಧಿಕಾರ ನಡೆಸಲು ಇದುವೆ ಮಿಗಿಲಾದ ಸಾಧನ. ಲೋಕ ಮಾನ್ಯನಾಗುವುದು ದೈವಾಧೀನ; ಆದರೂ ಮೇಲೆ ಕಾಣಿಸಿದ ಸಾಧನೆಯ ಬಲದಿಂದ ಕೆಲಮಟ್ಟಿಗಾದರೂ ಸಿದ್ಧಿಯನ್ನು ಪಡೆಯಬಹುದು. "ಯೋಗಃ ಕರ್ಮಸು ಕೌಶಲಂ." ಆದುದರಿಂದ ಇದನ್ನು ಸಾಧಿಸುವ ಕೌಶಲವೂ ಒಂದು ಯೋಗವೇ! ಸ್ವಭಾವತಃ ಒಳ್ಳೆಯದರ ಕಡೆಗೆ ಒಲವಿದ್ದವರಿಗೆ ಈ ಯೋಗವು ಇನ್ನೂ ಚೆನ್ನಾಗಿ ಫಲಿಸುವುದು. ನಿನ್ನ ಮನಸ್ಸು ವಿಶಾಲವಾಗಿ, ಎಲ್ಲರ ಹಿತವನ್ನು ಹಾರೈಸುವವನು ನೀನಾದರೆ ಎಲ್ಲರೂ ನಿನ್ನ ಹಿತಚಿಂತಕರಾಗುವರು.

## ನಾಲಗೆಯು ಕುಲವನು ಅರುಹುವುದು

ಎಲುವಿಲ್ಲದ ನಾಲಗೆ. ಬೇಕಾದತ್ತ ಹೊರಳುವುದು. ಬೇಕಾದಷ್ಟು ಗಳಹುವುದು. ಹಲ್ಲಿನ ಪಂಜರವನ್ನು ಸ್ವಲ್ಪ ಸಡಲಿಸಿದರೆ ಆಯ್ತು; ಬೇಕಾದಂತಹರ ಮೇಲೆ ಏರಿ ಹೋಗುವುದು. ಆಗ ಅದನ್ನು ತಡೆವುದೂ ಅಸಾಧ್ಯ. ದೇಹದ ಆರೋಗ್ಯವನ್ನು ನಾಡಿಯಿಂದ ತಿಳಿಯಬಹುದಾದರೆ ಜೀವಾತ್ಮನ ಯೋಗ್ಯತೆಯನ್ನು ನಾಲಗೆಯಿಂದ ಹೇಳಬಹುದು. ನಾಲಗೆಯೆಂಬ ನಾಡಿಯಿಂದ ಹೃದಯಾಂತರಾಳದೊಳಗಿನ ಎಲ್ಲ ಚಲನವಲನಗಳೂ ಗೊತ್ತಾಗುತ್ತವೆ. ಮುನಿಗಳು ಮೌನದಿಂದ ತಮ್ಮ ಬೆಲೆಯನ್ನು ಹೆಚ್ಚಿಸಿಕೊಳ್ಳುತ್ತಾರೆ. ನಾಲಗೆಯ ಮೇಲೆ ಕಣ್ಣಿದೆ. ಆದುದ

ರಿಂದ ಕಣ್ಣಿನ ಕೈಯ್ಯಲ್ಲಿ ನಾಲಗೆಯಿರಲಿ. ಕಣ್ಣು ಮುಚ್ಚಿ ನಾಲಗೆ ಹರಿಬಿಡುವುದು ಆತ್ಮಘಾತ. ಸಾಮಾನ್ಯವಾಗಿ ಈಗಿರುವ ಎರಡು ಕಣ್ಣುಗಳ ಮೇಲೊಂದು ಹಣೆಗಣ್ಣು (ಒಳಗಣ್ಣು) ಉಂಟು. ಅದುವೆ ತೃತೀಯ ನೇತ್ರ. ನಾಲಗೆಯ ಮೇಲಣ ಒಡೆತನವಿಲ್ಲದವನು ಇದನ್ನು ಪಡೆಯಲಾರನು. (ಮೌನಿ) ಯೋಗಿಯ ಭಾಗ್ಯವಿದು. ಆತನೇ ಮುಕ್ಕಣ್ಣನು; ಜ್ಞಾನಿ.

—ಶಂ. ಬಾ. ಜೋಶಿ.

## ಅಭ್ಯಸನಗಳು

ಪ್ರಶ್ನೆಗಳು :—

(೧) ಬುದ್ಧಿಶಕ್ತಿ, ಕಾರ್ಯಶಕ್ತಿ, ಧೈರ್ಯದ ಅಳವು ಇವುಗಳನ್ನು ಹೇಗೆ ಅಳೆದುಕೊಳ್ಳಬೇಕು ?

(೨) ತಾಳ್ಮೆಯಿಲ್ಲದವನಿಗೆ ಸುಖವಿಲ್ಲವೇಕೆ ?

(೩) ನಮ್ಮ ಆಯುಷ್ಯವು ಏತರಿಂದ ಹಾಳಾಗುವುದು ?

(೪) ಜೀವನದಲ್ಲಿ ನಯದ ಮಹತ್ತ್ವವೇನು?

(೫) ಮುಕ್ಕಣ್ಣನು ಯಾರು ?

ಭಾಷಾಭ್ಯಾಸ :—

(೧) ನಿಮ್ಮ ಆಯುಷ್ಯದಲ್ಲಿಯೂ ನೆನಪಿಡಲರ್ಹವಾದ ಮಹತ್ತ್ವದ ಮಾತುಗಳು ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಇಲ್ಲಿ ಒಡಮೂಡಿ ನಿಂತಿರುವುದನ್ನು ನೀವು ನೋಡಬೇಕು. ಉಚಿತ ಶಬ್ದಗಳಿಂದಲೂ, ಸಣ್ಣ ಸಣ್ಣ ವಾಕ್ಯಗಳಿಂದಲೂ ಇಂತಹ ಮಾತುಗಳನ್ನು ನೆನಪಿಟ್ಟುಕೊಳ್ಳಿರಿ.

(೨) ಸಜ್ಜನಿಕೆಗೆ ಸಾವು ಇಲ್ಲ. ಕಲಿಯಲು ಬದುಕು; ಬದುಕಲೂ ಕಲಿ. ನಾಲಿಗೆಯು ಕುಲವನ್ನು ಆರುಹುವುದು. ಈ ವಾಕ್ಯಗಳಲ್ಲಿರುವ ವಿಚಾರವನ್ನು ವಿಸ್ತರಿಸಿ ಬರೆಯಿರಿ.

ಶಬ್ದವಿಚಾರ :—

(೧) ಬುದ್ಧಿವಂತಿಕೆ, ಒಲವು, ಎಣಿಕೆ, ನೆಗಳ್ತೆ, ಸಜ್ಜನಿಕೆ, ಪರಿಕಿಸು, ತಾಳ್ಮೆ, ಗೆಲುವು, ಉರುಟುತನ, ದುಂದುಗಾರ ಇವುಗಳ ರೂಪಸಿದ್ಧಿಯನ್ನು ಹೇಳಿರಿ.

(೨) ತಡೆ — ತಾಳು; ಹೋಗು — ಹೊರಡು; ಕುನ್ನಿ — ಕರು — ಮರಿ; ಇವುಗಳಲ್ಲಿಯ ಅರ್ಥಭೇದವನ್ನು ಹೇಳಿರಿ.

(೩) ಬಲ್ಲಾಳು, ಕುಲಗೇಡಿ, ಪ್ರವಾಹಪತಿತ, ಅಮರತ್ವ — ಇವುಗಳ ಅರ್ಥವನ್ನು

(೪) ಓದು, ಬದುಕು, ಕುಣಿ, ಹೊಡೆ, ಆಡು ಇವುಗಳನ್ನು ನಾಮವಾಗಿಯೂ ಮತ್ತು ಧಾತುವಾಗಿಯೂ ಉಪಯೋಗಿಸಿರಿ.

(೫) ತಿಳಿಗೇಡಿ, ಮಾನಗೇಡಿ — ಇಂತಹ 'ಕೇಡಿ' 'ಗೇಡಿ' ಯುಕ್ತ ಐದು ಶಬ್ದಗಳನ್ನು ಹೇಳಿರಿ.

ನಡೆ – ಒಳ್ನಡೆ — ಹೀಗೆ ಒಳ್ ಎಂಬ ವಿಶೇಷಣವನ್ನು ಹಚ್ಚಿ ಐದು ನಾಮಪದಗಳನ್ನು ಸಿದ್ಧಪಡಿಸಿರಿ.

ವಾಕ್‌ಶಿಕ್ಷಣ :—

(೧) ನಿಷ್ಪ್ರಯೋಜಕ, ವುತ್ತಮ, ಅಸಾದ್ಯ, ದೈವಾದೀನ, ಯೇಕಾಂತ — ಇವುಗಳನ್ನು ತಿದ್ದಿ ಬರೆಯಿರಿ.

(೨) 'ಕಲಿಯಲು ಬದುಕು' ಈ ವಾಕ್ಯಖಂಡವನ್ನು ಉಪನ್ಯಾಸದ ಶೈಲಿಯಲ್ಲಿ ಪರಿವರ್ತಿಸಿ ಹೇಳಿರಿ.

ಚರ್ಚೆ—

(೧) ನಯ ವಿನಯಗಳು ಹೇಡಿತನದ ಲಕ್ಷಣಗಳು.

(೨) ದೀರ್ಘಾಯುಷ್ಯದ ಗುಟ್ಟು ವ್ಯಾಯಾಮದಲ್ಲಿದೆ, ಜ್ಞಾನದಲ್ಲಿಲ್ಲ.

ಬರೆಹ:—

(೧) ಈ ಪಾಠದಿಂದ ನೀವು ತಿಳಿದುಕೊಂಡ ಬಾಳುವ ಹದವನ್ನು ಸಂಗ್ರಹಿಸಿ ಬರೆಯಿರಿ.

(೨) ನಿಮ್ಮ ಒಂದು ದಿನದ ದಿನಚರಿಯನ್ನು ಬರೆದು ನಿಮ್ಮನ್ನು ನೀವು ಅರಿತು ಕೊಳ್ಳಿರಿ.

# ೨೦. ಮಂತ್ರವಾದಿ ಯೋಗೀಶ್ವರ

[ ತಮ್ಮ ಬಾಳಿನಲ್ಲಿ ಬಂದ ನಾನಾವಿಧದ ಅನುಭವ-ನೆನಹುಗಳನ್ನು ಬರೆದಿಡುವ ಪದ್ಧತಿ ಪಾಶ್ಚಾತ್ಯರಲ್ಲಿ ವಿಶೇಷವಾಗಿದೆ. ಇಂತಹ ನೆನಹುಗಳು ಮುಂದಿನ ಪೀಳಿಗೆಯವರಿಗೆ ಅವರ ಬಾಳಿನ ದಾರಿಯಲ್ಲಿರುವ ತಗ್ಗು ದಿಣ್ಣೆಗಳನ್ನು ಕಂಡುಕೊಳ್ಳಲು ತುಂಬ ಸಹಾಯಕ ವಾಗುತ್ತವೆ. ನಮ್ಮ ದೇಶದಲ್ಲಿಯೂ ಈ ಬಗೆಯಾಗಿ ತಮ್ಮ ಸ್ಮರಣೆಗಳನ್ನು ಬರೆಯುವುದಕ್ಕೆ ಇತ್ತೀಚೆಗೆ ಪ್ರಾರಂಭವಾಗಿದೆ. ರವೀಂದ್ರನಾಥ ಠಾಕೂರ, ಮಹಾತ್ಮಾಗಾಂಧಿ, ಪಂಡಿತ ನೆಹರು ಪ್ರಭೃತಿಗಳು ಈ ವಿಷಯದಲ್ಲಿ ಉತ್ತಮವಾದ ಮೇಲ್ಪಂಕ್ತಿಯನ್ನು ಹಾಕಿ ಕೊಟ್ಟಿದ್ದಾರೆ.

ನಮ್ಮ ತರುಣರಿಗೆ ತಮ್ಮ ದಿನಚರಿಯನ್ನು ಬರೆದಿಡುವ ಚಟವು ಚಿಕ್ಕಂದಿನಿಂದಲೆ ಅಂಟಿಕೊಳ್ಳುವುದು ಅವಶ್ಯಕವಾಗಿದೆ. ಪಾಶ್ಚಾತ್ಯರು ತಮ್ಮ ಮಕ್ಕಳಿಗೆ ಬಾಲ್ಯದಿಂದಲೆ ಈ ಬಗೆಯ ಡೈರಿಗಳನ್ನು ಇಡುವುದಕ್ಕೆ ಉತ್ತೇಜನ ಕೊಡುತ್ತಾರೆ.

ನಮ್ಮ ನಾಡಿನ ಗಣ್ಯ ಮಹಾವ್ಯಕ್ತಿಗಳಲ್ಲಿ ಒಬ್ಬರಾದ ಶ್ರೀ. ನವರತ್ನ ರಾಮರಾಯರು ಜೀವನ ಮಾಸಪತ್ರಿಕೆಯಲ್ಲಿ ಬರೆದ ಅವರ ನೆನಹುಗಳಿಂದ ಒಂದನ್ನು ಆಯ್ದುಕೊಂಡು ಇಲ್ಲಿ ಕೊಟ್ಟಿದೆ. ಇದರಲ್ಲಿ ಬರೆದ ಸಂಗತಿಗಳು ಕಟ್ಟುಕತೆಯಲ್ಲ, ವಾಸ್ತವ ಸತ್ಯ. ಪರಂಪರಾಗತ ವಾಗಿ ಬಂದ ಕೆಲವೊಂದು ಭಾವಿಕ ಕಲ್ಪನೆಗಳಿಗೆ ಜನ ಹೇಗೆ ಮೋಸ ಹೋಗುತ್ತದೆ, ಎಂಬು ದನ್ನು ಇಲ್ಲಿ ಮನಗಾಣಬಹುದು. ದೇವರು — ಧರ್ಮದ ಸೋಗಿನಲ್ಲಿ ಮೂಢ ನಂಬಿಕೆಯ ಜನರನ್ನು ಡಾಂಭಿಕರು ಹೇಗೆ ಸುಲಿಯುತ್ತಾರೆಂಬುದರ ಕಣ್ಣಾರೆ ಕಂಡ ಉದಾಹರಣವು ಇಲ್ಲಿ

ನಮ್ಮ ತಾಲೂಕಿಗೆ ಬಂಗಾರ ಮಾಡಬಲ್ಲ, ಅಲ್ಲದೆ ಅಣಿಮಾದಿ ಶಕ್ತಿಯುಳ್ಳ ಒಬ್ಬ ಯೋಗೀಶ್ವರ ಬಂದು ಪಾಳುದೇವಸ್ಥಾನಗಳಲ್ಲೋ, ಬೆಟ್ಟದ ಗುಹೆಗಳಲ್ಲೋ, ಹೊಳೆಕೆರೆಯ ತೋಪುಗಳಲ್ಲೋ ಏಕಾಕಿಯಾಗಿ ಜನಸಂಚಾರವಿಲ್ಲದ ಕ್ಷೇತ್ರಗಳಲ್ಲಿ, ಒಂದೊಂದು ದಿನವೋ, ಎರಡೆರಡು ದಿನವೋ ತಂಗಿದ್ದು, ಹೆಚ್ಚು ಜನವಿಲ್ಲದ ವೇಳೆಯಲ್ಲಿ ದೊಡ್ಡ ದೇವಸ್ಥಾನಗಳಲ್ಲಿ ಹೊಕ್ಕು ವೇದಘೋಷಣಗಳನ್ನರ್ಪಿಸಿ ಪೂಜೆ ಮಾಡಿಕೊಂಡು ತಿರುಗಾಡುತ್ತಿದ್ದಾನೆಂದು ಕೇಳಿದೆ. ಅವನ ಅಗ್ನಿಹೋತ್ರದ ಹೊಗೆಯಿಂದ ಅವನಿದ್ದ ಪುಣ್ಯಸ್ಥಳವನ್ನು ಪತ್ತೆಮಾಡಿ ಅವನ ದರ್ಶನವನ್ನು ಪಡೆದು ಕಾಣಿಕೆಗಳನ್ನು ಒಪ್ಪಿಸಿ, ಅವನ ಆಶೀರ್ವಾದವನ್ನು ಅನೇಕರು ಪಡೆಯುತ್ತಿದ್ದರೆಂದು ಕೇಳಿದೆ. ಅವನಿಗೆ ಹಣಕಾಸುಗಳ ಮೇಲೆ ಸ್ವಲ್ಪವೂ ಮಮತೆ ಇಲ್ಲವೆಂತಲೂ, ತನಗೆ ಭಕ್ತಾದಿಗಳು ಕೊಟ್ಟದ್ದನ್ನು ಬಡಬಗ್ಗರಿಗೆ, ಮಕ್ಕಳಿಗೆ ಹಂಚಿಬಿಡುತ್ತಿದ್ದನೆಂತಲೂ ಕೇಳಿದೆ. ನನಗೆ ಪುರಾಣ, ಪುಣ್ಯಕಥೆಗಳಲ್ಲಿ ಹೊರತು ಲೋಕದಲ್ಲಿ ಸಮಲೋಷ್ಟಾನುಕಾಂಚನರಾದ ಯೋಗೀಶ್ವರರ ಪರಿಚಯ ಬಹಳ ಕಡಿಮೆ. ನನ್ನ ಜೀವನದಲ್ಲೆಲ್ಲಾ ಖಾತರಿಯಾಗಿ ಒಬ್ಬರನ್ನು, ಬಹುಶಃ ಇಬ್ಬರು ಮೂವರನ್ನು ನೋಡಿರಬಹುದು. ಆದ್ದರಿಂದ ಈ ಯೋಗೀಶ್ವರರ ಸುದ್ದಿ ಕೇಳಿದಾಗ ನಾನು ನನ್ನ ಬಳಿಯಲ್ಲಿದ್ದ ಪೋಲೀಸಿನವರಿಗೆ ಅರ್ಧ ಹಾಸ್ಯವಾಗಿ "ಈ 'ಕಲಿಗಾಲದ ಮಹರ್ಷಿ'ಗಳ ಮೇಲೆ ಸ್ವಲ್ಪ ನಿಗಾ ಇರಲಿ" ಎಂದು ಹೇಳಿದೆ. ಅವರು ಹಾಗೆ ಮಾಡಿರಬಹುದೆಂದು ಕಾಣುತ್ತೆ. ಆದರೂ ಖಾಕೀ ಧರಿಸಿದ ಮಾತ್ರದಿಂದಲೇ ಮನುಷ್ಯನ ಬುದ್ಧಿ ಬದಲಾಯಿಸುವದಿಲ್ಲವಾದ್ದರಿಂದ ಇವರ ಕಡೆಯಿಂದಲೂ ಯೋಗೀಶ್ವರನ ಅಲೌಕಿಕ ನಿಸ್ಪೃಹತೆ ಮತ್ತು ಅಮಾನುಷ ಮಹಿಮೆಯ ಕಥೆಗಳೇ ಕೇಳಿಬಂದುವು. ಯೂನಿಫಾರಂ ಭಕ್ತರ ಪೈಕಿ ಒಬ್ಬರು—

"ಭಕ್ತರು ಕೊಟ್ಟ ದುಡ್ಡನ್ನೆಲ್ಲಾ ಅವರಿಗೆ ಇವರಿಗೆ ಕೊಟ್ಟುಬಿಡುತ್ತಾರೆ. ಹೀಗೆ ಮಾಡುತ್ತೀರಲ್ಲ, ನಿಮಗೆ ಏನೂ ಉಳಿಸಿಕೊಳ್ಳಬಾರದೆ ?" ಎಂದು ಕೇಳಿದ್ದಕ್ಕೆ ಯೋಗೀಶ್ವರರು—

"ನನಗೆ ಬೇಕಾದರೆ ಚಿನ್ನ ಮಾಡಬಲ್ಲೆ, ನವರತ್ನಗಳನ್ನು ಮಾಡಬಲ್ಲೆ. ಆದರೆ ಇವೆಲ್ಲಾ ಮಣ್ಣು, ಹರಳು. ದೇವರು ಕೊಟ್ಟ ಹಾಗೆ ನೀರು, ಗಾಳಿ ನಮಗೆ ಸಾಕು!" ಎಂದರು. ಹೀಗೆಂದು ಹೇಳಿದರು.

"ಓಹೋ ! ಹಾಗಾದರೆ ಇವರು ನೀರು ಗಾಳಿಗಳ ಭಕ್ಷಣ ಮಾಡಿಕೊಂಡಿರುವ ಚಂಡತಪಸ್ವಿಗಳು" ಅಂದುಕೊಂಡೆ. ಆದರೂ ಪೋಲೀಸಿನವರ ನಿಗಾವಣೆ ಪ್ರಾರಂಭವಾದ ಮೇಲೆ ಅಲ್ಲಲ್ಲಿಂದ ಬಂದ ಬಾತ್ಮಿಗಳಲ್ಲಿ ಯೋಗೀಶ್ವರರು ಒಬ್ಬ ಬ್ರಾಹ್ಮಣ ಜೋಡಿದಾರರಿಗೆ ಭಂಗಾರ ಮಾಡುವ ತಮ್ಮ ಶಕ್ತಿಯನ್ನು ತೋರಿಸಿ ಅವರ ಮನೆಯಲ್ಲಿ ಕೆಲವು ದಿನ ಅತಿಥಿಗಳಾಗಿದ್ದು ಅವರಿಂದ ಚಿನ್ನ ಮಾಡುವ

ಸಾಮಗ್ರಿಗಾಗಿ ಹಣ ಪಡೆದರು ಎಂತಲೂ, ಇನ್ನೊಂದು ಗ್ರಾಮದಲ್ಲಿ ಹಿಂದೆ ನಿಕ್ಷೇಪ ವಾಗಿದ್ದ ನಿಧಿಯನ್ನು ಹುಡುಕಲು ಯಜ್ಞಾದಿ ಕರ್ಮಗಳನ್ನು ಸೂಚಿಸಿದರೆಂತಲೂ, ಸಾಮಾನ್ಯವಾಗಿ ಇವರಿಗೆ ವಾರಸುದಾರರಿಲ್ಲದ ಅಬಲೆಭಕ್ತರ ಮೇಲೆ ಹೆಚ್ಚು ಕರುಣ ವೆಂತಲೂ ವರ್ತಮಾನಗಳು ಬರಹತ್ತಿದುವು. ನಾನು ಪೋಲೀಸ್ ಇನ್ಸ್‌ಪೆಕ್ಟರರನ್ನು ಕರೆದು, "ಈ ರಾವಣ ಸಂನ್ಯಾಸಿಯ ಕಥೆ ಹಾಸ್ಯಕ್ಕೆ ಮೀರುವುದಕ್ಕೆ ಮುಂಚೆಯೇ ನೀವು ಅವನನ್ನು ಪತ್ತೆ ಮಾಡಿ ಬಯಲಿಗೆ ಎಳೆಯುವ ತರದೂದು ಮಾಡಬೇಕು. ಕಾಗಮ್ಮ ಗುಬ್ಬಮ್ಮನ ಕಥೆಗಳನ್ನು ವೇದವಾಕ್ಯವೆಂದು ನಂಬುವ ಸಣ್ಣ ನವಕರರಿಗೆ ಈ ತನಿಖೆಯನ್ನು ಬಿಡಬಾರದು" ಎಂದು ಎಚ್ಚರಿಸಿದೆ. ಪೋಲೀಸ್ ನಿಗಾ ಸ್ವಲ್ಪ ತೀವ್ರವಾದ ಮೇಲೆ ಯೋಗೀಶ್ವರರು ಸ್ವಲ್ಪ ಬೆದರಿದರೆಂದು ಕಾಣುತ್ತಿದೆ. ಒಂದು ದಿನ ನಾನು ಶ್ರೀ ಗುಂಜಾ ನರಸಿಂಹಸ್ವಾಮಿ ದೇವಸ್ಥಾನಕ್ಕೆ ಹೋದಾಗ ಪ್ರಾಕಾರ ದಲ್ಲಿನ ಒಳಮಂಟಪದಲ್ಲಿ ಕೂತಿದ್ದ, ಕಾವಿಬಟ್ಟೆಯನ್ನು ಧರಿಸಿದ್ದ ಒಂದು ವ್ಯಕ್ತಿ ಯನ್ನು ನೋಡಿದೆ. ಅದು ಸುಮಾರು ೪೦–೫೦ ವರ್ಷದ ಒಳ್ಳೇ ಧಾಂಡಿಗ ಪುರುಷ ವ್ಯಕ್ತಿಯಾಗಿತ್ತು. ರಕ್ತಭರಿತವಾದ ಕೆಂಪನೆಯ ಮುಖ, ಕಪ್ಪಾದ ತಲೆಕೂದಲು, ಗಡ್ಡ ಮೀಸೆಗಳು. ಈ ಸಿಂಹಾಕಾರವು ಗಾಳಿ ಕುಡಿದಿದ್ದರಿಂದ ಬರತಕ್ಕದ್ದಲ್ಲ. ಅವನು ನನ್ನ ಕಡೆ ನೋಡಿ, ನನಗೆ ಬರುವಂತೆ ಸನ್ನೆ ಮಾಡಿದ. ನಾನು "ಇಲ್ಲೇ ಬನ್ನಿ," ಅಂತ ಘಟ್ಟಿಯಾಗಿ ಹೇಳಿದೆ. ಎದ್ದು ಬಂದು, "ನಾನು ತಮ್ಮನ್ನು ನೋಡಿ ರಹಸ್ಯವಾಗಿ ಮಾತನಾಡತಕ್ಕದಿದೆ. ಯಾವಾಗ ಬರಲಿ?" ಎಂದು ತಮಿಳು ಭಾಷೆ ಯಲ್ಲಿ ಕೇಳಿದನು. ನಾನು ಅವನಿಗೆ—

"ಈಗ ನಾನು ಮನೆಗೆ ಹೋಗುತ್ತೇನೆ. ಇನ್ನು ಅರ್ಧಗಂಟೆ ಬಿಟ್ಟುಕೊಂಡು ಬರಬಹುದು." ಎಂದು ಹೇಳಿ ಮನೆಗೆ ಬಂದುಬಿಟ್ಟೆ.

ಅರ್ಧಘಂಟೆ ಹೊತ್ತು ಬಹಳ ಕುತೂಹಲದಿಂದ ಕಾದ ಬಳಿಕ, ಯೋಗೀ ಶ್ವರನು ಬಂದ. ಆತನನ್ನು ನನ್ನ ಕೊಠಡಿಯೊಳಗೆ ಬರಮಾಡಿಕೊಂಡು ಕೂಡಿಸಿ ಕೊಂಡೆ. ಇಬ್ಬರೂ ಸ್ವಲ್ಪ ಹೊತ್ತು ಸುಮ್ಮನಿದ್ದ ಮೇಲೆ ನಾನು, "ನನ್ನನ್ನು ನೋಡ ಬಯಸಿದ ಕಾರಣವೇನು?" ಎಂದು ಕೇಳಿದೆ.

ಅವನು ಬಹಳ ಗಾಂಭೀರ್ಯದಿಂದ, ತಮಿಳಿನಲ್ಲಿ "ನಿಮ್ಮ ತಾಲೂಕಿನ ಪೋಲೀಸಿನವರು ಜನಗಳ ತಾರತಮ್ಯ ತಿಳಿಯದೆ ಸಣ್ಣ ಜನಗಳ ಮಾತನ್ನು ಕೇಳಿ ಕೊಂಡು ನಮ್ಮ ಗೌರವಕ್ಕೆ ತಕ್ಕದ್ದಲ್ಲದ ಕಿರುಕಳವನ್ನು ಕೊಡುತ್ತಾರೆ. ಇದು ತಮ್ಮ ಕೀರ್ತಿಗೂ, ಶ್ರೇಯಸ್ಸಿಗೂ ಹಾನಿಕರ. ತಾವು ಸತ್ಕುಲ ಪ್ರಸೂತರು. ಅವರಿಗೆ ಕರೆಸಿ ಬುದ್ಧಿ ಹೇಳಿ" ಎಂದನು.

ನಾನು, ಕೋಪದಿಂದ ಬೆರಕೆಯಾದ ಹಾಸ್ಯದಿಂದ, ಕನ್ನಡದಲ್ಲಿ, "ಅಷ್ಟು ದೊಡ್ಡ ಅಂತಸ್ತಿನ ಮಾತು ಬಿಡಿ. ನನ್ನ ಕುಲ, ಜಾತಿ ಕಟ್ಟಿಕೊಂಡು ನಿಮಗೇನು? ನೀವು ಯಾರು? ಎಲ್ಲಿಂದ ಬಂದಿರಿ? ನಿಮ್ಮ ತಮಿಳು ನೋಡಿದರೆ ಶ್ರೀವೈಷ್ಣವರು

ಇದ್ದಹಾಗೆ ಕಾಣುತ್ತೀರಿ. ನಿಮ್ಮ ಮೈಕಟ್ಟು ವ್ರತ ಉಪವಾಸಗಳಿಂದ ಕೃಶವಾಗಿರುವ ಹಾಗೆ ಕಾಣೋದಿಲ್ಲ. ನೀವು ಚಿನ್ನ ಮಾಡ್ತೀರಂತೆ, ಇದು ನಿಜವೇ ? ನಿಧಿ ನಿಕ್ಷೇಪ ಗಳನ್ನು ಪತ್ತೆ ಮಾಡಿ ಕೊಡ್ತೀರಂತೆ, ಇದು ನಿಜವೋ ?" ಎಂದು ಕೇಳಿದೆ.

ಮನುಷ್ಯ ಉಪ್ಪರಿಗೆಯಿಂದ ಇಳಿದು ನೆಲಮಟ್ಟಿಗೆ ಬಂದ.

"ಚಿನ್ನ ಮಾಡುವುದು ಅಸಾಧ್ಯವೆಂದು ಈಗಿನ ಕಾಲದ ವಿಜ್ಞಾನಶಾಸ್ತ್ರ ಓದಿ ರುವ ತಮ್ಮಂಥಾವರ ನಂಬಿಕೆ. ತಮ್ಮ ಜೊತೆಗೆ ವಾದಿಸಿದ್ದರಿಂದ ಪ್ರಯೋಜನ ವೇನೂ ಕಾಣಲಿಲ್ಲ. ಗ್ರಾಮಸ್ಥರನೇಕರು ನನ್ನಲ್ಲಿ ಯಕ್ಷಿಣಿ ಅಣಿಮಾದಿ ಶಕ್ತಿಯಿದೆ ಎಂದು ಅವರವರಿಗೆ ಬೇಕಾದ ವಸ್ತುಗಳನ್ನು ನನ್ನಲ್ಲಿ ಬೇಡುತ್ತಾರೆ. ಅದಕ್ಕೆ ನಾನು ಜವಾಬ್ದಾರನಲ್ಲ. ತಮ್ಮಲ್ಲಿ ಒಂದು ಮಾತನ್ನು ಮಾತ್ರ ಹೇಳುತ್ತೇನೆ. ನಾನು ಆಯುರ್ವೇದದಲ್ಲಿ ಸಂಪೂರ್ಣ ವಿದ್ಯೆ ಉಳ್ಳವನಾಗಿದ್ದೇನೆ. ತಮಗೆ ಅಪೂರ್ವವಾದ ಒಂದು ಲೇಹವನ್ನು ಮಾಡಿಕೊಡುತ್ತೇನೆ. ಅದರಲ್ಲಿ ಮುತ್ತು, ಭಂಗಾರ, ಹವಳ, ರಸ ಮೊದಲಾದ ಅಮೂಲ್ಯ ಪದಾರ್ಥಗಳು ಸೇರಿರುತ್ತವೆ. ಹದಿನೈದು ದಿವಸ ಅದನ್ನು ಸೇವಿಸಿದರೆ ಅದರ ಗುಣ ತಮಗೇ ಗೊತ್ತಾಗುತ್ತದೆ. ಹದಿನೈದು ದಿವಸದ ಔಷಧಕ್ಕೆ ನೂರು ರೂಪಾಯಿ ಲಾಗೋಡಾಗುತ್ತೆ" ಎಂದ.

"ಯಾವಾಗಲೂ ಖಾಯಿಲೆ ಬೀಳದಿದ್ದವನಾದರೂ ಒಬ್ಬಿಬ್ಬರು ಮಹಾ ಪಂಡಿ ತರನ್ನು ನೋಡಿದ್ದೇನೆ. ನಮ್ಮೂರಾದ ದೇವನಹಳ್ಳಿಯಲ್ಲಿ ಕುಂಟೆ ಕೃಷ್ಣಪಂಡಿತರು ಎಂದಿದ್ದರು. ಅವರು ಪ್ರಖ್ಯಾತರು. ನಮ್ಮೂರ ಕವಿ ನಾರಾಯಣ ಶಾಸ್ತ್ರಿಗಳು ಅವರ ವಿಚಾರದಲ್ಲಿ ಈ ಬಂಧವನ್ನು ರಚಿಸಿರುವರು.

"ಕುಂಟು ಕೃಷ್ಣ ಮಾತ್ರೆ, ವೈಕುಂಠ ಯಾತ್ರೆ !" ಎಂದು. ಇನ್ನೊಬ್ಬರು ಸಿದ್ದೆ ಕಟ್ಟೆಯಲ್ಲಿ ಪಂಡಿತರಿದ್ದರು. ಹೆಸರು ಮರೆತೆ; ಅವರಣ್ಣಂದಿರು ಅಪರ ಪ್ರಯೋಗ ದಲ್ಲಿ ಪ್ರಚಂಡರು. ಅವರಿಗೆ 'ಪ್ರೇತರಾಜರು' ಎಂತಲೇ ಜನ ಹೆಸರಿಟ್ಟಿದ್ದರು. ಅಣ್ಣ ತಮ್ಮಂದಿರಲ್ಲಿ ಒಟ್ಟು ಕುಟುಂಬದ ಸಹಕಾರ ಬಹಳ ಚೆನ್ನಾಗಿತ್ತೆಂದು ಕೇಳಿದ್ದೇನೆ. ನೀವು ನನಗೆ ಮಾಡಿಕೊಡುವ ಲೇಹ್ಯವು ನನ್ನನ್ನು ಸುಖದಿಂದ ಪಾರು ಮಾಡ ತಕ್ಕಂಥಾದ್ದೋ ಹ್ಯಾಗೆ ?" ಎಂದು ಕೇಳಿದೆ.

ಅವರು ಹೇಳಿದ್ದು —ತಮ್ಮ ಲೇಹ್ಯದಲ್ಲಿ, ವಂಗ ದೇಶದ ಎರಡನೆಯ ದರ್ಜೆ ಪತ್ರಿಕೆಗಳಲ್ಲಿ ಸಾಮಾನ್ಯವಾಗಿ Advertise ಮಾಡುವ Royal yacooti ಸಿದ್ಧಿಕಲ್ಪ ಮಕರಧ್ವಜ, ಊನಿಂತೈಲ, ಕಾಮ ವರ್ಧಿನಿ ಮೊದಲಾದ ಮಹೌಷಧಿ ಗಳಿಗೆ ನೂರು ಮಡಿ ಮಿಗಿಲಾದ ಶಕ್ತಿಯುಳ್ಳ ಔಷಧಿಗಳಿವೆ ಎಂದು.

ನಾನು — "ಇಂಥ ಅಮೃತ ನವನೀತವನ್ನು ಕ್ಲುಪ್ತ ಕಳತ್ರದ ಬಡ ಬ್ರಾಹ್ಮಣ ನಾದ ನನಗೆ ಕೊಟ್ಟರೇನು ಫಲ ? ಅದನ್ನು ತಾವು ಹೈದರಾಬಾದಿನ ನೈಜಾಮರ ಅಥವಾ ಇತರ ಪ್ರಖ್ಯಾತ ನವಾಬರುಗಳ ಬಳಿಗೆ ಹೋಗಿ, ಅವರಿಗೆ ಸಮರ್ಪಿಸಿದರೆ ಅವರಿಂದಲೂ, ಮುಖ್ಯವಾಗಿ ಅವರ ಅಂತಃಪುರದ ನಿವಾಸಿಗಳಿಂದಲೂ ಮಹದೈಶ್ವರ್ಯ

ವನ್ನೂ ಬಹುಮಾನ ಪತ್ರಿಕೆಗಳನ್ನೂ ಪಡೆಯಬಹುದು". ಎಂದು ಹೇಳಿ ಆ ಮೇಲೆ ಕೋಪದ ಧ್ವನಿಯಲ್ಲಿ,

"ಈ ಹರಟೆ ಸಾಕು. ಇಂಥಾದ್ದಕ್ಕೆಲ್ಲಾ ನಾನು ಮರುಳಾಗತಕ್ಕವನಲ್ಲ. ಇದು ವರೆಗೆ ನೀವೇನೇನು ಮಾಡಿದ್ದೀರೋ ನನಗೆ ಇನ್ನೂ ಸರಿಯಾಗಿ ತಿಳಿಯದು. ನಿಮ್ಮಿಂದ ಯಾರಿಗಾದರೂ ಕೆಡಕಾಯಿತೆಂದು ತಿಳಿದರೆ ಅದರ ಫಲವನ್ನು ತಡವಿಲ್ಲದೆ ಅನುಭವಿಸುತ್ತೀರಿ. ನಿಮ್ಮ ಸ್ಥಳವಾವುದು ? ಅಲ್ಲಿಗೆ ವಾಪಸು ಹೋಗುವುದು ಕ್ಷೇಮ. ಇಲ್ಲಿಯ ಹವ— ನೀವು ಗಾಳಿ ಕುಡಿದು ಜೀವಿಸುತ್ತೀರಂತೆ – ನಿಮಗೆವಂಟುವುದಿಲ್ಲ. ಇನ್ನು ಹೋಗಿ" ಎಂದು ಕಳುಹಿಸಿಬಿಟ್ಟೆ.

ಇದಾದ ಎರಡು ನೂರು ದಿನಗಳ ತರುವಾಯ ತಲಕಾಡಿನ ಪ್ರಖ್ಯಾತ ಸಾಹುಕಾರರೂ ಜಮೀನ್‌ದಾರರೂ ಆದ ಶಿವಬಸವದೇವರೆಂಬುವರು ನನ್ನನ್ನು ನೋಡಲಿಕ್ಕೆ ಬಂದರು. ಏನು ಸಮಾಚಾರವೆಂದು ಕೇಳಲಾಗಿ ಬಹಳ ಸಂಕೋಚದಿಂದ ಅವರು ಹೇಳಿದ ಕಥೆ ಇದು — ಹೇಳುವ ಸೌಲಭ್ಯಕ್ಕಾಗಿ ಸಾಧ್ಯವಾದ ಮಟ್ಟಿಗೆ ಅವರ ಬಾಯಿಯಿಂದ ಬಂದಂತೆಯೇ ಹೇಳುತ್ತೇನೆ.

"ಕೆಲವು ದಿನಗಳ ಹಿಂದೆ ನಮ್ಮ ಕೋಟಿ ಕನ್ಯಾದಾನ ತಾತಾಚಾರ್ರು ನನ್ನಲ್ಲಿ ಬಂದು ಹಾ – ಹೂ – ಅಂತ ಹೇಳಲಾರದೆ ಒಂದು ಸಂಗತಿಯನ್ನು ಹೇಳಿದರು. ಮೇಲುಕೋಟೆ ಯೋಗೀಶ್ವರರೊಬ್ಬರು ಅವರ ಮನೆಯಲ್ಲಿ ತಂಗಿಕೊಂಡಿದ್ದಾರೆ. ಅವರು ಚಿನ್ನವನ್ನು ಮಾಡುತ್ತಾರಂತೆ, ಅವರಿಗೆ ಚಿನ್ನ ಮಾಡುವ ಸಾಮುಗ್ರಿಗಾಗಿ ನೂರು ರೂಪಾಯಿ ಮೊದಲು ಬೇಕಂತೆ, ಕೂಡಲೇ. ನೀವು ನನ್ನ ಆಪ್ತರು. ನಾನು ಶುದ್ಧ ವೈದಿಕ, ಅಲ್ಲದೆ ತಾಪತ್ರಯ ಮನುಷ್ಯ, ನಿಮಗೆ ಗೊತ್ತೆ ಇದೆಯಲ್ಲ— ಅಂದರು. ಪಾಪ, ದೊಡ್ಡ ಸಂಸಾರಿಗಳು, ಚೆನ್ನಾಗಿ ಬಾಳಿದವರು, ನಾನು ಆ ಯೋಗಿಯನ್ನು ಕರೆದುಕೊಂಡು ಬನ್ನಿ, ಅಂದೆ. ಆ ಮನುಷ್ಯ ಸ್ವಲ್ಪ ದರ್ಪದೋನು; ನಾನೇ ಹೋದೆ. ಅವನು–ತಾವು ಚಿನ್ನವನ್ನು ಮಾಡುವುದುಂಟು; ಮಾಡುವುದಕ್ಕೆ ಮುಂಚೆ ವ್ರತ, ಹಿರಣ್ಯಹೋಮ, ಪೂಜೆ, ಇವುಗಳೆಲ್ಲ ಅವಶ್ಯಕ; ಅಲ್ಲದೆ ಸಾಮುಗ್ರಿಗಳಿಗೆ ಸ್ವಲ್ಪ ಖರ್ಚು ಹಿಡಿಯುತ್ತೆ; ತಮ್ಮ ಮಾತನ್ನು ನಿದರ್ಶನ ವಿನಹ ನಂಬಬೇಕಾಗಿಲ್ಲ; ಮೊದಲು ಸ್ವಲ್ಪ ಚಿನ್ನವನ್ನು ಮಾಡಿಸಿ ನೋಡಿ, ಆಮೇಲೆ ತಮಗೆ ಖಾತ್ರಿಯಾದರೆ ಮಣಗಟ್ಲೆ ಮಾಡಿಸಬಹುದು—ಎಂದನು. ನಾನು ಹಾಗಾದರೆ ಒಂದು ತೊಲ ಚಿನ್ನವನ್ನು ಮೊದಲು ಮಾಡಿ ತೋರಿಸಿ; ಅದನ್ನು ನಾನು ನೋಡಿ ನಂಬಿದ ಮೇಲೆ ಮಣವಲ್ಲದಿದ್ದರೆ ಖಂಡಿಗಟ್ಟಲೆ ಮಾಡುವಿರಂತೆ ಅಂದೆ.

ಅವರು ಖರ್ಚಿಗಾಗಿ ನೂರು ರೂಪಾಯಿಗಳನ್ನು, ಕೇಳಿದರು. ನಾನು ತಪಶೀಲನ್ನು ಕೇಳಿದೆ. ಏನೇನೋ ಚಿಲ್ಲರೆ ಸಾಮಾನು ಇಪ್ಪತ್ತು ರೂಪಾಯಿ, ಗಂಧರ್ವ ಭಸ್ಮಕ್ಕೆ ಎಂಬತ್ತು ರೂಪಾಯಿ ಅಂತ ಪಟ್ಟಿ ಕೊಟ್ಟರು. ಗಂಧರ್ವ ಭಸ್ಮ ಅಂದರೆ ಏನು ? ಅಂತ ಕೇಳಿದೆ. ಅದು ರಹಸ್ಯ, 'ಗುರು ಉಪದೇಶ,' ನಿಮಗೆ ಹೇಳುವು

ದಕ್ಕೆ ಆಗುವುದಿಲ್ಲ ಅಂದರು. ಹಾಗೆ ಆಗಲಿ ಸ್ವಾಮಿ ಅಂದು ನೂರು ರೂಪಾಯಿ ಕೊಟ್ಟೆ. ಕೆಲವು ದಿನಗಳಾದ ಮೇಲೆ ಅವರು ನಮ್ಮ ಮನೆಗೆ ಬಂದು, "ನಿಮ್ಮ ತೋಟದಲ್ಲಿ ಇರುವ ಜೋಪಡಿಯಲ್ಲಿ ಅಗ್ನಿ ಕುಂಡ ಹಾಕಿ, ಹೋಮ ಮಾಡಿ, ಚಿನ್ನ ಮಾಡುತ್ತೇನೆ" ಅಂದರು. ಹಾಗೆ ಆಗಲಿ ಅಂತ ಅವರು ಹೇಳಿದ ಏರ್ಪಾಟು ಗಳನ್ನೆಲ್ಲಾ ಮಾಡಿದೆ. ನಮ್ಮ ತೋಟದ ಮನೆಯಲ್ಲಿ ದೊಡ್ಡದಾಗಿ ಮಂಡಲಕಟ್ಟಿ ಒಂದು ಅಗ್ಗಿಷ್ಟಿಕೆಯನ್ನಿಟ್ಟು ಬೆಂಕಿ ಹತ್ತಿಸಿ ಹಾಂ! ಹೂಂ! ಅಂತ ಏನೇನೋ ಮಂತ್ರಗಳನ್ನು ಹೇಳಿ ಬೆಂಕಿಯಲ್ಲಿ ಒಂದು ಮೂಸೆಯನ್ನಿಟ್ಟು ಅದರಲ್ಲಿ ಕೆಲವು ಉಪ್ಪುಗಳನ್ನು, ತಾಮ್ರದ ತಂತಿಚೂರುಗಳನ್ನು ಹಾಕಿ, ಮಂತ್ರ ಹೇಳುತ್ತಲೆ ತಮ್ಮ ಸೊಂಟದಲ್ಲಿ ಅಡಕಿಸ್ದ ಒಂದು ಡಬ್ಬಿಯನ್ನು ತೆಗೆದು ಅದರೊಳಗಿಂದ, ಬೂದಿ ಯಂತೆ ಕಾಣುತ್ತಿದ್ದ, ಒಂದು ಪುಡಿಯನ್ನು ಮೂಸೆಯಲ್ಲಿ ಹೊಯ್ದರು. ಅದನ್ನು ಗಮನಿಸಿ ನೋಡುತ್ತಿದ್ದ ನನಗೆ ಗಸಗಸೆ ಕಾಳಿನ ಪ್ರಮಾಣದ ರವೆಗಳು ಇದ್ದಂತೆ ಕಂಡಿತು. ನಾನು ಹುಡುಗನಾಗಿದ್ದಾಗ ಭಂಗಾರದ ರೇಖಿಗೆ ಪಾದರಸ ಹಾಕಿ ಒಂದು ಸಲ ತಿಕ್ಕಿದ್ದೆ. ಅದರಲ್ಲಿ ಇದೇ ತರಹದ ರಸದ ರವೆಗಳು ಇದ್ದದ್ದು ನನಗೆ ಜ್ಞಾಪ ಕಕ್ಕೆ ಬಂತು. ಇವರ ಉಪಾಯ ನನಗೆ ಗೊತ್ತಾಯಿತು. ಮೊದಲು ನಮಗೆ ನಂಬಿಕೆ ಹುಟ್ಟಿಸಲು, ಚಿನ್ನದ ರೇಖು ಪಾದರಸ ತಿಕ್ಕಿ, ಭಸ್ಮಮಾಡಿ, ಪುಟಹಾಕಿ, ಅದೇ ಚಿನ್ನವನ್ನು ನಮಗೆ ತೆಗೆದು ತೋರಿಸುವುದು! ನಮಗೆ ನಂಬಿಕೆ ಹುಟ್ಟಿದ ಮೇಲೆ ನಮ್ಮಿಂದ ದುಡ್ಡು ಎಳೆಯುವುದು, ಇದೇ ಇವನ ಯಕ್ಷಿಣಿ ಅಂತ ಗೊತ್ತಾಯಿತು. ಅವನು ಹಾಕಿದ ಪುಟ ಪೂರೈಸಿದ ಮೇಲೆ ಕಾವಿಗೆ ರಸವೆಲ್ಲಾ ಆರಿ ಹೋಗಿ, ಒಂದು ಹೆಸರು ಕಾಳಿನಷ್ಟು ಚಿನ್ನ ಮೂಸೆಯಲ್ಲಿ ಉಳಿದಿತ್ತು.

"ನೋಡಿದ್ರಾ!" ಅಂದ ಆತ.

ನಾನು "ನೋಡಿದೆ ಗುರುಗಳೇ! ಇದು ನಾ ಕೊಟ್ಟ ದುಡ್ಡಿನಿಂದ ಆದ ಚಿನ್ನ ತಾನೇ, ಇಲ್ಲಿ ಕೊಡಿ" ಅಂತ ಇಸಿದುಕೊಂಡೆ. ಆ ಮೇಲೆ ಅವನನ್ನು ನಮ್ಮ ಮನೆಗೆ ಕರೆದುಕೊಂಡು ಹೋಗಿ ನನ್ನ ಕಬ್ಬಿಣದ ಪೆಟ್ಟಿಗೆಯ ಬಾಗಿಲು ತೆಗೆದು ಅದರಲ್ಲಿದ್ದ ನಾಲ್ಕು ಸಾವರನ್ ಚೀಲಗಳನ್ನು ತೋರಿಸಿ,

"ಅಯ್ಯೋ ಪಾಪಿ! ನಿನಗೇನು ಚಿನ್ನ ಮಾಡೋಕೆ ಬರುತ್ತೆ? ಇದು ನೋಡು, ನಾನು ಮಾಡಿದ ಚಿನ್ನ. ಇನ್ನು ನಡೀ ಸಾಕು. ಊರಲ್ಲಿದ್ರೆ ಪೋಲೀಸರಿಗೆ ಹಿಡಿದು ಕೊಡುತ್ತೇನೆ" ಅಂತ ಹೇಳಿ ಮನೆಯಿಂದ ಆಚೆಗೆ ಓಡಿಸಿಬಿಟ್ಟೆ. ಆಮೇಲೆ ಈ ಮನುಷ್ಯ ಎಷ್ಟು ಜನಕ್ಕೆ ಮೋಸ ಮಾಡಿಯಾನೋ? ಇವನಿಗೆ ಸರಿಯಾದ ಬೆಸೆ ಮಾಡಲಿಕ್ಕೆ ತಮಗೆ ತಿಳಿಸಬೇಕು ಅಂತ ತೋರಿತು, ಬಂದೆ."

ನಾನು ಪೋಲೀಸು ಇನ್‌ಸ್ಪೆಕ್ಟರರನ್ನು ಕರೆಸಿ, ಸಾಹುಕಾರರ ಕಥೆಯನ್ನು ಅವರ ಮುಂದೆ ಹೇಳಿಸಿದೆ. ಎರಡನೆಯ ಚುನಾವಣೆಯಲ್ಲಿ ಸಾಹುಕಾರರು ಖೋಟಾ ಯೋಗಿಗೆ ಸವರನ್‌ಗಳ ಥೈಲಿಗಳನ್ನು ತೋರಿಸಿದ ಮಾತು ಮುಚ್ಚಿದರು; ಕೇಸಿಗೆ ಸಂಬಂಧಪಡದ ನಿಧಿ ಗುಪ್ತವಾಗಿರುವುದು ವಿವೇಕ. ನಾನು ಪೋಲೀಸು ಇನ್

ಸ್ಪೆಕ್ಟರಿಗೆ—ಈ ಮನುಷ್ಯನ ಚಟುವಟಿಕೆ ಜೋರಾಗುತ್ತದೆ. ನಿಗ ಅದರಂತೆಯೆ ಜೋರಾಗಲಿ,—ಎಂದು ಜಾಗ್ರತೆ ಪಡಿಸಿದೆ.

ಕೆಲವು ದಿನಗಳಲ್ಲೇ ಆ ಕಪಟ ಸಂನ್ಯಾಸಿ ಆತುರಪಟ್ಟು ಎಡವಿ ಕೈಗೆ ಸಿಕ್ಕಿದ. ಆ ರೀತಿ ಹೀಗೆ: ಸಾಹುಕಾರರು ಯೋಗಿಯನ್ನು ತಮ್ಮ ಸುಪರ್ದಿಗೆ ತೆಗೆದು ಕೊಂಡದ್ದು ನೋಡಿ, ಅದರ ಉದ್ದೇಶವನ್ನೂ, ಫಲಿತಾಂಶವನ್ನೂ ಅರಿಯದ ತಾತಾ ಚಾರ್ಯರು—ಇದೋ ನೋಡಿದೆಯ, ಬಡತನ ಕೆಟ್ಟದ್ದು, ನನ್ನಲ್ಲಿ ನೂರುರೂಪಾಯಿ ಇಲ್ಲದ್ದಕ್ಕಲ್ಲವೆ ಆ ಯೋಗಿಯನ್ನು ನಾನು ಸಾಹುಕಾರನ ಕೈಗೆ ಸಿಕ್ಕಿಸಿದ್ದು. ಈಗ ಅವನ ಪ್ರಯೋಜನವೆಲ್ಲಾ ಸಾಹುಕಾರನೇ ಹೀರಿ ಬಿಡುತ್ತಾನೆ—ಎಂದುಕೊಂಡು ತನ್ನ ಬಡತನವನ್ನು ನಿಂದಿಸಿ ಚಿಂತೆಯಲ್ಲಿ ಇದ್ದುದನ್ನು ನೋಡಿ ಅವರ ಧರ್ಮಪತ್ನಿ ಯಾದ ಸಾಧ್ವಿ ತನ್ನ ತಾಯಿಯ ಮನೆಯಿಂದ ತಂದಿದ್ದ ಅಡ್ಡಿಗೆಯನ್ನು ತನ್ನ ಯಜ ಮಾನರಿಗೆ ತೆಗೆದುಕೊಟ್ಟು—ಇದನ್ನು ಮಾರಿ ಬೇಕಾದ್ದು ಮಾಡಿಕೊಳ್ಳಿ—ಎಂದು ಸಂತೈಸಿದರಂತೆ. ಇದು ಆ ಕಳ್ಳ ಸಂನ್ಯಾಸಿಯ ಕೈಗೆ ಸೇರಿತೋ ಇಲ್ಲವೋ. ಇನ್ನು ಈ ತಾಲೂಕಿನ ಷಿಕಾರಿ ಸಾಕು, ಹವ ಕೆಟ್ಟಿತು ಎಂದುಕೊಂಡು ಅಲ್ಲಿಂದ ಕಂಬಿ ಕಿತ್ತಲು ಯತ್ನಮಾಡಿದ. ಅವನನ್ನು ಬೆಳಕವಾಡಿಯ ಹತ್ತರ ಹಡಿದಾಗ ಅವನು ಸಂನ್ಯಾಸಿ ಆಶ್ರಮವನ್ನೂ ಅದರ ನಿಶಾನೆಯಾದ ಗಡ್ಡಮೀಸೆಗಳನ್ನೂ ತ್ಯಜಿಸಿ, ಸಾಮಾನ್ಯ ವೈದಿಕ ಬ್ರಾಹ್ಮಣನಾಗಿದ್ದ. ದಸ್ತಗಿರಿ ಹೊತ್ತಿನಲ್ಲಿ ಅವನಲ್ಲಿ ಸುಮಾರು ಐದುನೂರು ರೂಪಾಯಿನಷ್ಟು ದುಡ್ಡಿತ್ತು. ತನಿಖೆ ಪ್ರಾರಂಭಿಸಲಾಗಿ, ಇವನು ಕೇಪ ಮಾರೀ ಕಸಬಿನಲ್ಲಿ ಪದವೀಧರನೆಂದು ಹೊರಬಿತ್ತು. ಹಿಂದೆ ಎರಡು ಮೂರು ಸಲ ಸಜವಾಗಿತ್ತು. ಇವನಿಗೆ K. D. ಡಿಗ್ರಿಗೆ ಸಂಪೂರ್ಣ ಅರ್ಹತೆ ಇತ್ತು. ಇವನ ಯೋಗ್ಯತೆಗೆ ಯೋಗ್ಯ ಶಿಕ್ಷೆ ಕೊಡುವುದು ನನ್ನ ಮೆಜಿಸ್ಟೀರಿಯಲ್ ಅಧಿಕಾರಕ್ಕೆ ಮೀರಿದ್ದರಿಂದ ಸಬ್ ಡಿವಿಜನ್ ೧ನೆಯ ದರ್ಜೆ ಮ್ಯಾಜಿಸ್ಟ್ರೇಟರಾದ ವೈದ್ಯನಾಥ ಅಯ್ಯರ ಕೋರ್ಟಿನಲ್ಲಿ ಇವನ ವಿಚಾರಣೆಯಾಯಿತು. ಕೇಸನ್ನು ಸೆಷನ್ನಿಗೆ ಕಳಿಸು ವುದಕ್ಕೆ ಮುನ್ನ ಮ್ಯಾಜಿಸ್ಟ್ರೇಟರಿಗೂ ಖೈದಿಗೂ ಬಹಳ ಸ್ವಾರಸ್ಯವಾದ ಪ್ರಮೇಯ ಪೂರಿತವಾದ ಅನೇಕ ವಾಗ್ವಾದಗಳು ನಡೆದವೆಂತಲೂ, ಈ ಸಂದರ್ಭದಲ್ಲಿ ಭಗವ ದ್ಗೀತೆ, ಭಾಗವತ, ಭಾರತ, ಉಪನಿಷತ್‌ಗಳ ಪ್ರಮಾಣಗಳು ತಾಂಡವವಾಡಿ ಕೋರ್ಟಿನಲ್ಲಿದ್ದ ಲಾಯರು, ನೌಕರರು, ಪ್ರೇಕ್ಷಕರು ವಗೈರೆಯವರಿಗೆ ತಾವು ಯಾವದೋ ಪುಣ್ಯಾಶ್ರಮದಲ್ಲೋ, ಮಠದಲ್ಲೋ ಪುಣ್ಯಕಥೆ ಶ್ರವಣ ಮಾಡುತ್ತಿದ್ದೇ ವೆಂಬ ಭ್ರಮೆಯುಂಟಾಗಿರಬೇಕೆಂತಲೂ, ಕೇಸು ಮುಗಿದು ಖೈದಿಯನ್ನು ಮೈಸೂರ ಜೇಲಿಗೆ ಸಾಗಿಸಿದಾಗ ಇಡೀ ಪೋಲೀಸು ದಳವೇ ಕಣ್ಣೀರು ಸುರಿಸಿತೆಂತಲೂ ಕೋರ್ಟಿನಲ್ಲಿ ಪೋಲೀಸು ತರ್ಫು ಕೇಸನ್ನು ನಡೆಸಿದ ಇನ್‌ಸ್ಪೆಕ್ಟರು ಚನ್ನಮ ರಾಜರವರು ಹೇಳಿದರು. ಇದು ಉತ್ಪ್ರೇಕ್ಷೆ ಇರಬಹುದು, ಆದರೂ ವಾಸ್ತವದ ತಿರುಳುಳ್ಳದ್ದೆಂದು ನನ್ನ ನಂಬಿಕೆ.

—ರಾಜಸೇವಾ ಪ್ರಸಕ್ತ, ನವರತ್ನ ರಾಮರಾಯರು.

## ಅಭ್ಯಸನಗಳು

**ಪ್ರಶ್ನೆಗಳು :—**

(೧) ಯೋಗೀಶ್ವರರು ತಮಗೆ ಹಣಕಾಸುಗಳ ಮೇಲೆ ಮೋಹವಿಲ್ಲೆಂದು ಯಾವ ರೀತಿಯಿಂದ ಪ್ರಚಾರಮಾಡಿದ್ದರು ?

(೨) ಯೋಗೀಶ್ವರರ ಮೇಲೆ ಪೋಲೀಸ ಅಧಿಕಾರಿಗಳ ಕಣ್ಣು ಏಕೆ ಇತ್ತು ?

(೩) ಯಜಮಾನರನ್ನು ತನ್ನ ವಶಕ್ಕೆ ತೆಗೆದುಕೊಳ್ಳಲು ಯೋಗೀಶ್ವರನು ಹೂಡಿದ ಹಂಚಿಕೆ ಯಾವುದು ?

(೪) ಜಮೀನದಾರ ಶಿವಬಸವ ದೇವರು ಯೋಗೀಶ್ವರನ ಕೈವಾಡವನ್ನು ಹೇಗೆ ಕಂಡುಹಿಡಿದರು ?

(೫) ಕೈದಿಯಾದ ಯೋಗೀಶ್ವರನ ವಿಚಾರಣೆ ನಡೆದಾಗ ಕೋರ್ಟಿನಲ್ಲಿ ಅವನು ಯಾವ ಬಗೆಯ ಭ್ರಮೆಯನ್ನುಂಟುಮಾಡಿದನು ?

(೬) ಯಜಮಾನರು ಮಾತ್ರ ಯೋಗೀಶ್ವರನ ಬಗ್ಗೆ ಮೊದಲಿನಿಂದಲೂ ಸಂಶಯ ತೆಗೆದುಕೊಳ್ಳಲು ಕಾರಣವೇನು ?

**ಭಾಷಾಭ್ಯಾಸ :—**

(೧) ಸಾಹುಕಾರ ಶಿವಬಸವ ದೇವರು ಹೇಳಿದ ಕಥೆಯನ್ನು ನಿಮ್ಮ ಮಾತಿನಲ್ಲಿ ಬರೆಯಿರಿ.

(೨) ಪೋಲೀಸರು — ತಾತಾಚಾರ್ಯರು — ಕೋರ್ಟಿನವರು — ಇವರೆಲ್ಲರೂ ಯೋಗೀಶ್ವರನಿಗೆ ಮರುಳಾದ ಕಾರಣಗಳನ್ನು ಹೇಳಿರಿ.

(೩) [೧] ಈ ಕಲಿಗಾಲದ ಮಹರ್ಷಿಗಳ ಮೇಲೆ ಸ್ವಲ್ಪ ನಿಗಾ ಇರಲಿ !
[೨] ಮನುಷ್ಯ ಉಪ್ಪರಿಗೆಯಿಂದ ಇಳಿದು ನೆಲಮಟ್ಟಕ್ಕೆ ಬಂದ.
ಈ ವಾಕ್ಯಗಳಲ್ಲಿಯ ವಿಚಾರವನ್ನು ಸ್ಪಷ್ಟಗೊಳಿಸಿರಿ.

**ಶಬ್ದ ವಿಚಾರ :—**

(೧) ಈ ಪಾಠದಲ್ಲಿ ನಿಗಾ, ತನಿಖೆ ಮೊದಲಾದ ಮೈಸೂರ ಸೀಮೆಯ ಕಚೇರಿ ಭಾಷೆಯ ಶಬ್ದಗಳು ಬಂದಿವೆ. ಅವುಗಳನ್ನು ಲಕ್ಷಿಸಬೇಕು.

(೨) ಅಲೌಕಿಕ, ಅಮಾನುಷ, ರಾವಣ ಸಂನ್ಯಾಸಿ, ತಾಪತ್ರಯ, ಯಕ್ಷಿಣಿ ವಿದ್ಯೆ, ಸತ್ಕುಲ ಪ್ರಸೂತ — ಇವುಗಳ ಅರ್ಥವನ್ನು ನಿಘಂಟಿನ ಸಹಾಯದಿಂದ ತಿಳಿದುಕೊಳ್ಳಿರಿ.

**ವಾಕ್‌ಶಿಕ್ಷಣ :—**

ಯಜಮಾನರಿಗೂ ಮತ್ತು ಯೋಗೀಶ್ವರರಿಗೂ ಆದ ಸಂಭಾಷಣೆಯನ್ನು ಅಭಿನಯಿಸಿ ತೋರಿಸಿರಿ.

**ಚರ್ಚೆ :—**

ಮೋಸಗಾರರಿಗಿಂತ ಮೋಸಹೋದವರೇ ಹೆಚ್ಚಿನ ಅಪರಾಧಿಗಳು.

# ೨೧. ಲವ - ಕುಶ

[ ಈ ನಾಟಕವನ್ನು ಎರಡು ಮೂರು ಬಗೆಗಳಿಂದ ಯಶಸ್ವಿಯಾಗಿ ಪ್ರದರ್ಶಿಸಲು ಸಾಧ್ಯವಾಗಿದೆ. ನಟರು ಅಭಿನಯ ಮಾಡುತ್ತಿದ್ದು, ಹಿಮ್ಮೇಳದವರು ಹಾಡು ಹೇಳುತ್ತಿರುವಾಗಿನ ಮೂಕಾಭಿನಯ ರೀತಿ ಒಂದು. ಗೀತ ನಾಟಕವಾಗಿ ಪ್ರತಿಯೊಂದು ಪಾತ್ರವೂ ಯುಕ್ತ ಅಭಿನಯದೊಂದಿಗೆ ತನ್ನ ತನ್ನ ಪಾಲಿನ ಹಾಡನ್ನು ಹೇಳುತ್ತ ಆಡುವದು ಇನ್ನೊಂದು ರೀತಿ. ಇದನ್ನು ಛಾಯಾ ನಾಟಕದಲ್ಲಿಯೂ ಪ್ರಯೋಗಿಸಿದ್ದುದು ಮೂರನೆಯ ರೀತಿ.

ಈ ಬಗೆಯ ಗೀತ ನಾಟಕಗಳನ್ನು ಬರೆದು ಯಶಸ್ವಿಯಾಗಿ ಆಡಿತೋರಿಸಿದ ಪ್ರಥಮ ಶ್ರೇಯಸ್ಸು ನಮ್ಮ ನಾಡಿನಲ್ಲಿ ಶ್ರೀ. ಕಾರಂತರಿಗೇ ಸಲ್ಲುತ್ತದೆ. ಈ ನಾಟಕವನ್ನು ಓದಿ ದೊರೆವ ಹಿಗ್ಗೆಲ್ಲ, ಇದನ್ನೇ ರಂಗಭೂಮಿಯಲ್ಲಿ ಪ್ರತ್ಯಕ್ಷ ನಡೆದಾಗ ನೋಡಿ ದೊರೆವ ಆನಂದದ ಶತಾಂಶದಷ್ಟೂ ಆದೀತೇ, ಎಂಬುದು ಸಂಶಯಾಸ್ಪದ.

ಶ್ರೀ. ಶಿವರಾಮ ಕಾರಂತರ " ಗೀತನಾಟಕಗಳು " ಎಂಬ ಹೊತ್ತಿಗೆಯಿಂದ ಈ ಭಾಗವನ್ನು ಆಯ್ದುಕೊಳ್ಳಲಾಗಿದೆ.]

## ಒಂದನೆಯ ದೃಶ್ಯ

( ರಾಗ — ಹೋರಿ ಕಾಫಿ )

ಮೇಳ:— ಹೊರಟಿಹರು । ಬಾಽಽಗಿ । ಸಾಽಽಗಿ ॥
ಹೃದಯದೊಳು ಖೇದಭರಿತರಾಗಿ । ಹೊರಟಿಹರು ವಿಪಿನಕಾಗಿ ॥

ಲಕ್ಷ್ಮಣ:— ಪೇಳ್ವೆನೋ ಪೇಳದಿಹೆನೋ
ಸೋದರನ ಕಡು ಆಣತಿಯನು ॥

ಮೇಳ:— ಎಂದು ಬೆಂದಿಹನೊ
ಮನದಿ ಕುಂದಿಹನೊ
ಜಾನಕಿಯ ಮುಖಗಾಣದಿಹನೊ
ಈ ಲಚುಮಣನು । ಹೊರಟಿಹನು ವಿಪಿನಕಾಗಿ ॥

ಸೀತೆ:— ತಾಳಲೇ, ತಾಳದಿರಲೇ,
ಮೈದುನನೊಳನುಮಾನ ॥
ಏಕೆ ಬಂದಪನೋ
ಕರೆದುತಂದಪನೋ
ಭೀಕರದ ಕಾನನದೊಳ್ ಏಂ ಬಯಕೆ ಸಂದಪನೋ ! ॥
ನಿಂದೆಯೇತಕೆ ಬಂಧು ?
ಮೌನವೇತಕೆ ನಿಂದು ?
ಬಂದಪುದೆ, ಬಂದಪುದೆ —ರಾಘವನೊರೆದಾಶ್ರಮ ? ॥
ಮೋರೆ ತಗ್ಗಿಪುದೇಕೆ ?
ತಿರೆಯ ಕೆದರುವೆಯೇಕೆ ?
ಇನ್ನಿಹುದೆ —ರಾಘವನೊರೆದಾಣತಿ !

ತೊಡೆವ ಕಂಬನಿಯೇನು
ಥರಿಪ ಮುಂದುಟಿಯೇನು !
ಕೊಲೆಗೆ ನಿಂಪವನಂತೆ ಅಳುಕದೇನು ? ॥

ಮೇಳ:– ತಗ್ಗಿಹನೊ, ಬಗ್ಗಿಹನೊ,
ಬಲುವಾಗಿ ಕುಗ್ಗಿಹನೊ,
ಮುರಿದ ಕದಳಿಯ ತೆರದಿ–ಅಡಿಗೆರಗಿ ನುಡಿದಿಹನೊ,
ಕಂಬನಿಯು ಮಿಡಿದಿಹನೋ,
ಅಧರಗಳ ಪಿಡಿದಿಹನೊ ॥

( ರಾಗ — ತೆಲಂಗ್ )

ಲಕ್ಷ್ಮಣ:– ನುಡಿಯಲೊಲ್ಲದ ಮಾತ
ನುಡಿಸುವನೆ ವಿಧಾತ
ಪಡೆದು ಬಂದೆನೊ ಎಂಥ – ಕಜ್ಜವಿದು ದುರಂತ !
ಕಾಡಿನೊಳು ತೊರೆವಂತೆ,
ಒರೆದಿಹರು ಕಡು ಚಿಂತೆ,
ನಾಡಿನೊಡೆಯನ ಮಾತ ನಡೆಸುವೆನೆ ಬಿಡೆನೆ !!

ಸೀತೆ:– ಯಾರ್ — ರಾಘವನೇ ?
ತಾನ್ — ಪೇಳಿದನೇ !
ಆವ ತಪ್ಪಿತಕೆಂದು — ಒರೆದಿಹನೇ ?

ಲಕ್ಷ್ಮಣ:- "ಪರಗೃಹದಿ ಬಾಳಿದಳ
ಪರಿವಿಡಿದ ರಾಘವನು
ಪೊರೆಯಲಾರನು ಧರ್ಮ" ಎಂಬ ಜನತೆಯ ದೂರ....

ಸೀತೆ:– "ಸಾಕು–ಸೌಮಿತ್ರಿ
ಬೇಡವೀ ಮಾತು !
ಆರ ತಪ್ಪೂ ಇಲ್ಲ
ಆವ ಒಪ್ಪೂ ಇಲ್ಲ
ತಪ್ಪು ಸೀತೆಯದಲ್ಲ
ಪೆಣ್ಣಾಗಿ ಪುಟ್ಟಿದುದೆ
ಹಿರಿಯ ಅಪರಾಧವಲಾ !
ಕರುಣಾಳು ರಾಘವನ
ದೂರುವುದೆ ನಿಷ್ಫಲ ।

ಮೇಳ:- ಅಡಿಯ ಹಿಂದೆಳೆದು
ನುಡಿಯ ತಾಂ ಕಳೆದು
ಅಡವಿದೇವಿಯ ನೆಚ್ಚಿ । ಜಾನಕಿಯ ಬಿಟ್ಟಿಕ್ಕಿ
ಪೋದಪನೊ ॥

[ ಲಕ್ಷ್ಮಣನು ಬಲುವಾಗಿ ನೊಂದು, ಅನುಮಾನಿಸಿ ಅನುಮಾನಿಸಿ ಹಿಂದೆರಳುವನು ]
( ರಾಗ — ಮುಲ್ತಾನಿ )

ಮೇಳ:- ಜಾನಕಿ ವಿಸ್ಮೃತಳಾಗಿಹಳು ॥
ಕಾನನದೊಳು ಕಂಗೆಟ್ಟಿಹಳು ॥ ಜಾನಕಿ ॥
ವಟುಗಳದಾರೋ ಬರುತಿಹರು
ಕಾಣುತಲಬಲೆಯ – ಬೆಚ್ಚಿಹರು !
ಪರ್ಣಕುಟೀರಕೆ ಸಾಗಿಹರು
ವಾಲ್ಮೀಕಿಯ ಕರೆತಂದಿಹರು ॥
ಜಾನಕಿ ವಿಸ್ಮೃತಳಾಗಿಹಳು ! ।
ಅಬಲೆಯ ಕಾಣುತೆ ।
ಮೆಲುವಿಂದೆತ್ತುತೆ ।
ಜಲವನು ಎರಚುತೆ ।
ಸಲಿಸಲ್ ಉಪಚಾರ ।

ಸೀತೆ:- "ರಾಮಾ ರಾಮಾ" — ಎಂದೊರಲಿದಳು ।

ಮೇಳ:- ಆ ಮಾತವಸಿಯ ನೋಡಿಹಳು ।
ತಾನಾರೆಂಬುದನರುಹಿದಳು ।
ಪ್ರೇಮಾಶ್ರಯವನು – ಗಳಿಸಿಹಳು !

## ಎರಡನೆಯ ದೃಶ್ಯ

( ರಾಗ — ಶಂಕರಾ )

ಮೇಳ:- ಪೊಂದಿಹಳ್ಳೆ ಸುಖವಾ । ಸುಖವಾ ।
ತಳೆದಿಹಳ್ಳೆ ನಗುವಾ । ನಗುವಾ ।
ನವಸುಮಸಮರಾ—ಲವಕುಶರೆಂಬವರ ।
ಪೆತ್ತು—ಪೊಂದಿಹಳ್ಳೆ ಸುಖವಾ
ವಾಲ್ಮೀಕಿಯ ದಯ
ವಟುಸಖಿಯರ ನಯ
ಕುವರರಿಂ ವಿಸ್ಮಯ । ಜೀವಿತಕೆ ಅಭಯ ॥
ದಿನ ದಿನ ಬೆಳಗಿದೆ
ಭಾರವು ಕಳೆದಿದೆ
ಜೀವನ ಸೊಗಸಿದೆ—ಇನ್ನೇಂ ಬೇಕಿಹುದು ! ॥

ಬಾಲರ ಕುಲಘನ
ಶೀಲ ಮತ್ತೆಳತನ
ಲೀಲೆಗಳ್ ಸಿರಿತನ—ಜಾನಕಿಯು ಸುಮನೆ ॥
ಬಾಲರ ಕುಲಕೆ
ಸಲ್ಲುವ ಕಲಿಕೇ
ಗುರುವಿಂದವಕೆ— ದೊರೆತಿದೆ ಯಶಕೆ !
ಪೊಂದಿಹಳ್ಳೆ ಸುಖವಾ । ಸುಖವಾ ।
ತಳೆದಿಹಳ್ಳೆ ನಗುವಾ । ನಗುವಾ ।

## ಮೂರನೆಯ ದೃಶ್ಯ

[ ಅಶ್ವಮೇಧದ ಕುದುರೆಯನ್ನಟ್ಟಿಕೊಂಡು ರಾಮದೂತನೊಬ್ಬನು ಪ್ರವೇಶಿಸುವನು ]

( ರಾಗ — ಭೂಪ )

ರಾಮದೂತ:— ಆರು ? ಆರು ? ಆರು ?
ತಡೆಯುವರುಂಟು
ರಾಮನಟ್ಟಿದ ಹಯವ ?
ಧಾರುಣಿಯೊಳ್ ಆ ರಾಮನೇ ರಾಮ— ಏಕೈಕ ರಾಮ ॥
ಆರು, ಆರು— ಕಲಿತನದಿಂದ
ಸಾರಿ ತಡೆಯುವರಿದನು
ಹೋರಿ ಕಾದುವರುಂಟು–ರಾಮನೊಡೆತನಕಿದಿರು ಉಂಟು ? ॥

ಮೇಳ:— ಸಾರುತಿಹನೂ—
ರಾಮಭಟನು ।

ದೂತ:— ಆರು ಆರು ಆರು
ತಡೆಯುವರುಂಟು ........ ?

ಮೇಳ:— ಆಲಿಸಿಹರೂ
ಬಾಲರವರೂ
ಧಾವಿಸಿಹರು
ತಡೆದೆ – ಇಹರು
ಬೇಡವೆಂದೊರೆದರು
ಮೋಡಿಲಿ ಜರೆದರು.

ಲವ-ಕುಶ: ನೋಡಿಕೊಂಬೆವು ನಾವು
ಮೂಢ ಚಾಕರ, ಪೋಗು
ಕೂಡಿ ಬಾ ಒಡೆಯನ
ನೊಡುವೆವ್ ಹದನ ।

ಮೇಳ: ಎಂದು ಕಳುಹೆ ।
ಹೋದನರುಹೇ ।
ಹಯವ ತಡೆದುದ ಕೇಳಿ
ಕೌತುಕವ ಬಲು ತಾಳಿ
ಸೌಮಿತ್ರಿ ಕಾದಾಳಿ ।
ಬಂದ ಗಳಿಗೆ–
ನಿಂದ ಅಡಿಗೆ–
ಕಣೆಯ ಹತಿಗೆ–
ಉರುಳೆ ಧರೆಗೆ–
ಸೋದರನ ಪರಿ ಕೇಳಿ
ರಾಘವನೆ ಎದುರಾಳಿ !
ವೀರ ರೌದ್ರವ ತಾಳಿ
ಬಂದ ಗಳಿಗೆ–
ನಿಂದ ಅಡಿಗೆ–
ಬೀಳ್ದನಿಳೆಗೆ !
ಕಣೆಯ ಹತಿಗೆ !
ಗೆದ್ದುದನು ತಿಳುಹಲ್ಕೆ–
ಬಿದ್ದವರ ತೋರಲ್ಕೆ
ಗುರುವರನ ಶಿಕ್ಷೆ ಫಲಿಸಿದಕಾಗಿ–ವಂದಿಸಲ್ಕೇ
ಸಾಗುತಿಹರು
ತರಳರವರು ।

## ನಾಲ್ಕನೆಯ ದೃಶ್ಯ

[ರಾಮಲಕ್ಷ್ಮಣರ ಆಭರಣಗಳನ್ನು ಕರದಲ್ಲಿ ಹಿಡಿದು ಸೀತೆ ಅಳುತ್ತ ಬರುವಳು.]

( ರಾಗ — ಜೀವನ್‌ಪುರಿ )

ಸೀತೆ:– ಆತನೆ ಆತನೇ ಇಹನೇನೋ ।
ಮೇಳ:– ಎಂಬ ಭೀತಿಯನುಂಡು
ತುಂಬ ಕಾತರಗೊಂಡು
ಲವಕುಶರ ಬೆಂಗೊಂಡು–ಬಂದಳಾಕೆ.

[ ಮಡಿದುಬಿದ್ದಿರುವ ರಾಮಲಕ್ಷ್ಮಣರನ್ನು ಕಂಡು ]

ಸೀತೆ:– ದಾತನೇ ಖ್ಯಾತನೇ ವಿಖ್ಯಾತನೇ ಅಹುದಲ್ಲ !
ತನ್ನ ಕರುಳಿಗೆ ತಾನು
ಬಲಿಯಾಗಿ ಬಿದ್ದಪನೇ !
ಜತೆಗನುಜ ಲಕ್ಷ್ಮಣನೇ–ಆತನೇ........

( ರಾಗ — ಭೈರವಿ )

ವಾಲ್ಮೀಕಿ:–ಶೋಕಿಸದಿರು ತಾಯೆ ! ಇದು ಮಾಯೆ !
ಲವಕುಶ ಶರಹತಿ ! ಇಂದಾಯಿತು ಈ ಕೃತಿ,
ತೋರಿವುದು ಕಡುಖತಿ ! ಈಯುವೆ ನಾ ಸ್ಮೃತಿ !
ಅಂಬುಜನಯನರೆ,
ಅಂಬಿನಿಂದಿರಿದರ
ತುಂಬುಗಣ್ಣಿಂ ನೋಡಿ
ಚರಣದೊಳ್ ಕ್ಷಮೆ ಬೇಡಿ !

ಲವಕುಶ:– "ಚರಣದೊಳ್ ಕ್ಷಮೆ ಬೇಡಿ !"
ಯಾರಿಹರೀ ಜನರು ?
ಯಾರದು ಈ ವಿಜಯ ?

ರಾಮ:– ಯಾರಿಹರೀ ಸುಮರು ?

ವಾಲ್ಮೀಕಿ:–ನಿನ್ನಿಜಕುಲಸಂಭವರು

ಲವಕುಶ:– ಏನಿಹುದೀ ಕತೆಯು
ಮೀರುತಲಿದೆ ಅರಿವು !

ವಾಲ್ಮೀಕಿ:– ರಘುಕುಲೋದ್ಭವ ರಾಮ
ತಳೆ ಕುವರರೊಳು ಪ್ರೇಮ !
ತೊರೆದ ಜನಕಜೆಯಿವಳು
ಪರಿಗ್ರಹಿಸಿ ಬಾಳು, ಗುಣಧಾಮ !

ರಾಮ:– ಆರಿವಳು ? ಜನಕಜೆಯೇ !
ಬನದಿ ತಮ್ಮಾಶ್ರಮದಿ
ಕುಲವ ಬೆಳಗಿದಳೆ !

ವಾಲ್ಮೀಕಿ:–ಕ್ಷಮಿಸುವೆಯಾ ?

ರಾಮ:– ಕಿಚ್ಚ ಪುಗುತಲಿ ತಾನು
ನಿಚ್ಚ ಶುದ್ಧಿಯ ತೋರೆ .... .... ....

ಮೇಳ:– ಮಾತು ನಿಂದಿಹುದಲ್ಲ
ಮಮತೆ ಕಳೆದಿಹಳಲ್ಲ
ಗುರುಜನವ ವಂದಿಸುತೆ
ನುಡಿವಳಲ್ಲ—

ಸೀತೆ: ಕರುಣಾಳು ರಾಘವಗೆ
ಸಲದ ಮಡದಿಯು ನಾನೆ!
ಋಣನ ಕಡಿಯುತೆ ಭವದ
ನೆಲನ ಪುಗುತಿಹೆನೋ !
ವಂದಿಪೆನೊ ! ಇದೋ
ನಾಂ–ಪರಕೆ ಸಂದಪೆನೋ

—ಶಿವರಾಮ ಕಾರಂತ

## ಅಭ್ಯಸನಗಳು

ಪ್ರಶ್ನೆಗಳು:—

(೧) ಲಕ್ಷ್ಮಣನ ಮನದ ದುಗುಡವು ಯಾವ ರೀತಿಯಿಂದ ಹೊರಹೊಮ್ಮಿತು ?

(೨) ರಾಮಚಂದ್ರನ ಆಜ್ಞೆಯು ಆಘಾತವು ಸೀತಾದೇವಿಯ ಮೇಲೆ ಉಂಟು ಮಾಡಿದ ಪರಿಣಾಮವಾವುದು ?

(೩) ವಾಲ್ಮೀಕಿಯ ಆಶ್ರಮದಲ್ಲಿ ಸೀತಾದೇವಿಯು ದಿನಗಳನ್ನು ಹೇಗೆ ಕಳೆದಳು ?

(೪) ಲವ-ಕುಶರು ಗುರುವರರನ್ನು ವಂದಿಸಲು ಏಕೆ ಹೊರಟರು ?

(೫) ಲವ-ಕುಶರು ಕ್ಷಮೆ ಬೇಡಲು ಹಿಂಜರಿಯಲು ಕಾರಣವೇನು ? ರಾಮಚಂದ್ರನು ಸೀತಾದೇವಿಯನ್ನು ಒಮ್ಮೆಲೆ ಗುರುತಿಸಲಿಲ್ಲವೇಕೆ ?

(೬) ಭವದ ಋಣವನ್ನು ಕಡಿದುಕೊಳ್ಳಬೇಕೆಂಬ ಬುದ್ಧಿ ಸೀತಾದೇವಿಯಲ್ಲಿ ಏಕೆ ಹುಟ್ಟಿತು ?

(೭) ಸೀತಾದೇವಿ ಮತ್ತು ರಾಮಚಂದ್ರ ಇವರಿಬ್ಬರೂ ಒಬ್ಬರನ್ನೊಬ್ಬರು ನೋಡಿದಾಗ ಅವರ ಮನಸ್ಸಿನಲ್ಲಿ ಉಂಟಾದ ಭಾವನೆಗಳು ಯಾವವು ?

ಭಾಷಾಭ್ಯಾಸ:—

(೧) ಲಕ್ಷ್ಮೀಶನು ಬರೆದ ಜೈಮಿನಿಭಾರತದಲ್ಲಿ ಸೀತಾಪರಿತ್ಯಾಗದ ಸಂಧಿಯನ್ನು ಇದರೊಡನೆ ಓದಿರಿ.

(೨) ಬೆಂದಿಹನೋ, — ಇದಕ್ಕೆ ಅನುಗುಣವಾಗುವ ಪ್ರಾಸಯುಕ್ತ ಶಬ್ದ 'ಕುಂದಿಹನೊ' ಹೀಗೆ ಕೆಳಗಿನ ಶಬ್ದಗಳಿಗೆ ಸರಿ ಹೋಗುವ ಪ್ರಾಸಯುಕ್ತ ಶಬ್ದಗಳನ್ನು ಹೇಳಿರಿ.

ಬಂದಪನೊ, ಕಂಬನಿ, ಬಗ್ಗಿಹನೊ, ತಪ್ಪು, ದಯು, ಹದನ.

(೩) ಲಕ್ಷ್ಮಣನನ್ನು ಯಾರಿಗೆ ಹೋಲಿಸಲಾಗಿದೆ? ಇದರಂತೆ ಲವ-ಕುಶರನ್ನು ಯಾತಕ್ಕೆ ಹೋಲಿಸಲಾಗಿದೆ ?

(೪) ತಪ್ಪು ಸೀತೆಯದಲ್ಲ ಪೆಣ್ಣಾಗಿ ಪುಟ್ಟಿದುದೆ.
ತನ್ನ ಕರುಳಿಗೆ ತಾನು ಬಲಿಯಾಗಿ ಬಿದ್ದಪನೆ
ಕರುಣಾಳು ರಾಘವಗೆ ಸಲದ ಮಡದಿಯು ನಾನೆ !
ಈ ಸಾಲುಗಳಲ್ಲಿಯ ಭಾವವನ್ನು ತಿಳಿಯಾಗಿ ಹೇಳಿರಿ.

ಶಬ್ದವಿಚಾರ:—

(೧) ಲಚುಮಣ, ಆಣತಿ, ಕಜ್ಜ, ತವಸಿ — ಇವುಗಳ ತತ್ಸಮ ರೂಪಗಳನ್ನು ಹೇಳಿರಿ.

(೨) ಕಾದಾಳಿ – ಕಾದುವ ಸ್ವಭಾವವುಳ್ಳವನು — ಇದರಂತೆ ಮಾತಾಡುವ ಸ್ವಭಾವವುಳ್ಳವನು, ಜೂಜಾಡುವ ಸ್ವಭಾವವುಳ್ಳವನು, ಕೇಡುಮಾಡುವವನು — ಇವುಗಳನ್ನು ಸೂಚಿಸುವ ಶಬ್ದಗಳನ್ನು ಹೇಳಿರಿ.

(೩) ಎರಚು, ಹನಿಸು, ಚಿಮುಕಿಸು, ಸಿಡಿಸು — ಇವುಗಳಲ್ಲಿಯ ಅರ್ಥಭೇದವನ್ನು ಹೇಳಿರಿ.

(೪) 'ನಾಡಿನೊಡೆಯ' ಇದರ ಮೇಳ ನುಡಿಗಳನ್ನು ಬರೆಯಿರಿ.

(೫) ಕೂಡಿಸಿ ಬರೆಯಿರಿ:—

ರಾಘವನು + ಒರೆಪ + ಆಣತಿ; ಅಳುಕು + ಅದು + ಏನು; ಕಾಣುತಲಿ + ಅಬಲೆಯ.

ವಾಕ್ಶಿಕ್ಷಣ:-

ಈ ಗೀತ ನಾಟಕವನ್ನು ವಿವಿಧ ರೀತಿಯಿಂದ ಅಭಿನಯಿಸಿರಿ.

ಚರ್ಚೆ:—

(೧) ಸೀತೆಯನ್ನು ರಾಮನು ವನವಾಸಕ್ಕೆ ಕಳಿಸಿದ್ದು ಸರಿಯೆ ?

ಬರೆಹ:—

ಮಗುವು ತಪ್ಪಿಸಿಕೊಂಡ ತಾಯಿಯ ಸ್ಥಿತಿಯನ್ನು ಬಣ್ಣಿಸಿರಿ.

# ೨೨. ಕರಿಯ ಕಾವಿ

[ ಸಾಮಾನ್ಯವಾಗಿ ಪ್ರತಿಯೊಬ್ಬನಿಗೆ ಒಂದು 'ನಾದ' ಎಂಬುದು ಇದ್ದೇ ಇರುತ್ತದೆ. ಅಥವಾ ಒಂದಿಲ್ಲೊಂದು ಬಗೆಯ 'ನಾದ'ವು ಇಲ್ಲದಲ್ಲಿ ಅವನು ತನ್ನ ಜೀವದ ಬೇಸರವನ್ನು ಹೋಗಲಾಡಿಸಿಕೊಳ್ಳಲು ಅಸಮರ್ಥನಾಗುತ್ತಾನೆ. ಅನುದಿನದ ಕೆಲಸ ಕಾರ್ಯಗಳ ಗಾಣದೊಳಗಿಂದ ಹೊರಬಿದ್ದ ಸಂಗತಿಗಳನ್ನು ಮರೆಯಿಸಿ ಮನುಷ್ಯನನ್ನು, ಬೆನ್ನತ್ತಿ ಸೆಳೆದುಕೊಂಬ ವಿಷಯವೇ 'ನಾದ.' ತರ್ಕ ಕರ್ಕಶತೆಗಳು ಅಳಿದು ಭಾವನೆಗಳು ಅರಳಿ, ಅಂತಃಕರಣವು ತಿಳಿಯಾಗಲು ನಾದದ ಅವಶ್ಯಕತೆಯು ಇದೆ.

ಪ್ರಸ್ತುತ ಕಥೆಯಲ್ಲಿ ಯುದ್ಧಭೂಮಿಯ ಆ ನೀರಸ ಜೀವನದಲ್ಲಿ ಒಂದು ಬೆಕ್ಕು ವಿಜಯಸಿಂಗನ ಬೇಸರವನ್ನು ಮರೆಯಿಸಿ, ಅವನ ಮನಸ್ಸನ್ನು ಹೇಗೆ ಸೂರೆಗೊಂಡಿತೆಂಬದರ ವಿವರಣೆಯು ಚಿತ್ತಾಕರ್ಷಕವಾಗಿದೆ.]

ಎರಡನೆಯ ಜಾಗತಿಕ ಮಹಾಯುದ್ಧದ ಕಾಲ. ಎರಡುದಿನ ಎಡೆಬಿಡದೆ ಗುಂಡಿನ ಸುರಿಮಳೆ ನಡೆದಿದೆ. ಇಂತಹ ಪರಿಸ್ಥಿತಿಯಲ್ಲಿ ಫ್ಯೂಪಾದಲ್ಲಿ ಒಂದು ಪಿಳ್ಳೆಯಾದರೂ ಜೀವದಿಂದ ಇರಬಹುದೆಂದು ಯಾರೂ ಎಣಿಸಿದ್ದಿಲ್ಲ. ಇಂತಹದರಲ್ಲಿ ಒಂದು ಚಿಕ್ಕ ಕರಿಯಬೆಕ್ಕು ಇರಬೇಕೇ ? ಅಲ್ಲಿ ಒಂದೂ ಸುರಕ್ಷಿತಮನೆ ಹುಡುಕಿದರೂ ದೊರೆಯಲಾರದು. ಎಲ್ಲೆಲ್ಲೂ ಹಾಳು ಸುರಿಯುತ್ತಿತ್ತು. ಅಲ್ಲಿ ಒಂದು ಹಾಳು ಮನೆಯ ಒಳಗಡೆ, ಒಂದು ಮೂಲೆಯಲ್ಲಿ ಅದು ಹೇಗೋ ಆ ಕರಿಯಬೆಕ್ಕು ಅವಿತುಕೊಂಡು ಕುಳಿತಿದ್ದಿತು. ಅದು ಕಣ್ಣಿಗೆ ಬಿದ್ದೊಡನೆ ಅದನ್ನು ಕಂಡ ನಾಲ್ವರು ಸೈನಿಕರಿಗೆ ಆಶ್ಚರ್ಯ ! ಆಶ್ಚರ್ಯವಲ್ಲ; ಹಿಡಿಸಲಾರದ ನಗೆ. ನಗೆಯೇಕೆ ಎನ್ನುವಿರಾ ? ನಗೆಯೆಂಬ ವಸ್ತುವು ಅದೆಷ್ಟೋ ದಿನಗಳಿಂದ ಆ ಭಯಾನಕ ವಾತಾವರಣಕ್ಕೆ ಅಂಜಿ ಆ ಬೆಕ್ಕಿನಂತೆ ಹುದುಗಿಕೊಂಡಿತ್ತು. ಒಂದು ನೆವವು ದೊರೆತೊಡನೆ ಈಗ ತಾನೆ ಹೊರಹೊಮ್ಮಿತು. ತಮ್ಮಂತೆ ಬದುಕಿ ಉಳಿದ ಬೆಕ್ಕನ್ನು ಕಂಡು, ಅಷ್ಟೆ.

ಅವರಲ್ಲೊಬ್ಬನಿಗೆ ಬೆಕ್ಕನ್ನು ಕಂಡರೆ ಹೆದರಿಕೆ. ಹಿಂದೊಮ್ಮೆ ಚಿಕ್ಕವನಿದ್ದಾಗ ಆತ ಬೆಕ್ಕಿನ ಬಾಲವನ್ನು ಹಿಡಿದೆತ್ತಿದ್ದನಂತೆ; ಆಗ ಆ ಬೆಕ್ಕು ತಾಳಿದ ಕ್ರೂರ—

ರೂಪವೇ ಇಂದಿಗೂ ಆತನ ಕಣ್ಣಮುಂದೆ ಕಟ್ಟುತ್ತಿದೆಯಂತೆ ! ಸರಿ. ಯುದ್ಧಕ್ಕೆ ಹೆದರದ, ತೋಫುಗಳ ಗುಂಡುಗಳ ಸಪ್ಪಳಕ್ಕೂ ಭಯಪಡದ ಈ ಯೋಧ ಬೆಕ್ಕಿಗೆ ಹೆದರುವನೆಂದರೆ ಹಾಸ್ಯಾಸ್ಪದವಲ್ಲವೇ ? ಆತ ಬೆಕ್ಕಿಗೆ ಹೆದರುತ್ತಿರುವದೂ ಗೊತ್ತಾಗುತ್ತಿರಲಿಲ್ಲವೆನ್ನಿ. ಆದರೆ ಸಂಗತಿ ನಡೆದದ್ದು ಹೀಗೆ. ಕಾರ್ಪೊರಲ್ ವಿಜಯಸಿಂಗನ ಪ್ರೀತಿಯಿಂದ ಆ ಬೆಕ್ಕು 'ಮಿಯಾಂವ ಮಿಯಾಂವ' ಎಂದು ಶಬ್ದ ಮಾಡುತ್ತ ಹತ್ತರ ಬಂದುದೇ ಸಾಕಾಯಿತು, ರಣಧೀರಸಿಂಗನಿಗೆ! ಆತನು ನಾಲ್ಕು ಮಾರು ಹಿಂದೆ ನೆಗೆದ !

ಕಾರ್ಪೊರಲ್ ವಿಜಯಸಿಂಗನನ್ನೇ ಆ ಬೆಕ್ಕು ಯಾಕೆ ಮೆಚ್ಚಿತೋ ಹೇಳುವುದು ಕಷ್ಟ; ಸಾರ್ಜಂಟ ಗುರುಬಕ್ಷರಿಗೆ ಅದು ಸಹನವಾಗಲಿಲ್ಲವೆಂದು ತೋರುತ್ತದೆ. ಮೇಲಧಿಕಾರಿಗಳ ಅಪ್ಪಣೆಯಿಲ್ಲದೆ ಕಾರ್ಪೊರಲ್ ವಿಜಯಸಿಂಗನನ್ನು ಮೆಚ್ಚಬಾರದೆಂದು ಹೇಗೆ ತಿಳಿಯಬೇಕು, ಆ ಬೆಕ್ಕಿಗೆ ! ಆದ್ದರಿಂದಲೋ ಏನೋ ಸಾರ್ಜಂಟ ಸಾಹೇಬರು ಆ ಬೆಕ್ಕನ್ನು ತಾವು ಪಡೆಯಲು ಪ್ರಯತ್ನಿಸಿದರು. ಆದರೆ ಆ ಬೆಕ್ಕಿನ ನಡೆವಳಿ—'ನನಗೆ ಸರಿದೋರಿದವರ ಹತ್ತಿರ ಇರುತ್ತೇನೆ; ನನಗೆ ದೊಡ್ಡ ಅಧಿಕಾರಿಯೇ ಬೇಕೆಂದಿಲ್ಲ'—ಎನ್ನುವಂತಿತ್ತು; ಅಂದಿನಿಂದ ವಿಜಯಸಿಂಗನ ಜೊತೆಗೇ ಆ ಬೆಕ್ಕು ಇದ್ದುಬಿಟ್ಟಿತು. ಆ ಕಂಪನಿಯಲ್ಲೆಲ್ಲ ಇದ್ದುದೆಂದರೆ ಇದೇ ಒಂದು ಸಾಕುಪ್ರಾಣಿ; ಎಲ್ಲರಿಗೂ ಅದು ಅಚ್ಚುಮೆಚ್ಚಿನದಾಯಿತು. ಪ್ರತಿಯೊಬ್ಬರೂ ಒಂದಿಲ್ಲೊಂದಿಷ್ಟು ತಿಂಡಿಯನ್ನು ಅದಕ್ಕೆ ಮೀಸಲಾಗಿರಿಸುವವರೇ ! ಆದರೆ ಅದು ಮಾತ್ರ ವಿಜಯಸಿಂಗ ಕೊಟ್ಟ ಹಾಲಿಗೇ ಹೆಚ್ಚು ಮನಸೋತಿತ್ತು. ಆತನೊಗೆದ ಬ್ರೆಡ್‌ದ ತುಣುಕನ್ನು ಆತ್ಮೀಯತೆಯಿಂದ ತಿನ್ನುತ್ತಿತ್ತು. ಅದನ್ನು ನೋಡಿದ ಆ ಸಾರ್ಜಂಟರಿಗೂ ದಯೆ ಉಂಟಾಯಿತೇನೋ ! ತನಗೆ ಸಾಕಾಗಿ ಉಳಿದ ಚಾಕಲೇಟನ್ನು ಬೆಕ್ಕಿನ ಮುಂದೆ ಎಸೆಯುತ್ತಿದ್ದನು. ಆದರೆ ಆ ಬೆಕ್ಕು ಕೇವಲ ಅಣಕಿಸುವಂತೆ ಮಾಡಿ ಮುಂದೆ ಓಡಿಹೋಗುತ್ತಿದ್ದಿತು.

ವಿಜಯನಿಗೆ ಇದೊಂದು ಹೆಮ್ಮೆಯ ವಿಷಯವೇ ಆಯಿತು. ಕಂಪನಿಯಲ್ಲಿ ತಾನು ಯಾವ ಮಾನ–ಪ್ರತಿಷ್ಠೆಗಳಿಲ್ಲದೆ ಇರುವದು ಆತನಿಗೆ ಎಷ್ಟೂ ಸರಿಬರುತ್ತಿರಲಿಲ್ಲ. ಆದರೆ ಇನ್ನುಳಿದವರನ್ನು ಸೆಳೆಯಲು ಏನೊಂದು ವಿಶೇಷ ಗುಣವು ಇರಬೇಡವೇ ? ಈತನ ಯಾವ ಗುಣ ಕಂಡು ಜನ ಇವನ ಸುತ್ತಲು ನೆರೆಯಬೇಕು ? ಈಗ ಇಗೋ–ಈ ಬೆಕ್ಕು, ಎಂದರೆ ಎಲ್ಲರಿಗೂ ಒಂದು ಮನರಂಜಿಸುವ ಜೀವ ! ಆದ್ದರಿಂದ ಆ ಬೆಕ್ಕಿನ ಮೂಲಕ ವಿಜಯಸಿಂಗನಿಗೆ ಸಾಕಷ್ಟು ಮರ್ಯಾದೆ ಸಿಕ್ಕುವಂತಾಗಿದ್ದಿತು. ಕಮಾಂಡಿಂಗ ಆಫೀಸರರೂ ಒಂದೊಂದು ದಿನ 'ಬೆಕ್ಕಿನ ಸಮಾಚಾರ'ವನ್ನು ಕೇಳುತ್ತಿದ್ದರು ! ವಿಜಯನಿಗೆ ಅದೇ ಮಹಾ ಸುದಿನ. ಎಲ್ಲರಿಗೂ ಆ ಪ್ರಸಂಗವನ್ನು ಬಣ್ಣಿಸಿ ಹೇಳುವನು. ಇನ್ನಿಷ್ಟು ಉತ್ಸಾಹದಿಂದ ಆ ಬೆಕ್ಕಿನ ತಿಂಡಿ–ತಿನಸುಗಳನ್ನು ನೋಡಿಕೊಳ್ಳುವನು. ಈ ಶೀಖ-ವೀರನು ತನ್ನ ಗಡದ ಸೇವೆಯ

ಜೊತೆಗೆ ಬೆಕ್ಕಿನ ಮೈಗೂದಲನ್ನು ಬಾಚಿ ಸಿಂಗರಿಸುವನು. ಆಗ ಅದೊಮ್ಮೆ 'ಮ್ಯಾಂವ್' ಎಂದರೆ ಅದೇ ಒಂದು ಆನಂದ ಆತನಿಗೆ! ಎಲ್ಲರೂ ತಮಗೆ ಹೆಚ್ಚಾಗಿದ್ದ ರೇಶನ್‌ನ್ನು ಬೆಕ್ಕಿಗೆ ಕೊಡುವ ಔದಾರ್ಯವನ್ನು ತೋರಿಸುತ್ತಿದ್ದರೆ, ಈತನು ತನಗೆ ಹೆಚ್ಚು—ಕಡಿಮೆ ಎಂಬುದನ್ನು ಲೆಕ್ಕಿಸದೆ, ಬೆಕ್ಕನ್ನು ಮೊದಲು ಉಪಚರಿಸುತ್ತಿದ್ದನು. ಅದು ಮೈಬಿಡತೊಡಗಿತು. ಮುಂದೆ ಹಾಯ್ದು ಹಲ್ಲು, ಹುಟ್ಟಿನಿಂದ ಬೆಳಿಸಿದ ಗಡ್ಡದ ಸ್ಥೂಲದೇಹಿಯಾದ ತನ್ನನ್ನು ಕಂಡರೆ ತನ್ನ ಮೈನಾತಕ್ಕೂ, ರೂಪಕ್ಕೂ ಮುರುಟಿಕೊಂಡು ಸಂಗಡಿಗರು ದೂರದೂರವೇ ಇರುತ್ತಿದ್ದುದನ್ನು ಕಂಡು ಆತನು ಒಳಗೊಳಗೇ ನೊಂದುಕೊಂಡಿದ್ದನು. ಆದರೆ, ಹಾಗೆ ನೋವಿನಲ್ಲಿಯೇ ನವೆಯುತ್ತಿದ್ದ ವಿಜಯಸಿಂಗನಿಗೆ—ಈಗ ಬಿಡುವೂ ಇಲ್ಲ, ಕೊರಗೂ ಇಲ್ಲ; ಬೆಕ್ಕು ಅವನಿಗೊಂದಿಷ್ಟು ಸಮಾಧಾನಕ್ಕೆ ಕಾರಣವನ್ನು ಕಲ್ಪಿಸಿಕೊಟ್ಟಿತ್ತು.

ಆದರೆ—ಈ ಸೌಭಾಗ್ಯ ಬಹಳ ದಿನ ಉಳಿಯಲಿಲ್ಲ. ಇನ್ನು ಕೆಲವೇ ದಿನಗಳಲ್ಲಿ 'ಬ' ಕಂಪನಿಯು ಪ್ರತ್ಯಕ್ಷ ಯುದ್ಧರಂಗಕ್ಕೆ ಧುಮುಕಬೇಕಾಗಿತ್ತು. ಇದು ಜಪಾನಿಗಳ ಒಂದು ಪಾಳ್ಯವನ್ನು ವಶಪಡಿಸಿಕೊಳ್ಳಲು ಮಾಡಿದ ಹಂಚಿಕೆಯಾಗಿದ್ದಿತು. ಪ್ರ್ಯಾಫಾದಲ್ಲಿ ಬಂದು ಕೆಲವೇ ದಿನಗಳಾಗಿದ್ದರೂ ಸೈನಿಕರಿಗೆ ಹೊತ್ತುಹೊತ್ತಿಗೆ ಊಟ—ನಿದ್ದೆ ಸಿಕ್ಕುವುದಕ್ಕಾರಂಭವಾಗಿತ್ತು. ಮತ್ತೀಗ ಕಾನನಗಳಲ್ಲಿ ಕಾದುತ್ತ ಕಾಡುಮೃಗಗಳಂತೆ ಗಿಡಗಳ ಹೊದರಿನಲ್ಲಿಯೋ, ನರಿಗಳ ಗೂಡುಗಳಲ್ಲಿಯೋ ರಾತ್ರಿಗಳನ್ನು ನೂಕುತ್ತ ಹೊರಗೆ ಇಣಿಕಿ ನೋಡುವುದಕ್ಕೂ ಅಳುಕುತ್ತ ಇರಬೇಕೆಂದರೆ ಯಾರಿಗೆ ತಾನೇ, ಬೇಕಾದೀತು! ಊಟಕ್ಕೂ ಅವಕಾಶವಿಲ್ಲ. ಕುಡಿಯಲು ನೀರು ಎಲ್ಲಿ ದೊರೆತೀತೆಂದು ಹೇಳುವಂತಿಲ್ಲ. ಸಾಲದ್ದಕ್ಕೆ ಯಾವ ಹುತ್ತದಲ್ಲಿ ಎಂತಹ ಹಾವಿದೆಯೋ ಎಂಬ ಹೆದರಿ ಹೆಜ್ಜೆ ಹೆಜ್ಜೆಗೆ! ಅಲ್ಲದೆ ಅಡಿಗಡಿಗೆ ಎದುರಿಸಬೇಕಾದ ಜಪಾನೀಯರ ಗುಂಡುಗಳ ಬಾಯಿಂದ ಬದುಕಿ ಬರಬಹುದೆಂಬ ವಿಶ್ವಾಸವು ಯಾರಿಗೂ ಇರಲಿಲ್ಲ. ಆದರೂ ಕರ್ತವ್ಯ, ಹೋಗಬೇಕು! ಹೋಗಲೇಬೇಕು! " ಈ ಯುದ್ಧ ಏಕೆ ಬೇಕು ? " ಎಂಬ ಪ್ರಶ್ನೆ ತಲೆಯೆತ್ತಬಹುದಾಗಿದ್ದಿತಾದರೂ—ಎತ್ತರದ ದಾರಿ, ಅತ್ತಿತ್ತ ನೋಡುವಂತಿಲ್ಲ—ಮುಂದೆ ಸಾಗುವದೇ ಒಂದು ಕೆಲಸ!

ವಿಜಯಸಿಂಗನಿಗೆ ಹಿಂದುಮುಂದಿನ ಚಿಂತೆಯೆಂಬುದೇ ಗೊತ್ತಿರಲಿಲ್ಲ, ಈವರೆಗೆ. ಬಾಳಿನಲ್ಲಿ ಆತನ ಅಂತಃಕರಣವನ್ನು ಸೆಳೆದ ಸಂಗತಿಗಳೇ ಒದಗಿರಲಿಲ್ಲ. ಮನವೆಲ್ಲ ಒಂದು ಬಗೆಯ ಶೂನ್ಯ ಸ್ಥಿತಿಯಲ್ಲಿತ್ತು. ಆದರೆ ಬರಿದೊ ಬರಿದಾದ ಆತನ ಮನಸ್ಸು ಈಗ ಒಂದು ದೊಡ್ಡ ತೊಡಕಿನಲ್ಲಿ ಸಿಕ್ಕುಬಿದ್ದಿತ್ತು. ಹಾಗೆ ನೋಡಿದರೆ—ಆತನಿಗೆ ಯಾವ ಸಮಸ್ಯೆಯೂ ದೊಡ್ಡದಾಗುತ್ತಿರಲೇ ಇಲ್ಲ, ಇದುವರೆಗೆ! ಆದರೆ ಬೆಕ್ಕಿನ ಸಲುಗೆಯಾದಂದಿನಿಂದ ಮಾತ್ರ ಆತನ ಮನಃಸ್ಥಿತಿಯೇ ಬದಲಾಗಿ

ದ್ದಿತು. ಅಂತೆಯೆ ಕಮಾಂಡಿಂಗ ಆಫೀಸರರು ಬೆಕ್ಕಿನ ಮೋಹದಲ್ಲಿ ಕರ್ತವ್ಯಕ್ಕೆ ತಪ್ಪೀರಿ, ಎಚ್ಚರ ! ಎಂದು ಮೊದಲೇ ಬಜಾಯಿಸಿದ್ದರು. "ಆ ಬೆಕ್ಕು ನಮ್ಮೆಲ್ಲರ ಸಮಾಧಿಗೂ ಕಾರಣವಾಗಬಹುದು..........ಆದ್ದರಿಂದ...." ಎಂದು ಮುಂತಾಗಿ ವಿಜಯಸಿಂಗನಿಗೆ ತಿಳಿಹೇಳಿದ್ದರು. ವಿಜಯಸಿಂಗನಿಗೆ ಇದರ ಅರಿವು ಇದ್ದಿಲ್ಲ ವೆಂತಲ್ಲ. ಆದರೆ ಆ ಬೆಕ್ಕನ್ನು ಬಿಟ್ಟು ಹೊರಡಲು ಕಾಲು ಏಳದಾದವು. ತಾನು ಅದನ್ನು ಬಿಟ್ಟುಹೋದರೆ, ಅದನ್ನು ನೋಡಿಕೊಳ್ಳುವವರು ಯಾರು ?--ಎಂಬ ವಿಚಾರ-ಪರಂಪರೆಯ ಚಕ್ರವು ತಲೆಯಲ್ಲಿ ಭರದಿಂದ ತಿರುಗಹತ್ತಿತ್ತು. ಇಂತಹ ಪ್ರಶ್ನೆಗಳು--ಆತನು ತನ್ನ ಮನೆಬಿಟ್ಟು ಬರುವಾಗಲೂ ಆತನ ಮನಸ್ಸಿನಲ್ಲಿ ಹೊಳೆ ದಿರಲಿಕ್ಕಿಲ್ಲ ! ಆದರೆ....; ಹೌದು ಅದು ನಿಜವೇ ! ಆತ್ಮೀಯರನ್ನು ಅಗಲುವಾಗಲೇ ಅಲ್ಲವೇ--ಮನಸ್ಸಿಗೆ ನೋವಾಗುವುದು ? ನೆಚ್ಚಿದ ಮೂಕಪ್ರಾಣಿಯೇ ಇರಲಿ; ಮೆಚ್ಚಿನ ಹೆಂಡತಿಯೇ ಇರಲಿ. ಮನದಲ್ಲಿ ಮೂಡುವ ಭಾವನೆ ಒಂದೇ ಬಗೆಯ ದಲ್ಲವೇ ?

ವಿಜಯಸಿಂಗನಿಗೆ ಸೇನಾಪತಿಯ ಆಜ್ಞೆಯಂತೆ ರಣಭೂಮಿಗೆ ಹೊರಡದೆ ಗತಿಯಿದ್ದಿಲ್ಲ. ಹಿಂದುಳಿಯಲಿರುವ 'ಎಚ್' ಕಂಪನಿಯ 'ಮೆಸ್ಸಿ'ನ ಅಡಿಗೆಯವನಿಗೆ ಆ ಬೆಕ್ಕಿನ ಯೋಗಕ್ಷೇಮವನ್ನು ನೋಡಿಕೊಳ್ಳಲು ತಿಳಿಸಿದನು. ಆ ಬಲ್ಲವನ ಮೈಬಣ್ಣ ಬೆಕ್ಕಿಗಿಂತಲೂ ಕಪ್ಪು; ಕೊಬ್ಬಿದ ದೇಹ; ಸಾಲದ್ದಕ್ಕೆ ಅವನಿಗೂ ಬೆಕ್ಕಿನ ಕಣ್ಣು ! ವಿಜಯಸಿಂಗನು ಸಾಕಷ್ಟು ವಿಚಾರಮಾಡಿ ಯೋಗ್ಯನಾದವನಿಗೇ ಆ ಬೆಕ್ಕನ್ನು ಒಪ್ಪಿಸಲು ನಿರ್ಧರಿಸಿದನೆಂದು ತೋರುತ್ತದೆ. ಅಡಿಗೆಯವನೂ ಸಮಾನ ಶೀಲದಿಂದಲೋ ಏನೋ ಎಂಬಂತೆ ಬೆಕ್ಕನ್ನು ಮೆಚ್ಚಿ ಬೆಣ್ಣೆ-ಬ್ರೆಡ್‌ಗಳನ್ನು ಕೊಟ್ಟನು.

ವಿಜಯಸಿಂಗನಿಗೆ ಹೊರಡುವಾಗ ಉಂಟಾದ ಕಳವಳ ಹೇಳತೀರದು. ಒಮ್ಮೆ ಹಿಂದಿರುಗಿ ನೋಡಬೇಕೆಂದನು. ಕಣ್ಣಲ್ಲಿ ನೀರು ತುಂಬಿ ಬಂತು. ಅಷ್ಟೇ ವೇದನೆ ಯಿಂದ ಬೆಕ್ಕು ತನ್ನನ್ನೇ ನೋಡುತ್ತಿದ್ದಂತೆ ಭಾಸವಾಯಿತು, ಆತನಿಗೆ; ಹೆಚ್ಚು ಹೊತ್ತು ನೋಡುವುದಕ್ಕೆ ಆಗದೆ ಭಾರವಾದ ಹೃದಯದಿಂದ ಬೇರೊಂದೆಡೆಗೆ ಗಕ್ಕನೆ ಮೋರೆ ತಿರುವಿದ. ಅಂದು 'ಬಿ' ಕಂಪನಿ ಕಾಳಗಕ್ಕೆ ಅಣಿಯಾಗಿ ಮುನ್ನಡೆಯಿತು. ವಿಜಯಸಿಂಗನೂ ಹೊರಟನು. ಆದರೆ ಬೆಕ್ಕಿನ ಚಿತ್ರವೇ ಕಣ್ಣೆದುರು ಕಟ್ಟುತ್ತಿತ್ತು. ಈ ನೆವದಿಂದ ಮರೆತುಹೋದ ಹಿಂದಿನ ಹಳೆಯ ನೆನಹುಗಳು ಭುಗಿಲ್ಲನೆ ತಲೆಯೆತ್ತಿ ದುವು. ಹೆಂಡತಿ, ತಾಯಿ, ಮಗು ಎಲ್ಲರನ್ನೂ ಅಗಲಿದಂತಹ ದುಃಖ, ಒಮ್ಮೆಲೆ ಆತನಲ್ಲಿ ಒತ್ತರಿಸಿ ಬಂತು.

ವಿಜಯಸಿಂಗನಿದ್ದ ಕಂಪನಿ, ಕೆಲವು ದಿನ ಮುಂದೆ ಸಾಗುತ್ತ ಮೊದಲು ತಳ ಊರಿದ್ದ ಸ್ಥಳದಿಂದ ಬಹು ದೂರ ಹೋಗಿತ್ತು. ಒಂದು ಇರುಳು ಒಂದು ಕಂಪನಿ ಆ ಅಡವಿಯ ಅಂಚಿನಲ್ಲಿ ಬೀಡು ಬಿಟ್ಟಿದ್ದಿತು. ಈ ಬೀಡಾರ ಎಂತಹದು?

ಗುಡಾರ-ಡೇರೆಗಳ ಆಸರವಲ್ಲ ಮತ್ತೆ. ಎಲ್ಲರಂತೆ ತಾನೂ ಒಂದು ಹೊದರಿನಲ್ಲಿ ಅವಿತು ಕೊಂಡು ವಿಜಯಸಿಂಗನು ವಿಶ್ರಮಿಸಿದ್ದನು. ನಡುರಾತ್ರಿಯಲ್ಲಿ ಕೈಗೆ ಏನೋ ಮೆತ್ತಗೆ ತಗುಲಿದಂತಾಯಿತು. ಕೈಚಾಚಿ ನೋಡುತ್ತಾನೆ: ಹೌದು, ಅದೇ........ ತನ್ನದು ಇದು ಕನಸೋ ? ಅಲ್ಲ– ಅಲ್ಲ ಕನಸಲ್ಲ ! ಅಕೋ, ಅಲ್ಲಿಯೇ ಇದೆ – ಆ ಬೆಕ್ಕು! ಅದು ಆತನ ಮಗ್ಗುಲಲ್ಲಿಯೇ ಬಂದು ಮಲಗಿದೆ! ಕೈ ಸೋಂಕಿದಾಗ ಅದು ಮೆತ್ತಗೆ – ಮ್ಯಾಂವ್ – ಗುರುಗುರ್ – ಮ್ಯಾಂವ್ ಎಂದಾಗ, ಆ ಕತ್ತಲಲ್ಲೂ ಅದೇ ಆ ಬೆಕ್ಕೆಂದು ತಟ್ಟನೆ ಆತನಿಗೆ ತಿಳಿಯಿತು. ಆತನಿಗೆ ಹಿಡಿಸಲಾರದ ಆನಂದ! ಆದರೆ ಮರುಚಣದಲ್ಲಿಯೇ ಕಮಾಂಡಿಂಗ ಆಫೀಸರರು ಕೊಟ್ಟ ಎಚ್ಚರದ ಗಂಭೀರ ನುಡಿ ಆತನ ಕಿವಿಗಳಲ್ಲಿ ನಿನದಿಸಹತ್ತಿತು. ತತ್‌ಕ್ಷಣವೇ ಮೈ ನಡುಕು! ಬೆಕ್ಕು ಮೇಲಧಿಕಾರಿಗಳ ಕಣ್ಣಿಗೆ ಬಿದ್ದರೆ, ಅದರ ಗತಿ ಏನು ? ಕಾಳಗದ ಕಟ್ಟಳೆಗಳು ಅದೆಷ್ಟು ಕಠೋರವಾದುವು! ಕ್ರೂರವಾದುವು ! ಕಲ್ಪನಾಲೋಕದ 'ಢಂ'ದಿಂದಲೇ ವಿಜಯಸಿಂಗನು ಥರಥರನೇ ನಡುಗಿದನು. ಬೆಕ್ಕು ಆತನ ಅವಸ್ಥೆಯನ್ನು ಅರಿತೋ ಏನೋ ಆತನ ಮೊಗದ ಹತ್ತರ ತನ್ನ ಮೊಗವನ್ನು ಎತ್ತಿ ನಲವುದೋರಹತ್ತಿತು. ಈ ಮೊದಲು ಗುಂಡಿನ ಸಪ್ಪಳ ಆತನಿಗೆ ಎಂದೂ ಹೆದರಿಕೆಯನ್ನುಂಟುಮಾಡಿರಲಿಲ್ಲ. ಆದರೆ ಅಚ್ಚುಮೆಚ್ಚಿನ ಬೆಕ್ಕಿಗೆ ಗುಂಡು ತಾಗಿದರೆ ಏನು ಗತಿ, ಎಂಬ ಭೀತಿಯು ಆತನನ್ನು ಆವರಿಸಿತು.

ಇನ್ನೇನು ? ಮೆಲ್ಲಗೆ ಹಿಂತಿರುಗಿ ಹೋಗಿ ಅದನ್ನು ಮತ್ತೆ 'ಎಚ್' ಕಂಪನಿ ಯಲ್ಲಿ ಬಿಟ್ಟು ಬರಬಾರದೇಕೆ, ಎಂಬ ವಿಚಾರವು ತಲೆಯೆತ್ತಿ ಪೀಡಿಸತೊಡಗಿತು. ಸರಿ — ಹೋಗುವದಾದರೂ ಹೇಗೆ ? ............ ಹೆದರಿಸಿ ಹೊಡೆದು ಹಿಂದಕ್ಕಟ್ಟ ಬೇಕೇ ? ಇಷ್ಟೊಂದು ದಿನ ತನ್ನ ಪಂಚಪ್ರಾಣದಂತೆ ಭಾವಿಸಿದ್ದ ಅದರ ಮೇಲೆ ಕೈ ಎತ್ತುವದಾದರೂ ಹೇಗೆ ? ಅಷ್ಟರಲ್ಲಿ ಬೆಕ್ಕು ಮೆತ್ತಗಿನ ದನಿಯಿಂದ 'ಮ್ಯಾಂ, ಮ್ಯಾಂ' ಎಂದಿತು. ಬೆಕ್ಕು ಹಸಿದಿರಬೇಕು. ಅಡಿಗೆಯವನು ಅದನ್ನು ಉಪ ವಾಸ ಕೆಡಹಿದನೋ ಎಂಬ ಸಂದೇಹವೂ ತಲೆದೋರಿತು. ಸಲುಗೆಯಲ್ಲಿ ಬೆಕ್ಕು ಮತ್ತೊಮ್ಮೆ 'ಮ್ಯಾಂ' ಅಂದಿತು. ಅದು ಸದ್ದು ಮಾಡಬಾರದೆಂದು ವಿಜಯ ಸಿಂಗನು ಅದಕ್ಕೆ ಒಂದು ಏಟು ಕೊಟ್ಟನು; ಅದು ಹೊಡೆತಕ್ಕೆ ಓಡಿಹೋದರೂ ಹೋಗಲಿ ಎಂಬುದು ಆತನ ವಿಚಾರ. ಆದರೆ ವಿಜಯಸಿಂಗನ ಆ ಪೆಟ್ಟು ಸಿಟ್ಟಿನ ರಭಸದ್ದಾಗಿರಲಿಲ್ಲ. ಸರಿಯುಲಿಲ್ಲ. ಕೊನೆಗೆ ಅದಕ್ಕೆ ಕರುಣೆಯಿಂದ ಹೇಳಿದ : "ಏನು ಇಲ್ಲವಲ್ಲ ನನ್ನ ಹತ್ತಿರ ! ಹೋಗು ಹಿಂದಿರುಗಿ ಹೋಗು; ಅಲ್ಲಿ ಬೇಕಾದಷ್ಟಿದೆ" ಎಂದು ಆತನು ಮತ್ತೆರಡು ಸಲ ಹೊರದೂಡಿದ. ಬೆಕ್ಕು ಇದನ್ನೆಲ್ಲ ಅರಿತೋ ಏನೋ ಐದಾರು ಬಾರಿ ಮ್ಯಾಂವ್, ಮ್ಯಾಂವ್ ಎಂದು ಕೊನೆಗೊಮ್ಮೆ ತಾನಾಗಿ ಹೊರಟುಹೋಯಿತು. ಆಗ ವಿಜಯನಿಗೆ ಆದುದು, ಅಗಲಿಕೆಯ ದುಃಖವೋ ........ ? ಅಥವಾ ಅದು ಬದುಕಿತಲ್ಲ ! ಎಂಬ ಆನಂದವೋ —

ತಿಳಿಯದಂತಿತ್ತು, ಅವನ ಮನಸ್ಸಿನ ಹೊಯ್ದಾಟ. ಬೆಳಕು ಹರಿದಾಗ ಆ ಬೆಕ್ಕಿನ ಸುಳಿವು ಮಾತ್ರ ಅಲ್ಲಿ ಇರಲಿಲ್ಲ.

ಮರುದಿನ ' ಬ ' ಕಂಪನಿ, ಮತ್ತೆ ಮುನ್ನಡೆಯಿತು. ಕಾಡಿನಲ್ಲಿಯ ಯುದ್ಧಾವೇಶದ ಆ ಮುನ್ನಡೆಯ ಅಡೆತಡೆಗಳಲ್ಲಿ ಬೆಕ್ಕಿನ ಬಗ್ಗೆ ವಿಚಾರಮಾಡುವಷ್ಟು ಬಿಡುವೂ ಇರಲಿಲ್ಲ. ಆದರೂ ವಿಜಯನಿಗೆ ಮಾತ್ರ ಒಳಗೊಳಗೇ ಒಂದು ಸಮಾಧಾನ, ಸುಖ : ಹಲವು ಕಾಲ ಅಗಲಿದ ಎರಡು ವಿರಹಿ ಜೀವಿಗಳ ಭೆಟ್ಟಿಯಾದ ಬಳಿಕ ಉಂಟಾಗುವ ಸಮಾಧಾನದ ಸುಖವನ್ನು ತಾನು ಅನುಭವಿಸುತ್ತಿದ್ದ ಹಾಗೆ ಆತನಿಗೆ ಎಸಿಸುತ್ತಿತ್ತು ............ ಮುಂದೆ — ಮತ್ತೆ ನಾಲ್ಕಾರು ದಿನಗಳು ಉರುಳಿದವು; ಕಂಪನಿ ಮತ್ತೆ ನಾಲ್ಕಾರು ಬಿಡಾರಗಳನ್ನು ದಾಟಿತ್ತು. ಈ ದಂಡಿನವರು ಮುಂದುವರಿದಂತೆ ಜಾಪಾನಿಗಳು ಹಿಡಿತದಿಂದ ಹಿಂಜರಿಯುತ್ತಿದ್ದರು. ಒಬ್ಬರೊಬ್ಬರನ್ನು ಆವೇಶದಿಂದ ಎದುರಿಸಿ, ಕಾಳಗಕ್ಕೆ ಪ್ರಾರಂಭವಾಗಿರಲಿಲ್ಲ. ಒಮ್ಮೆ ವಿಜಯಸಿಂಗನು ನಿದ್ದೆಯಲ್ಲಿರುವಾಗ ವಾಡಿಕೆಯ ' ಮ್ಯಾಂವ ' ಎಂಬ ದನಿ ಆತನ ಕನಸಿನ ಕದವನ್ನು ಭೇದಿಸಿ ಕೇಳ ಬಂತು. ಅದು ತೀರ ಮೆಲುದನಿಯಾಗಿತ್ತು. ಆದರೂ ವಿಜಯಸಿಂಗನ ಹೃದಯವನ್ನು ಅದು ಭೇದಿಸಿತು. ಆ ಹಿಂದಿನ ರಾತ್ರಿಯಲ್ಲಿ ಆ ಬೆಕ್ಕು ಅವನಲ್ಲಿ ಬಂದಾಗ ಕತ್ತಲಲ್ಲಿ ಅದನ್ನು ವಿಜಯಸಿಂಗನಿಗೆ ಚೆನ್ನಾಗಿ ನೋಡುವದಕ್ಕೆ ಆಗಿರಲಿಲ್ಲ. ಇಂದು ಆತನ ಬಳಿ ಟಾರ್ಚ ಲಾಯಿಟ ಇದ್ದಿತು. ಇಂದಿನ ಆ ಮೆಲುದನಿಯ ಮೂಲಕ ವಿದ್ಯುತ್ತಿನ ಬೆಳಕಿನಲ್ಲಿ ನೋಡಬೇಕೆಂಬ ಕುತೂಹಲವುಂಟಾಯಿತು. ಬೆಕ್ಕನ್ನು ನೋಡಿ ನೊಂದುಕೊಂಡ. ಆ ಬೆಕ್ಕಿನ ಗುರುತು ಸಿಕ್ಕುವುದೂ ಕಷ್ಟವಾಗಿತ್ತು. ಬೆಕ್ಕಿನ ಆ ಅವಸ್ಥೆ ತೀರ ಶೋಚನೀಯವಾಗಿದ್ದಿತು. ಕೊರಗಿದ ದೇಹ ! ಅಥವಾ ದೇಹವೇನು ? — ಎಲುವಿನ ಹಂದರವೆನ್ನಿ : ನೀರು ಒಸರುತ್ತಿರುವ ಕಂದಿ ಒಳಸೇರಿದ ಆ ಕಣ್ಣು ! ಈ ಪಾಡುಕಂಡು ವಿಜಯಸಿಂಗನ ಅಂತಃಕರಣದ ಮೇಲೆ ಬರೆ ಎಳೆದಂತೆ ಎನಿಸಿತು. ತನ್ನ ಆಹಾರದ ಡಬ್ಬಿಗಳನ್ನು ಕೈಯಲ್ಲಿ ತೆಗೆದುಕೊಂಡನು. ಅದನ್ನು ಕಂಡೊಡನೆಯೇ ಬೆಕ್ಕು ಹಾತೊರೆದು ನಾಲಿಗೆ ಸವರುತ್ತ ಮುಂದೆ ಬಂದಿತು. ಆದರೆ ಹಾ !.... ಒಮ್ಮೆಲೆ ಆತನಿಗೆ ಹೊಳೆಯಿತು. ಬೆಕ್ಕಿಗೆ ಈ ದೈಹಿಕ ಸ್ಥಿತಿಯಲ್ಲಿ ತಿನ್ನಲು ಕೊಟ್ಟರೆ ಬೆಳಗಾಗುವಷ್ಟರಲ್ಲಿಯೇ ಅದರ ಸಾವನ್ನು ಬಯಸಿದಂತೆಯೇ ಸರಿ ! ಈ ವಿಚಾರವು ಬಂದೊಡನೆ ಆತನು " ಬೇಡ — ಹುಶ್ - ಹುಶ್ ಹೋಗು — ನಡೆ " ಎಂದ. ಆ ಬೆಕ್ಕು ಸ್ವಲ್ಪವೂ ಸರಿಯಲಿಲ್ಲ. ಕೈಯೊಳಗಿನ ಟಾರ್ಚಲಾಯಿಟಿನಿಂದಲೇ ಒಂದು ಬಲವಾದ ಏಟನ್ನಿತ್ತನು. ಆ ಏಟಿನಿಂದ ಬವಳಿ ಬಂದಂತಾಗಿ ಒಂದರಕ್ಷಣ ಅಲ್ಲಿಯೇ ಒರಗಿತು. ಬೆಕ್ಕು ಸತ್ತಿತೇನೋ ಎಂದು ನಿಟ್ಟುಸಿರು ಬಿಡುವಷ್ಟರಲ್ಲಿ ಮತ್ತೆ ಧಿಗ್ಗನೆ ಎದ್ದು ನಾಗಾಲೋಟದಿಂದ ಓಡಿತು.

ಮೂರನೇ ರಾತ್ರಿ ಆ ಬೆಕ್ಕು ಇತ್ತ ಸುಳಿಯಲಿಲ್ಲ. ವಿಜಯಸಿಂಗನಿಗೂ ನಿದ್ರೆ ಬರಲಿಲ್ಲ.

ಏಳನೆಯ ದಿನ 'ಬ' ಕಂಪನಿ ಜಪಾನಿ ದಳಗಳ ಬೆಂಬತ್ತಿ ಇನ್ನೂ ಭಯಾನಕ ಪ್ರದೇಶವನ್ನು ಸೇರಿತು. ಜಪಾನೀಯರು ಅಡಗಿ ಹಿಂದೆ ನುಸುಳಿ ಹೋಗುತ್ತಿದ್ದರು. ಅವರನ್ನು ಹುಡುಕುವ ಕೆಲಸ ವಿಜಯಸಿಂಗನ ಪಾಲಿಗೇ ಬಂದಿತ್ತು. ರಹಮತ ನೆಂಬವನೊಬ್ಬನೊಂದಿಗೆ ಆತನು ಮುನ್ನಡೆದಿದ್ದ. ನಾವು ಜಪಾನಿಗಳ ಎಷ್ಟು ಸಮೀ ಪಕ್ಕೆ ಬಂದಿದ್ದೇವಲ್ಲ, ಎಂದು ಒಂದು ಕ್ಷಣ ಭಯಗೊಂಡರು. ಬಲು ಜಾಗರೂಕತೆ ಯಿಂದ ಒಂದೊಂದೇ ಹೆಜ್ಜೆಯಿಡುತ್ತ ಸುತ್ತಲೂ ನಿರೀಕ್ಷಿಸತೊಡಗಿದರು. ಅಲ್ಲಿ ಎಲ್ಲೆಡೆಗೆ ಬಿದ್ದಿದ್ದ ಒಡಕು ಡಬ್ಬಿಗಳು, ಸಿಗರೇಟಿನ ಪೆಟ್ಟಿಗೆಗಳು, ಕಾಗದದ ಚೂರು ಇತ್ಯಾದಿಗಳು – ಜಪಾನರು ಅಲ್ಲಿಂದ ಪಲಾಯನ ಮಾಡಿದುದನ್ನು ಸೂಚಿಸುತ್ತಿ ದ್ದುವು. ಅಲ್ಲಿಯೇ ಒಂದೆಡೆ ಟೇಬಲ್ಲಿನ ಮೇಲೆ ಊಟಕ್ಕಾಗಿ ಬಡಿಸಿಟ್ಟ ಪ್ಲೇಟು ಗಳು! "ವಿಜಯಸಿಂಗ! ನಾವು ಬಂದದ್ದು ಗೊತ್ತಾಯಿತೋ ಏನೋ ಈ ಕಳ್ಳರಿಗೆ. ಊಟ ಬಿಟ್ಟೇ ಓಡಿಹೋಗಿದ್ದಾರೆ, ನೋಡಿದಿರಾ?" ಎಂದು ರಹಮತಖಾನನು ಸವಿ ಸವಿ ತಿನಸಿನ ಪದಾರ್ಥಗಳಿಂದ ತುಂಬಿದ ಪ್ಲೇಟಿನತ್ತ ನೋಡುತ್ತಿರುವಾಗಲೇ, ಎಲ್ಲಿಂದಲೋ ಮ್ಯಾಂವ್ ಎಂಬ ದನಿ ಬಂದಂತಾಯಿತು. ನೋಡುತ್ತಾರೆ, ಸೊರಗಿ ಕಡ್ಡಿಯಂತಾದ ಆ ಬೆಕ್ಕು ಅಲ್ಲಿಯೇ ಆ ಜಪಾನಿಗಳ ಒಂದು ಬೀಡಾರದ ಮೂಲೆ ಯಲ್ಲಿ ಮಲಗಿದ್ದಿತು.

"ಸರಿ; ಶತ್ರುಗಳು ಓಡಿಹೋಗಿದ್ದಾರೆ ಬಿಡು. ಇಲ್ಲದೇ ಹೋದರೆ ಆ ಬೆಕ್ಕನ್ನು ಜಪಾನಿಗಳು ಉಳಿಯಗೊಡುತ್ತಿದ್ದರೇ?" ರಹಮತನೆಂದ. ವಿಜಯಸಿಂಗನಿಗೆ ಬೆಕ್ಕಿನ ಹೊರತು ಬೇರಾವುದರ ಕಡೆಗೂ ಗಮನವಿದ್ದಿಲ್ಲ.

"ಜಪಾನೀಯರು ಓಡಿಹೋಗಿದ್ದಾರೆ! ನಡೆಯೋ; ಊಟ ಬಡಿಸಿಟ್ಟಿದ್ದಾರೆ; ಹೊಡೆಯೋಣ ನಡೆ – ಇಷ್ಟು ದಿನಗಳ ಟಿನ್‌ರೇಶನ್‌ದಿಂದ ಹೊಟ್ಟೆಯೇ- ತುಂಬಿ ದಂತಿಲ್ಲ- ?" ಎಂದು ರಹಮತನು ಅವಸರ ನಡಸಿದ್ದನು.

ವಿಜಯಸಿಂಗನು ಈಗಲೂ ಮಾತಾಡಲಿಲ್ಲ; ಸ್ವಲ್ಪ ತಾಳಲು ಮಾತ್ರ ಸೂಚಿಸಿ ದನು. ಆತನ ಮನದಲ್ಲಿ ಒಂದೇ ಯೋಚನೆ. ನಾನು ಏನು ಮಾಡಿದರೂ ಬೆಕ್ಕು ನನ್ನ ಬೆನ್ನು ಬಿಡಲೊಲ್ಲದಲ್ಲ! ನನಗಾಗಿ ಸುಮ್ಮನೆ ಜೀವ ಕಳೆದುಕೊಳ್ಳುತ್ತಿದೆ..... ಎಂದು. ಅಷ್ಟರಲ್ಲಿ ಬೆಕ್ಕು ಬಡಿಸಿಟ್ಟ ಪ್ಲೇಟಿನ ಹತ್ತಿರವೇ ಬಂದಿತು ವಿಜಯಸಿಂಗನ ಜೊತೆಗಾರ ರಹಮತನಿಗೆ ಅಸೂಯೆ ತಡೆಯಲಾಗದೆ ಬೆಕ್ಕಿಗೆ ಒಂದು ಕಲ್ಲೆಸೆದನು. ವಿಜಯಸಿಂಗನ ವಿಚಾರವೇ ಬೇರೆ! ಹೇಗೂ ನಾಲ್ಕು ದಿನಗಳಿಂದ ಉಪವಾಸ ಮಾಡಿದೆ ಪಾಪ, ಒಮ್ಮೆ ತಿಂದುಕೊಳ್ಳಲಿ; ಮುಂದೆ ಆದದ್ದಾಗಲಿ ಎಂದುಕೊಂಡಿದ್ದ. ರಹಮತನ ಆ ಕಲ್ಲು ಬೆಕ್ಕಿನ ಬದಲು ಸರಿಯಾಗಿ ಆ ಪ್ಲೇಟಿಗೆ ಬಡಿಯಿತು. ಧಢಂ– ಎಂಬ ಸಪ್ಪಳ ಅವರನ್ನು ನಡುಗಿಸಿತು. ಕಿವಿ ಗಡಚಿಕ್ಕಿದವು. ಬಳಿಕ ಕಂಡ ದ್ದೇನು? ಆ ಟೇಬಲ್ಲೂ ಇಲ್ಲ; ಆ ಬಡಿಸಿದ ಪ್ಲೇಟೂ ಇಲ್ಲ. ಎಲ್ಲಾ ಚದರಿ ಚಲ್ಲಾ ಪಿಲ್ಲಿಯಾಗಿದ್ದುವು. ಇವರಿಬ್ಬರಿಗೂ ಚೇತರಿಸಿಕೊಳ್ಳಲು ಒಂದೆರಡು ನಿಮಿಷಬೇಕಾ

ದುವು. ನಂತರ ರಹಮತನೇ ಮುಂದುವರಿದು ಅಲ್ಲಿ ಜರುಗಿದುದನ್ನು ಪರೀಕ್ಷಿಸಿ ನೋಡಿ ಹೇಳಿದ........"ಸಿಂಗ, ಇದು ಜಪಾನಿಗಳ ಮೋಸದ ಒಂದು ತಂತ್ರವಿತ್ತು. ನೋಡಿದೆಯಾ ? ಆ ಬೆಕ್ಕು ಇಲ್ಲಿ ಬಂದಿರಲಿಲ್ಲವಾದರೆ ನಾನು ಕಲ್ಲು ಎಸೆಯುತ್ತಿರಲಿಲ್ಲ. ನಾವೇ ಆ ಊಟಕ್ಕಾಗಿ ಆಸೆಬಿಟ್ಟು ಹೋಗಿ ಸ್ವರ್ಗದ ಹಾದಿ ಹಿಡಿಯುತ್ತಿದ್ದೆವು ! ಆ ಬೆಕ್ಕು ನಮ್ಮ ಜೀವ ಉಳಿಸಿ ತಾನೇ ಸ್ವರ್ಗಕ್ಕೆ ಹೋಯಿತೇನೊ "

ವಿಜಯಸಿಂಗನಿಗಾದ ಕಸಿವಿಸಿಯು ಮಿತಿಮೀರಿತು. ಏನೂ ಮಾತಾಡಲು ಆಗಲಿಲ್ಲ. ತಲೆಹಿಡಿದು ಕುಕ್ಕರಿಸಿದನು. ದೊಪ್ಪನೆ ನೆಲಕ್ಕೆ ಬಿದ್ದನು. ಮೇಲಕ್ಕೆ ಕಣ್ಣೆತ್ತಲಿಲ್ಲ. ಈ ಬಗೆಯ ಅನುಭವವು ಆತನಿಗೆ ಇಷ್ಟು ದಿನದಲ್ಲಿ ಇದೇ ಮೊದಲು.

ಇಷ್ಟರಲ್ಲಿ ಇವರ ಬದಿಯಲ್ಲಿಯೇ ಏನೋ ಬಿದ್ದಂತೆ ಸಪ್ಪಳಾಯ್ತು. ಹಿಂತಿರುಗಿ ನೋಡುತ್ತಾರೆ ! ಆ ಜ್ವಾಲೆಯಲ್ಲಿ ಹುರುಪಳಿಸಿದ ಬೆಕ್ಕು ಸ್ಫೋಟದಲ್ಲಿ ಹಾರಿ ಇವರ ಬಳಿಯಲ್ಲಿಯೇ ಬಂದು ಬಿದ್ದಿದೆ ! ಅದರ ಕೊನೆಯ ದೃಷ್ಟಿಯು ಒಮ್ಮೆ ವಿಜಯಸಿಂಗನ ದೃಷ್ಟಿಯಲ್ಲಿ ನೆಟ್ಟಿತು; ಆ ಬೆಕ್ಕು ಕೊನೆಗೂ ಆತನ ಬಳಿಯೇ ತನ್ನ ದೇಹವನ್ನು ನೀಗಿತು.

(ಪ್ರಸಿದ್ಧ ಆಂಗ್ಲ ಕತೆಗಾರನಾದ ಕ್ಯೂ ಪ್ಯಾಟ್ರಿಕನ 'ಫ್ಯಾಟ್‌ಕ್ಯಾಟ್' ಎಂಬ ಕತೆಯನ್ನು ಅನುಸರಿಸಿ ಬರೆದುದು)

## ಅಭ್ಯಸನಗಳು

ಪ್ರಶ್ನೆಗಳು :—

(೧) ಬೆಕ್ಕು ತನ್ನನ್ನು ಮೆಚ್ಚಿದ್ದಕ್ಕಾಗಿ ವಿಜಯಸಿಂಗನಿಗೆ ಸಮಾಧಾನವಾಗಲು ಕಾರಣವೇನು ?

(೨) ಶೂನ್ಯ ಮನಸ್ಸಿನ ವಿಜಯಸಿಂಗನ ಜೀವನದಲ್ಲಿ ಈ ಬೆಕ್ಕಿನ ನಾದದಿಂದ ಉಂಟಾದ ಬದಲಾವಣೆಯೇನು ?

(೩) ವಿಜಯಸಿಂಗನು ಬೆಕ್ಕಿನ ಮೇಲೆ ತೋರಿದ ಮಮತೆಯ ಬೇರೆ ಬೇರೆ ಪ್ರಸಂಗಗಳನ್ನು ಹೇಳಿರಿ.

(೪) ಬಡಿಸಿಟ್ಟ ಊಟವನ್ನು ನೋಡಿದ ರಹಮತ ಮತ್ತು ವಿಜಯಸಿಂಗರ ಮನದಲ್ಲಿ ಮೂಡಿದವಿಚಾರಗಳಾವುವು ? ಇದರಿಂದ ಅವರ ಸ್ವಭಾವವು ಹೇಗೆ ವ್ಯಕ್ತವಾಗುವುದು ?

(೫) ರಣಭೂಮಿಯಲ್ಲಿ ಸೈನಿಕರ ಕಷ್ಟಮಯ ಜೀವನವನ್ನು ಬಣ್ಣಿಸಿರಿ.

ಭಾಷಾಭ್ಯಾಸ :—

(೧) ವಿನೋದ ವಿಚಾರ.

[೧] ಬೆಕ್ಕನ್ನು ನೋಡಿದಾಗ ಸೈನಿಕರು ನಕ್ಕರು.

[೨] ರಣಧೀರಸಿಂಗನಿಗೆ ಬೆಕ್ಕು ಕಂಡರೆ ಭೀತಿ.

[೩] ಮೇಲಧಿಕಾರಿಗಳ ಅಪ್ಪಣೆಯಿಲ್ಲದೆ ವಿಜಯಸಿಂಗನನ್ನು ಮೆಚ್ಚಬಾರದು ಎಂಬುದು ಬೆಕ್ಕಿಗೆ ತಿಳಿಯಲಿಲ್ಲ.

[೪] ಅಡಿಗೆಯವ ಮತ್ತು ಬೆಕ್ಕು ಇವರಿಬ್ಬರೂ ಸಮಾನ ಧರ್ಮದವರಿದ್ದರು.

ಮೇಲಿನ ವಾಕ್ಯಗಳಲ್ಲಿಯ ನಾಲ್ಕು ಪ್ರಕಾರದ ವಿನೋದಗಳನ್ನು ನಿರೀಕ್ಷಿಸಿರಿ.

(೧) ' ಒಬ್ಬ ಸಭ್ಯಗೃಹಸ್ಥನು ದಾರಿಯಲ್ಲಿ ಕಾಲು ಜಾರಿ ಬಿದ್ದನು.'

(೨) ' ಕೊಂಡ ಬೆಣ್ಣೆಯ ಲೆಕ್ಕ ಬಾಯಿಂದ ಬಗೆಹರಿಯದ್ದಕ್ಕೆ ಪ್ರೊಫೆಸರ ಪಾಟಿಯನ್ನು ತೆಗೆದು ಕೊಂಡದ್ದನ್ನು ನೋಡಿದಾಗ ಬೆಣ್ಣೆ ಮಾರುವ ಯಲ್ಲವ್ವನು ಪಕ್ಕನೆ ನಕ್ಕಳು.'

(೩) "ಹೊಲಸು ಬಟ್ಟೆಯನ್ನು ಧರಿಸಿದ ಓರ್ವ ವಿದ್ಯಾರ್ಥಿಗೆ ಶಿಕ್ಷಕರು 'ಹಂದಿಯು ನಿನಗೆ ಗೆಳೆಯನಾಗಬೇಕೆ ?' ಎಂದು ಕೇಳಿದರು."

ಈ ಮೂರು ವಾಕ್ಯಗಳಲ್ಲಿಯ ವಿನೋದವು ಮೇಲಿನ ಯಾವ ವಾಕ್ಯಗಳ ವಿನೋದಕ್ಕೆ ಹೋಲುವದು.

(೨) ' ಅವರು ರಾತ್ರಿಯನ್ನು ನೂಕಿದರು ' ' ಅವರು ರಾತ್ರಿಯನ್ನು ಕಳೆದರು ' ಇವುಗಳಲ್ಲಿರುವ ವ್ಯತ್ಯಾಸವೇನು ?

ಶಬ್ದವಿಚಾರ :—

(೧) ಕಾಮಿ (ಹೆಣ್ಣು), ಬಾವುಗ (ಗಂಡು); ಇದರಂತೆ ಆಡು, ಕುರಿ, ಹೇಂಟೆ ಇವುಗಳಿಗೆ ಪ್ರತಿ ಶಬ್ದಗಳನ್ನು ಹೇಳಿರಿ.

(೨) ಕಾಮಿಯ ಬದಲು ಕರಿಯ ಬಾವುಗ ಎಂದು ಕಥೆಗೆ ಹೆಸರನ್ನು ಕೊಡಬಹುದಾಗಿತ್ತೆ ?

(೩) ಪಡೆ, ನೆರೆ, ಹೊಳೆ, ತೆರೆ — ಇವುಗಳನ್ನು ಒಂದಕ್ಕಿಂತ ಹೆಚ್ಚು ಅರ್ಥಗಳಲ್ಲಿ ಉಪಯೋಗಿಸಿರಿ.

ವಾಕ್‌ಶಿಕ್ಷಣ:—

' ನಿಮ್ಮ ಕರ್ತವ್ಯವನ್ನು ಮಾಡದಿರಬೇಡಿರಿ ' ಎಂಬ ಈ ಮಾತನ್ನು ತಾಯಿ, ತಂದೆ ಶಿಕ್ಷಕ ಮತ್ತು ಸೇನಾಪತಿ — ಇವರು ಯಾವ ಯಾವ ಬಗೆಯಿಂದ ಹೇಳಬಹುದು ಎಂಬುದನ್ನು ಬರೆದು ಅಭಿನಯಿಸಿರಿ.

ಚರ್ಚೆ—

ನಾದವು ಕರ್ತವ್ಯಕ್ಕೆ ಅಡ್ಡಬರುತ್ತದೆ — ಇದನ್ನು ಚರ್ಚಿಸಿರಿ.

ಬರೆಹ:—

(೧) ಸೈನಿಕರು ಮನೆ ಬಿಟ್ಟು ಹೊರಡುವಾಗ

[೧] ಸೈನಿಕರ ಮನಃಸ್ಥಿತಿ.

[೨] ಮನೆಯ ಜನರ ಪ್ರತಿಕ್ರಿಯೆ.

[೩] ಊರ ಜನರ ಪ್ರತಿಕ್ರಿಯೆ.

ಇವುಗಳನ್ನು ಚಿತ್ರಿಸಿರಿ.

(೨) ಯುದ್ಧಕ್ಕೆ ಹೊರಟ ಸೈನಿಕರಿಗೆ ಆಗುವ ಸತ್ಕಾರ ಸಮಾರಂಭದ ವರ್ಣನೆಯನ್ನು ಬರೆಯಿರಿ.



# ೨೩. ಗೋಪಾಳಭಟ್ಟರ ಹುಲಿ

[ ಇದೊಂದು ನಗೆಬರಹ. ಲಾಭಕ್ಕೆ ಆಸೆಪಟ್ಟು ಮಾಡಿದ ವ್ಯವಹಾರದಲ್ಲಿ ಮುಂಧೋರಣವಿಲ್ಲದೆ ನಡೆದುಕೊಳ್ಳುವುದರಿಂದ ಇನ್ನೂ ಹೆಚ್ಚಿನ ಹಾನಿಗೆ ಜನ ಹೇಗೆ ಒಳಗಾಗವುದು ಎಂಬುದನ್ನು ಗೋಪಾಳಭಟ್ಟರ ಮೂಲಕ ವಿನೋದಕರವಾಗಿ ವಿವರಿಸಿದ್ದಾಗಿದೆ.]

ನಮ್ಮೂರಿಗೆ ಸುಧಾರಿಸಿದ ಪಟ್ಟಣದಿಂದ ಅತಿಥಿಗಳು ಬಂದರೆ ನಿಜವಾಗಿಯೂ ನಮ್ಮ ಊರಿನ ಪರಿಸ್ಥಿತಿಯನ್ನು ಕಂಡು ಅವರಿಗೆ ಕನಿಕರವೆನಿಸದೆ ಇರುವದಿಲ್ಲ. ಐದಾರು ಸಾವಿರ ಜನವಸತಿ ನಮ್ಮೂರಿನದು. ಇತ್ತ ಹಳ್ಳಿಯೂ ಅಲ್ಲ; ಅತ್ತ ಪಟ್ಟಣವೂ ಅಲ್ಲ. ಆದರೆ ಹಳ್ಳಿಯ ಎಲ್ಲ ಅನಾನುಕೂಲತೆಗಳೂ ಪಟ್ಟಣದ ಎಲ್ಲ ತುಟಾಗ್ರತೆಯೂ ಇಲ್ಲಿ ಕೂಡಿಕೊಂಡಿವೆ. ಸುದ್ದಿಯೆನ್ನುವ ಯಾವ ಸಂಗತಿಯೂ ಇಲ್ಲಿ ಒದಗುವದಿಲ್ಲ. ಸಭೆ, ಮೆರವಣಿಗೆ, ಪರಿಷತ್ತು ಅಥವಾ ಕನಿಷ್ಟ ಹೊಡೆದಾಟ ಬಡಿದಾಟಗಳು ಜರುಗಿದರೂ ಊರಿಗೊಂದು ಕಳೆ ಬರಬಹುದಾಗಿತ್ತು. ಆದರೆ ಅಂಥದೇನೂ ಸಂಭವಿಸುತ್ತಿರಲಿಲ್ಲವಾದ್ದರಿಂದ ಆಳವಾದ ಭಾವಿಯಲ್ಲಿರುವ ಆವೆಯಂತೆ ನಮ್ಮ ಆಯುಷ್ಯವು ಸಾಗಿದ್ದಿತು. ಆದರೆ ಆಗೀಗ ಒದಗಿದ ಚಿಕ್ಕ ಪುಟ್ಟ ಪ್ರಸಂಗಗಳು ಹತ್ತು ಹನ್ನೆರಡು ವರುಷಗಳಾದರೂ ನಮ್ಮ ನೆನಪಿನಲ್ಲಿ ಉಳಿದಿವೆ. ಇಂತಹದೇ ಒಂದು ಪ್ರಸಂಗ ನಮ್ಮ ಗೋಪಾಳಭಟ್ಟರ ಹುಲಿಯ ಕತೆಯಾಗಿದೆ.

ನಮ್ಮ ಊರಿಗೆ ಯಾವುದಾದರೂ ನಾಟಕ ಕಂಪನಿಗಳಾಗಲೀ ಸರ್ಕಸ್ಸು ಕಂಪನಿಗಳಾಗಲಿ ಬಂದುವೆಂದರೆ ಅವು ತಮ್ಮ ಕೊನೆಯ ಪಾಡಿಗಾಗಿಯೇ ಬರುತ್ತವೆಂದು ನಮ್ಮೂರಿನ ಖ್ಯಾತಿ. ಒಮ್ಮೆ ಇಂತಹದೇ ಒಂದು ಸರ್ಕಸ ಕಂಪನಿಯು ನಮ್ಮೂರಿಗೆ ಬಂದಿತು. ತಂಬೂ ತಲೆಯೆತ್ತಿತು. ತಂಬೂ ನಿಂತರೂ ಒಲೆ ಉರಿ ಕಂಡಿದ್ದಿಲ್ಲ. ಸರ್ಕಸ ಕಂಪನಿಯಲ್ಲಿ ಆನೆಯಿತ್ತು, ಹುಲಿ ಇತ್ತು; ಕುದುರೆಗಳೂ ಇದ್ದುವು. ಆದರೆ ಅಕ್ಕಿ ಮಾತ್ರ ಇರಲಿಲ್ಲ. ಮ್ಯಾನೇಜರರು ಬಹಳ ಚಿಂತೆಯಲ್ಲಿ ಬಿದ್ದರು. ಅವರಿಗೆ ಹಸಿವೆ ಬಹಳವಾಗಿತ್ತು. ಆದರೂ ಊರಾದರೂ ಹೇಗಿದೆ ನೋಡಿಬರೋಣವೆಂದು ಹಸಿದ ಹೊಟ್ಟೆಯಿಂದಲೇ ಹೊರಗೆ ಹೊರಟರು. ಒಂದೆರಡು ಮನೆ ದಾಟುವಷ್ಟರಲ್ಲಿ ಅವರಿಗೆ ಗೋಪಾಳಭಟ್ಟರ ದರ್ಶನವಾಯಿತು. ಗಣಪತಿಯನ್ನು ನಾಚಿಸುವ ಅವರ ಹೊಟ್ಟೆಯನ್ನೂ ಗಡ್ಡಮೀಸೆಗಳ ಅರಣ್ಯದಲ್ಲಿ ಅಡಗಿದ ಅವರ ಬಾಯನ್ನೂ ಮತ್ತು ಬಚ್ಚಲಮನೆಯಲ್ಲಿ ಸ್ನಾನಕ್ಕೆ ಕೂತವರಂತಹ ಅವರ ಠೀವಿಯನ್ನೂ ಕಂಡು ಮ್ಯಾನೇಜರರ ಮನಸ್ಸಿನಲ್ಲಿ ಪೂಜ್ಯಭಾವವೇ ಉತ್ಪನ್ನವಾಯಿತು. ಗೋಪಾಳಭಟ್ಟರು ವಿಶೇಷವಾಗಿ ಕಿರಾಣಿ ಅಂಗಡಿಯ ವ್ಯಾಪಾರಿಗಳು. ಅವರು ಆ ಹೊತ್ತಿಗೆ ಸರಿಯಾಗಿ ತಮ್ಮ ಅಂಗಡಿಯಲ್ಲಿಯೇ ಕುಳಿತಿದ್ದರು. ಅಂತೆಯೇ ಮ್ಯಾನೇಜರರ ಪೂಜ್ಯಭಾವನೆಗೆ ಉಕ್ಕು ಬಂದಿತು. ಅವರು ಬಾಗಿ ಭಟ್ಟರಿಗೆ ನಮಸ್ಕರಿಸಿದರು.

ವೇಷದಿಂದ ಪೆನ್‌ಶನ್ ಪಡೆದ ಪೋಲೀಸ ಇನ್ಸಪೆಕ್ಟರರಂತೆ ತೋರುವ ಒಬ್ಬ ಗೃಹಸ್ಥನು ತಮಗೆ ನಮಸ್ಕಾರ ಮಾಡುವುದನ್ನು ಕಂಡು ಗೋಪಾಳಭಟ್ಟರಿಗೆ ಸೋಜಿಗವಾಯಿತು. ಒಂದಿಷ್ಟು ಸಂತೋಷವೂ ಆಯಿತು. ಅವರು ನಗುನಗುತ್ತ ಮ್ಯಾನೇಜರರನ್ನು ಸ್ವಾಗತ ಮಾಡಿದರು.

ಮ್ಯಾನೇಜರರು ತಮ್ಮ ಸರ್ಕಸ್ಸಿನ ವಿಷಯಕ್ಕೆ ಮಾಹಿತಿ ಹೇಳಿ, ತಮ್ಮ ಬಿಡಾರವು ಈ ಊರಲ್ಲಿ ಇರುವ ವರೆಗೆ ಉತ್ತಮ ಪ್ರಕಾರದ ಕಿರಾಣೀ ಸಾಮಾನುಗಳನ್ನು ಪೂರೈಸುವ ಒಬ್ಬ ಪ್ರಾಮಾಣಿಕ ವರ್ತಕರು ಬೇಕಾಗಿದ್ದುದನ್ನು ಸೂಚಿಸಿದರು. ಇಂಥ ದೊಡ್ಡ ಗಿರಾಕಿಯು ಅನಾಯಾಸವಾಗಿ ನಡೆಯುತ್ತ ತಮ್ಮ ಕಡೆಗೇ ಬಂದದ್ದನ್ನು ಕಂಡು ಗೋಪಾಳಭಟ್ಟರ ಹಿಗ್ಗು ಹಿಡಿಸಲಾರದಷ್ಟಾಯಿತು. ಮ್ಯಾನೇಜರರು ಮುಂಗಡ ಹಣ ಕೊಡಬೇಕೆ ? ಎಂದು ಕೇಳಿದರು. ಈ ಹೊಸ ಗಿರಾಕಿಯನ್ನು ಸಂತೋಷಗೊಳಿಸುವುದೇ ಜಾಣತನದ್ದೆಂದು ತಿಳಿದು, ಗೋಪಾಳಭಟ್ಟರು 'ಛೆ, ಛೆ ತಮ್ಮಂತಹರಲ್ಲಿ ಅವಿಶ್ವಾಸವೇ?' ಎಂದು ನುಡಿದುಬಿಟ್ಟರು. ಮಾನೇಜರರಿಗೂ ಇದೇ ಬೇಕಾಗಿತ್ತು. 'ಚಿತ್ತಾಕರ್ಷಕ' ಕಂಪನಿಯ ಒಲೆ ಹೊತ್ತಿತು. ಹುಡುಗರನ್ನು ಹಿಡಿದು ಹಿರಿಯರ ವರೆಗೆ, ಆಡಿನಿಂದ ಆನೆಯ ವರೆಗೆ ಎಲ್ಲ ಪ್ರಾಣಿಮಾತ್ರಗಳಿಗೆ ಆನಂದವೇ ಆನಂದ!

ಗೋಪಾಳಭಟ್ಟರ ಮೇಲೆ ಚಾಮರ ಬೀಸಲಾರಂಭಿಸಿದುವು. ಅವರಿಗೆ ಸರ್ಕಸ್ಸಿಗೆ ಹೋಗಲಿಕ್ಕೆ ಯಾವಾಗಲೂ ಮುಕ್ತದ್ವಾರವಿದ್ದಿತು. ಅಲ್ಲದೇ ಮನೆಯ ಜನಕ್ಕೂ ಕುರ್ಚಿಯ ಪುಕ್ಕಟೆ ಪಾಸುಗಳು! ಒಂದೆರಡು ದಿನಗಳಲ್ಲಿ ಸರ್ಕಸ್ಸಿನ ನಾಯಿಗಳೂ ಕೂಡ ಗೋಪಾಳಭಟ್ಟರನ್ನು ಕಂಡಕೂಡಲೆ ಬಾಲ ಅಲ್ಲಾಡಿಸಹತ್ತಿದುವು. ನಿಜವಾಗಿ ನೋಡಿದರೆ, ಮೂಕ ಪ್ರಾಣಿಗಳಿಂದಲೂ ತಮಗೆ ಇಂತಹ ಮರ್ಯಾದೆ ಸಿಗುತ್ತಿರುವಾಗ ಗೋಪಾಳಭಟ್ಟರ ಮನಸ್ಸು ಆನಂದಸಾಗರದಲ್ಲಿ ಈಸಾಡಬೇಕಾಗಿತ್ತು. ಆದರೆ, ಹಾಗೇನೂ ಆಗದೆ ಅವರ ಮನಸ್ಸಿಗೆ ಏನೋ ಒಂದು ಸಂದೇಹವು ಬಾಧಿಸತೊಡಗಿತು. ಸರ್ಕಸ್ಸಿನಲ್ಲಿ ಕುರ್ಚಿಯ ಮೇಲೆ ಕುಳಿತುಕೊಳ್ಳುವ ಒಬ್ಬಿಬ್ಬರು ಗೃಹಸ್ಥರನ್ನು ಮಾತನಾಡಿಸುವ ಪ್ರಸಂಗವೂ ಇವರಿಗೆ ಬಂದಿತು. ಅವರೆಲ್ಲರೂ ಮುಖ್ಯವಾಗಿ ಪುಕ್ಕಟೆಯಾಗಿಯೇ ಬಂದವರಾಗಿದ್ದರು! ಅಧಿಕಾರಿಗಳೂ ಅವರ ಪರಿವಾರದವರೂ ಈ ಕುರ್ಚಿಗಳನ್ನು ಅಲಂಕರಿಸುವುದು ಅವರ ಸ್ಥಾನಬಲದಿಂದ ಪ್ರಾಪ್ತವಾದ ಜನ್ಮಸಿದ್ಧ ಹಕ್ಕೇ ಆಗಿದೆ. ಆದರೆ ಅವರೊಂದಿಗೆ ಊರ 'ಇತರೇ–ಜನಗಳೂ' ಪುಕ್ಕಟೆಯಾಗಿ ಈ ಆಸನಗಳನ್ನು ಅಲಂಕರಿಸುವುದು ತಿಳಿದೊಡನೆ ಇವರಿಗೆ ತಮ್ಮ ಬಾಕೀ ವಸೂಲಿಯ ಚಿಂತೆಯು ತೀವ್ರವಾಯಿತು.

ಇಂಥ ಚಿಂತಾಕ್ರಾಂತ ಸ್ಥಿತಿಯಲ್ಲಿ ಒಂದು ದಿನ ಗೋಪಾಳಭಟ್ಟರು ತಮ್ಮ ಚಿರಂಜೀವನಾದ ವಿಠ್ಠಲನನ್ನು ಕರೆದುಕೊಂಡು ಬಾಕೀ ಕೇಳಲಿಕ್ಕೆಂದು ಮ್ಯಾನೇಜರರ

ಕಡೆಗೆ ಬಂದರು. ಆಗ ಮ್ಯಾನೇಜರ ಸಾಹೇಬರು ಆನೆಗೆ ಏನನ್ನೋ ಕಲಿಸುವದರಲ್ಲಿ ಮಗ್ನರಾಗಿದ್ದರು. ಅವರು ಗೋಪಾಳಭಟ್ಟರಿಗೆ ದೂರದಿಂದಲೇ ನಮಸ್ಕಾರ ಮಾಡಿದರು. ತಂದೆ ಮಕ್ಕಳು ಸಮೀಪಕ್ಕೆ ಬರುತ್ತಲೆ ಥಟ್ಟನೆ ಆ ಹುಡುಗನನ್ನೆತ್ತಿ ಮಾವುತನ ಕೈಯಲ್ಲಿ ಕೊಟ್ಟರು. ಆನೆಯ ಮೇಲೆ ವಿರಾಜಮಾನನಾಗಿರುವ ವಿಠ್ಠಲನನ್ನು ಕಂಡು ಭಟ್ಟರು ಹಿಗ್ಗಿನಲ್ಲಿ ತೇಲಿದರು. ವಿಠ್ಠಲನಿಗಂತೂ ಸ್ವರ್ಗ ಮೂರು ಗೇಣು ಉಳಿಯಿತು. ಮಗನ ಮನಸ್ಸು ತಿರುಗಿಸಿ ಕೆಳಗಿಳಿಸಬೇಕಾದರೆ ಭಟ್ಟರಿಗೆ ಸಾಕುಬೇಕಾಯಿತು. ಈ ಗದ್ದಲದಲ್ಲಿ ಮ್ಯಾನೇಜರರನ್ನು ಬಾಕೀ ಕೊಡಿರೆಂದು ಕೇಳುವ ನೆನವು ಕೂಡ ಭಟ್ಟರಿಗೆ ಉಳಿಯಲಿಲ್ಲ. ಈ ಬಗೆಯಾಗಿ ಮ್ಯಾನೇಜರರ ಪ್ರಸಂಗಾವಧಾನದಿಂದ ಸರ್ಕಸ್ಸಿನ ಮೇಲಿನ ದೊಡ್ಡ ಗಂಡಾಂತರವು ಅನಾಯಾಸವಾಗಿ ದೂರವಾಯ್ತು.

'ಚಿತ್ತಾಕರ್ಷಕ ಸರ್ಕಸ್' ಮಂಡಲಿಯವರು ನಮ್ಮೂರಿಗೆ ಬಂದು ಹದಿನೈದು ದಿನಗಳಾದುವು. ಸರ್ಕಸ್ಸಿನ ಗಳಿಕೆ ಮತ್ತು ಬಳಕೆ ಇವು ಎಂದೂ ಬಾಯಿಗೂಡುತ್ತಿರಲಿಲ್ಲ. ಇಂಥ ಹೊತ್ತಿನಲ್ಲಿಯೇ "ನಾಳಿನಿಂದ ಉದ್ರಿ ಬಂದು" ಎಂಬ ನೋಟೀಸು ಭಟ್ಟರಿಂದ ಬಂದಿತು. ಮ್ಯಾನೇಜರರಿಗೆ ಸರ್ಕಸ್ಸನ್ನು ಕಿತ್ತುವ ಹೊರತು ಬೇರೊಂದು ದಾರಿಯೆ ಉಳಿಯಲಿಲ್ಲ.

ಸರ್ಕಸ್ಸಿನ ಸಾಮಾನುಗಳನ್ನು ಬಂಡಿಗಳಲ್ಲಿ ಹೇರುತ್ತಿರುವುದನ್ನು ಕಂಡು ಗೋಪಾಳಭಟ್ಟರು ಅವತಾರ ತಾಳಿ ರೌದ್ರರೂಪದಲ್ಲಿ ಮ್ಯಾನೇಜರರ ಮುಂದೆ ಬಂದು ನಿಂತರು. "ಮುಂದಿನ ಊರಿನ ಉತ್ಪನ್ನದಿಂದ ತಮ್ಮ ಬಾಕಿ ತೀರಿಸುತ್ತೇನೆ," ಎಂದು ಮ್ಯಾನೇಜರರು ವಿನಯದಿಂದ ಭಟ್ಟರ ಮನಸ್ಸನ್ನು ಸಂತಯಿಸತೊಡಗಿದರು. ಆದರೆ ಭಟ್ಟರೂ ಒಳ್ಳೇ ಅಸಾಮಿ. ಅವರು ಒಮ್ಮೆ ಒಂದು ಮಾತನ್ನು ತಲೆಯಲ್ಲಿ ಹಾಕಿಕೊಂಡರೆ ಆಯ್ತು. ಅದರಿಂದ ಎಂದೂ ಹಿಂದೆ ಸರಿದು ಅವರಿಗೆ ಗೊತ್ತಿಲ್ಲ. ತಮ್ಮ ಎರಡುನೂರು ರೂಪಾಯಿಗಳನ್ನು ಎಣಿಸಿದ ಹೊರತು ಗಾಡಿಗಳನ್ನು ಮುಂದೆ ಹೋಗಗೊಡುವದಿಲ್ಲೆಂದು ಭಟ್ಟರು ನಿಷ್ಠುರವಾಗಿ ಹೇಳಿಬಿಟ್ಟರು. "ನಮ್ಮ ಹತ್ತಿರ ಹಣವಿಲ್ಲ. ಬೇಕಾದರೆ ಹಣಕ್ಕಾಗಿ ಏನಾದರೂ ಸಾಮಾನುಗಳನ್ನು ಒತ್ತೆ ಇಟ್ಟುಕೊಳ್ಳಿರಿ" ಎಂದು ಮ್ಯಾನೇಜರರು ಹೇಳಬೇಕಾಯಿತು. ಗೋಪಾಳಭಟ್ಟರಿಗೆ ಹೆಚ್ಚಿನ ವಿಚಾರಕ್ಕೆ ಸಮಯವೇ ಇರಲಿಲ್ಲ. ಅವರಿಗೆ ನಿಂತ ನಿಂತಲ್ಲಿಯೇ ಒಂದು ಹಂಚಿಕೆ ಹೊಳೆಯಿತು. ತಮ್ಮ ಕಡೆಗೆ ಹುಲಿಯನ್ನು ಒತ್ತೆ ಇಟ್ಟರೆ ಮಾತ್ರ ಉಳಿದ ಗಾಡಿಗಳನ್ನು ಮುಂದೆ ಬಿಡುವುದಾಗಿ ಬಜಾಯಿಸಿದರು. ಮ್ಯಾನೇಜರರು ಪರಿಪರಿಯಿಂದ ತಿಳಿಹೇಳಿ ಎಷ್ಟು ಬೇಡಿಕೊಂಡರೂ ಗೋಪಾಳಭಟ್ಟರ ಮನಸ್ಸು ಕರಗಲಿಲ್ಲ. ಸರ್ಕಸ್ಸಿನಲ್ಲಿ ಹುಲಿಯ ಕೆಲಸವೇ ಮಹತ್ತ್ವದ್ದು. ಆದುದರಿಂದ ಮ್ಯಾನೇಜರರು ಶಕ್ಯವಿದ್ದಷ್ಟು ಬೇಗನೆ ಬಾಕಿ ತೀರಿಸಿ, ಹುಲಿ ಬಿಡಿಸಿಕೊಂಡು ಹೋಗದೆ ಅವರಿಗೆ ಗತಿಯಿಲ್ಲ ಎಂದು ಭಟ್ಟರು ಎಣಿಕೆ ಹಾಕಿದರು. ಹುಲಿಯ ಬಂಡಿ ಅಡವು ಇಟ್ಟು ಹೋಗುವ ಹಟ ಹಿಡಿದರು.

ಪಾಪ! ವ್ಯಾನೇಜರರಿಗೆ ಇನ್ನೊಂದು ಉಪಾಯವೇ ಉಳಿಯಲಿಲ್ಲ. ಅವರು ಹುಲಿಯ ಪಂಜರವನ್ನು ಗೋಪಾಳಭಟ್ಟರ ವಶಕ್ಕೆ ಕೊಟ್ಟು ಮುಂದಿನ ಊರ ದಾರೀ ಹಿಡಿದರು.

ಹುಲಿಯ ಪಂಜರವು ಭಟ್ಟರ ಮನೆಯ ತಲೆವಾಗಿಲಿನಿಂದ ಹಾಯ್ದು ಅಂಗಳ ದಲ್ಲಿ ಹೋಗುವಂತೆ ಇರದ್ದರಿಂದ ತಲೆವಾಗಿಲ ಹೊರಗೇ ಕಟ್ಟೆಯ ಮೇಲೆ ಪಂಜರ ವನ್ನು ಇರಿಸಬೇಕಾಯಿತು. ತಮ್ಮ ಬಾಕಿ ಕೊಡದೆ ಠಕ್ಕಿಸಿ ಹೋಗಬೇಕೆಂದ ವ್ಯಾನೇಜರರಿಗಿಂತ ತಾವು ಒಂದು ತೂಕ ಹೆಚ್ಚಿನವರು ಎಂದು ಭಟ್ಟರಿಗೆ ಒಳ ಗಿಂದೊಳಗೇ ನಗು ಬಂದಿತು. ಈ ಹಿಗ್ಗಿನ ಭರದಲ್ಲಿ ಅಂದು ಅವರಿಗೆ ಅಂಗಡಿ ಕಡೆಯ ಗಮನವೂ ಕಡಿಮೆಯಾಯ್ತು. ಬಲಗಡೆಯ ಕಟ್ಟೆಯ ಮೇಲೆ ಹುಲಿಯ ಪಂಜರ, ಎಡಗಡೆಯ ಕಟ್ಟೆಗೆ ಗೋಪಾಳಭಟ್ಟರು. ಆ ಬೀದಿಯಲ್ಲಿ ಹೋಗಬರುವವ ರಿಗೆ ಈ ಜೋಡಿ ಸಂಜೆಯವರೆಗೆ ಕಾಣುತ್ತಿದ್ದಿತು. ಸಂಜೆಗೆ ಅಡವಿಗೆ ಹೋದ ಭಟ್ಟರ ಆವು ತಿರುಗಿ ಮನೆಗೆ ಬಂದಿತು. ಆದರೆ ದೂರದಿಂದಲೆ ಹುಲಿಯ ವಾಸನೆ ಹತ್ತಿ ಹಸುವು ಅಲ್ಲಿಂದಲೆ ಹಿಂದಿರುಗಿ ಕಾಲುಕಿತ್ತಿತು. ಏಕಾಗ್ರಚಿತ್ತರಾಗಿ ಹುಲಿ ಯನ್ನೇ ನೋಡುತ್ತ ಕುಳಿತ ಭಟ್ಟರಿಗೆ ತಮ್ಮ ಗೋವು ಹುಲಿರಾಯನ ನಾತಕ್ಕೆ ಗಾಬರಿಗೊಂಡು ಹೂಂಕರಿಸಿ ಕಿವಿ ನಿಮಿರಿಸಿ ಓಡುತ್ತಿರುವುದು ಗೊತ್ತಾಯಿತು. ಅವರು ಅವಸರದಿಂದ ಧೋತರವನ್ನು ಸರಿಪಡಿಸುತ್ತ ಹಸುವಿನ ಹಿಂದೆ ಧಾವಿಸಿದರು. ತನ್ನ ಜೀವ ಉಳಿಸಿಕೊಳ್ಳಲು ಓಡುವ ಆವಿನ ವೇಗಕ್ಕೂ ತಮ್ಮ ಡೊಳ್ಳುಹೊಟ್ಟೆಯ ತೂಕ ಹಿಡಿದುಕೊಂಡು ಓಡುವ ಭಟ್ಟರ ವೇಗಕ್ಕೂ ಮಹದಂತರವಾದ್ದರಿಂದ ಅವರಿಗೆ ಆ ಪಶುವನ್ನು ಹಿಂದಿರುಗಿಸುವುದು ಆಗಲಿಲ್ಲ.

ಭಟ್ಟರು ಮರಳಿದರು. ಇಷ್ಟರಲ್ಲಿ ಮನೆಯ ಮುಂದೆ ಓಣಿಯ ಹುಡುಗರ ಸಂತೆಯೇ ನೆರೆದಿತ್ತು. ಹಸುವಿನ ನಾತಕ್ಕೆ ಹುಲಿಯ ಆರ್ಭಟೆಗೆ ಆರಂಭವಾಯಿತು. ಒಂದೇ ಸವನೆ ಗರ್ಜಿಸುತ್ತ ಪಂಜರದಲ್ಲಿ ಸುತ್ತಾಡಹತ್ತಿತ್ತು. ಹುಡುಗರಿಗೆ ಇದೊಂದು ಮೋಜೇ ಮೋಜು! ಇಂತಹ ಸಂದರ್ಭದಲ್ಲಿ ಸಣ್ಣ ಸಣ್ಣ ಹರಳು ಗಳನ್ನು ಎಸೆಯುವುದು ಹುಡುಗರ ಸ್ವಭಾವ. ಇದರಿಂದ ಹುಲಿ ಮತ್ತಿಷ್ಟು ಕೆರಳಿತು. ಭಟ್ಟರು ತಿರುಗಿ ಬರುತ್ತಲೆ ಹುಡುಗರು ಚದರಿದರು. ಭಟ್ಟರು ತಮ್ಮ ಕಾಮಧೇನು ವನ್ನು ಅಟ್ಟಿಕೊಂಡು ಬರಲು ಒಂದು ಆಳು ಕಳಿಸಿದರು. ಇನ್ನೊಂದು ಆಳನ್ನು ಹುಲಿಯ ಪಂಜರದ ಪಹರೆ ಮಾಡಲು ನಿಲ್ಲಿಸಿದರು. ತಾವು ಸ್ವತಃ ಹುಲಿಯ ಸಂಜೆಯ ಫಲಾಹಾರದ ವ್ಯವಸ್ಥೆಗೆ ನಿಂತರು. ಕಟಕರ ಅಂಗಡಿಗೆ ಹೋಗಿ, ಅವರ ಸಲಹೆ ಪಡೆದು ಅವರ ಆಳಿನ ಕೈಯಿಂದಲೇ ನಾಲ್ಕೈದು ಸೇರು ಆಡಿನ ಮಾಂಸ ವನ್ನು ತರಿಸಿ ಪಂಜರದಲ್ಲಿ ಹಾಕಿಸಿದರು. ಹುಲಿರಾಯನ ಹೊಟ್ಟೆಯ ವ್ಯವಸ್ಥೆಯಾದ ನಂತರ ಭಟ್ಟರ ಊಟವಾಯಿತು.

ಮರುದಿನ ಭಟ್ಟರಿಗೆ ಒಂದು ಹೊಸ ಸಮಸ್ಯೆಯನ್ನು ಎದುರಿಸಬೇಕಾಯಿತು. ದಿನಾಲು ಸ್ವಚ್ಛಮಾಡಿದರೂ ಹುಲಿಯ ಪಂಜರದ ನಾತವು ಮೊದಲೇ ಸಹಿಸಲಾರ

ದಷ್ಟು ಇರುತ್ತದೆ. ಅದರಲ್ಲಿಈಗಲಂತೂ ಕೇಳುವುದೇನು? ಕೊಳೆತ ಮಾಂಸ, ಮತ್ತು ಹುಲಿಯ ಮಲಮೂತ್ರ ಇವನ್ನು ಈಗ ತೆಗೆದುಹಾಕುವವರು ಯಾರೂ ಇಲ್ಲದ್ದ ರಿಂದ ಆ ಓಣಿಯಲ್ಲೆಲ್ಲ ದುರ್ಗಂಧವು ಇಡುಗಿತು. ಗೋಪಾಳಭಟ್ಟರ ಮನೆಗೆ ತಿರುಕರು ಕೂಡ ಸುಳಿಯದಾದರು. ಅಪ್ಪಿ ತಪ್ಪಿ ಕಾವಲುಗಾರರ ಕಣ್ಣು ತಪ್ಪಿಸಿ, ಕಲ್ಲು ಎಸೆದು ಹುಲಿಯನ್ನು ಕೆರಳಿಸಲು ಹುಡುಗರು ಮಾತ್ರ ಬರುತ್ತಿದ್ದರು. ಈ ದುರ್ವಾಸನೆಗಾಗಿ ಓಣಿಯ ಜನರು ಭಟ್ಟರಿಗೆ ಬೈಯಲಾರಂಭಿಸಿದರು. ಆದರೂ ಭಟ್ಟರು ಇದಾವು ದಕ್ಕೂ ಬಗ್ಗಲಿಲ್ಲ.

ಮೂರನೆಯ ದಿವಸ ಭಟ್ಟರ ಅರ್ಧಾಂಗಿಯು ಉಪನ್ಯಾಸವನ್ನು ಎದುರಿಸುವ ಹೊತ್ತು ಬಂದಿತು. ಅವರ ಮಡದಿಗೆ ಹಗಲಿರುಳೂ ಮನೆಯಲ್ಲಿಯೇ ಇರಬೇಕಾದ್ದ ರಿಂದ ಹುಲಿಯ ನಾತವನ್ನು ತಡೆಯುವುದು ಅಸಾಧ್ಯವಾಯಿತು. ಇತ್ತ ಹುಲಿಗೆ ಏನು ಅನಿಸಿತ್ತೋ ದೇವರೇ ಬಲ್ಲ! ಹುಲಿಯು ಅಂದು ಏನೂ ತಿನ್ನಲಿಲ್ಲ. ಕೇವಲ ಪಂಜರದ ಒಂದು ಮೂಲೆಯಲ್ಲಿ ಬಿದ್ದುಕೊಂಡಿತು. ಭಟ್ಟರಿಗೆ ಗಾಬರಿ ಹುಟ್ಟಿತು. ಮನೆಯೊಳಗಿಂದಲೂ ಓಣಿಯ ಜನರಿಂದಲೂ ದೂರುಗಳು ಬರುತ್ತಲೆ ಇದ್ದುವು. ಇತ್ತ ಹುಲಿಯು ಅನ್ನಸತ್ಯಾಗ್ರಹವನ್ನು ಪ್ರಾರಂಭಿಸಿತ್ತು! ಭಟ್ಟರಿಗೆ ಚಿಂತೆ ತೀವ್ರ ವಾಯಿತು. ಹುಲಿಯ ಜೀವಕ್ಕೆ ಏನಾದರೂ ಅಪಾಯವಾದರೆ ಮುಂದೇನು? ಎಂಬ ಪ್ರಶ್ನೆ ಭಟ್ಟರ ಮುಂದೆ ನಿಂತಿತು. ತಮ್ಮ ಬಾಕೀ ಬರುವದಂತೂ ದೂರೇ ಉಳಿಯಿತು; ತಿರುಗಿ ಮ್ಯಾನೇಜರರಿಗೆ ಮತ್ತೊಂದು ಹೊಸ ಹುಲಿಯನ್ನೇ ತಂದು ಕೊಡಬೇಕಾದೀತಲ್ಲ! ಇಷ್ಟರಿಂದಲೆ ಒಗೆ ಹರಿಯಲಿಕ್ಕಿಲ್ಲ. 'ಸರ್ಕಸ ಮಾಡುವ ಹುಲಿಯೇ ಬೇಕು' ಎಂದು ಮ್ಯಾನೇಜರರು ಹಟಹಿಡಿದರೆ ಏನು ಮಾಡುವುದು? ಈ ಬಗೆಯ ವಿಚಾರಗಳ ತಾಕಲಾಟದಲ್ಲಿ ಗಾಸಿಯೀಸಿಯಾದ ಭಟ್ಟರಿಗೆ ಅಂದು ಚಹ ಕೂಡ ರುಚಿಹತ್ತಲಿಲ್ಲ. ಇಷ್ಟರಲ್ಲಿ ಭಟ್ಟರ ಕೈಯಿಂದ ೫, ೬ ರೂಪಾಯಿಗಳೂ ಕೈಬಿಟ್ಟಿದ್ದುವು. ಈಗಲಂತೂ ಹುಲಿಯ ಔಷಧೋಪಚಾರಕ್ಕಾಗಿ ಹಣ ಖರ್ಚು ಮಾಡುವ ಪ್ರಸಂಗ ಬಂದಿತು. ಗೋಪಾಳಭಟ್ಟರ ಓಡಾಟಕ್ಕೆ ತೆರಪಿಲ್ಲದಾಯಿತು. ಈ ಅವಸರದಲ್ಲಿ ಅವರಿಗೆ ಬಾಡಿಗೆಯ ಬಂಡಿ ಸಿಗುವುದೂ ಕಠಿಣವಾಯಿತು. ನಿಂತ ಕಾಲಮೇಲೆ ಹುಲಿಯನ್ನು ಮ್ಯಾನೇಜರರಿಗೆ ಒಪ್ಪಿಸಿ ಬರುವ ಗಡಿಬಿಡಿ ಭಟ್ಟರಿಗೆ. ಸಾಮಾನ್ಯ ಬಾಡಿಗೆಯ ಮೂರು ಪಟ್ಟು ತೆತ್ತು ಒಂದು ಗಾಡಿ ಮಾಡಿ ಸಮೀಪದ ಊರಲ್ಲಿಯೇ ಇರುವ ಸರ್ಕಸ್ ಕಂಪನಿಗೆ ಹುಲಿರಾಯನನ್ನು ಮುಟ್ಟಿಸಿ, ಉಸ್ಸಪ್ಪಾ ಎಂದು ಭಟ್ಟರು ತಿರುಗಿಬಂದರು. ಅಂದಿನಿಂದ ನಮ್ಮ ಭಟ್ಟರು ಮೊಹರಮ್ಮದ ಹುಲಿ ಯನ್ನು ಕಂಡರೂ ಹಿಂದಿನ ಹಳವಂಡವೆಲ್ಲ ನೆನಪಾಗಿ ಉಮ್ಮಳಿಸುತ್ತಾರೆ, ರೇಗು ತ್ತಾರೆ! ಸರ್ಕಸ್ಸು ಎಂದರಂತೂ ಬಾಯಿಯನ್ನೇ ಹರಿಬಿಡುತ್ತಾರೆ!

—ಕೌಜಲಗಿ ಹಣಮಂತರಾಯರು.

(ಹಾಸ್ಯಪ್ರಬಂಧಗಳು ಇದರಿಂದ)

# ಅಭ್ಯಸನಗಳು

ಪ್ರಶ್ನೆಗಳು:—

(೧) ಗೋಪಾಳ ಭಟ್ಟರು ಸರ್ಕಸ್ ಮ್ಯಾನೇಜರರನ್ನು ಆದರದಿಂದ ಸ್ವಾಗತಿಸಿದರೇಕೆ ?

(೨) ಗೋಪಾಳ ಭಟ್ಟರಿಗೆ ಬಾಕಿ ವಸೂಲಿಯ ಚಿಂತೆ ಉಂಟಾಗಲು ಕಾರಣವೇನು ?

(೩) ಮ್ಯಾನೇಜರರು ಗೋಪಾಳಭಟ್ಟರ ಮೇಲೆ ತಮ್ಮ ಪ್ರಭಾವವನ್ನು ಬೀರಿದ ಬಗೆಗಳಾವವು ?

(೪) ಮ್ಯಾನೇಜರರ ಪ್ರಸಂಗಾವಧಾನದ ಉದಾಹರಣೆಗಳನ್ನು ಎತ್ತಿ ಹೇಳಿರಿ.

(೫) ಗೋಪಾಳಭಟ್ಟರು ಹುಲಿಯ ಪಂಜರವನ್ನು ಏಕೆ ಇಟ್ಟುಕೊಂಡರು ?

(೬) ಗೋಪಾಳಭಟ್ಟರು ಹುಲಿಯನ್ನಿಟ್ಟುಕೊಂಡಿರುವದರಿಂದ ಅವರು ಎದುರಿಸಬೇಕಾದ ಸಮಸ್ಯೆಗಳಾವವು ? ಅವು ಉಳಿದವರಿಗೆ ವಿನೋದಪರ ಸಮಸ್ಯೆಗಳೇಕೆ ಆಗಿದ್ದವು ?

(೭) ಭಟ್ಟರು ಹುಲಿಯನ್ನು ಮರಳಿ ಮ್ಯಾನೇಜರರಿಗೆ ಕೊಟ್ಟರೇಕೆ ?

(೮) ಹುಲಿಯನ್ನಿಟ್ಟುಕೊಳ್ಳಬೇಕೆಂಬ ಭಟ್ಟರ ಎಣಿಕೆ ಎಲ್ಲಿ ತಪ್ಪಿತು ?

ಭಾಷಾಭ್ಯಾಸ:—

(೧) ಅವು ತಮ್ಮ ಕೊನೆಯ ಪಾಡಿಗಾಗಿಯೇ ಬರುತ್ತವೆಂದು ನಮ್ಮೂರಿನ ಖ್ಯಾತಿ.

(೨) ಗಣಪತಿಯನ್ನು ನಾಚಿಸುವ, ಅವರ ಹೊಟ್ಟೆಯನ್ನೂ ......... ಪೂಜ್ಯಭಾವವೇ ಉತ್ಪನ್ನವಾಯಿತು.

(೩) ಸರ್ಕಸ್ಸಿನ ನಾಯಿಗಳೂ ...... ಬಾಲ ಅಲ್ಲಾಡಿಸಹತ್ತಿದವು.

(೪) ಆ ಬೀದಿಯಲ್ಲಿ ಹೋಗಿ ಬರುವವರಿಗೆ ಈ ಜೋಡಿ ಸಂಜೆಯ ವರೆಗೂ ಕಾಣುತ್ತಿದ್ದಿತು.

(೫) ಹುಲಿಯು ಅನ್ನಸತ್ಯಾಗ್ರಹವನ್ನು ಪ್ರಾರಂಭಿಸಿತ್ತು.

ಈ ಮೇಲಿನ ವಾಕ್ಯಗಳಲ್ಲಿ ವರ್ಣನೆ, ಶಬ್ದ, ಸನ್ನಿವೇಶ — ಇವುಗಳಲ್ಲಿ ಯಾವುದರಿಂದ ವಿನೋದವು ಉಂಟಾಗಿರುವುದು ಎಂಬುದನ್ನು ಹೇಳಿರಿ.

ಶಬ್ದವಿಚಾರ:—

(೧) ಚೌರ ಬೀಸಲಾರಂಭಿಸು, ಮುಕ್ತದ್ವಾರವಿರು, ಬಾಲ ಆಲ್ಲಾಡಿಸು, ಬಾಯಿಗೂಡು, ಬಾಯಿಹರಿಬಿಡು — ಇವುಗಳನ್ನು ಒಂದೊಂದು ವಾಕ್ಯದಲ್ಲಿ ಉಪಯೋಗಿಸಿರಿ.

(೨) ಪ್ರಸಂಗಾವಧಾನ, ಸತ್ಯಾಗ್ರಹ, ಪಾಡು, ಗಾಸಿವೀಸಿ — ಇವುಗಳ ಅರ್ಥವನ್ನು ಹೇಳಿರಿ.

(೩) ಹುಡುಗ, ಆನೆ, ಹುಲಿ, ಹಾವು, ಹೊಗಳು, ಹಿಗ್ಗು — ಇವುಗಳ ಮಾರುನುಡಿಗಳನ್ನು ಹೇಳಿರಿ.

ವಾಕ್‌ಶಿಕ್ಷಣ:—

ಗೋಪಾಳಭಟ್ಟರು ಹುಲಿಯನ್ನು ಮನೆಯ ಮುಂದೆ ಇಟ್ಟುಕೊಂಡಾಗ, ಊರ ಬೇರೆ ಬೇರೆ ಜನರ ಮತ್ತು ಗೋಪಾಳಭಟ್ಟರ ನಡುವೆ ಆದ ಸಂಭಾಷಣೆಯನ್ನು ಬರೆದು ಅಭಿನಯಿಸಿರಿ.

ಚರ್ಚೆ—

(೧) ಗೋಪಾಳಭಟ್ಟರು ಸರ್ಕಸ್ಸಿನ ಮ್ಯಾನೇಜರರಿಂದ ಹುಲಿಯನ್ನಿಟ್ಟು ಕೊಂಡಿದುದೇ ಯೋಗ್ಯ.

(೨) ಗೋಪಾಳಭಟ್ಟರ ಹಾನಿಗೆ ಅವರ ಮುಂಭೋರಣವೇ ಕಾರಣ. ಆದುದರಿಂದ ಮುಂಭೋರಣವು ಮಾನವನಿಗೆ ಯೋಗ್ಯವಲ್ಲ.

ಬರೆಹ:—

ಈ ಕಥೆಯನ್ನು ಸಂಕ್ಷೇಪಿಸಿ ಬರೆಯಿರಿ.

# ೨೪. ನಾನು ಕಂಡ ಗೌರಮ್ಮನವರು.

[ ವ್ಯಕ್ತಿಚಿತ್ರವನ್ನು ಬರೆವ ಒಂದು ಒಳ್ಳೆಯ ಮಾದರಿ. ಇಲ್ಲಿಯ ಭಾವಕ್ಕೆ ತಕ್ಕ ಶೈಲಿಯೂ ಅಭ್ಯಸನೀಯವಾಗಿದೆ.]

ಜಂಬುಕಂಡಿಯಲ್ಲಿ ಸೇರಿದ ಕರ್ನಾಟಕ ಸಾಹಿತ್ಯ ಸಮ್ಮೇಲನದ ಮಂಟಪದಲ್ಲಿ ಗೌರವರ್ಣದ, ಅಷ್ಟು ಎತ್ತರವಲ್ಲದ, ತೆಳ್ಳಗಿದ್ದರೂ ಹಾಗೆ ಕಾಣದ, ಒಬ್ಬ ಮಹಿಳೆ ಕುಳಿತದ್ದನ್ನು ನೋಡಿದೆ. ಉಟ್ಟಿದ್ದೊಂದು ಖಾದಿಯ ಬಟ್ಟೆ; ತೊಟ್ಟಿದ್ದೂ ಖಾದಿಯೇ! ಮೂಗಿಗೊಂದು ಹರಳಿನ ಮೂಗುಬಟ್ಟು; ಉಳಿದ ಯಾವ ಆಭರಣವೂ ಇಲ್ಲ. ಕಣ್ಣುಗಳಲ್ಲಿ ಅದೊಂದು ಬಗೆಯ ಒಳನೋಟ. ಮುಖದಲ್ಲಿ ಅದೇನೋ ಒಂದು ಗಂಭೀರಭಾವ. ಆದರೂ ಯಾರಾದರೂ ಮಾತನಾಡಿಸಿದರೆ ಮೊದಲು ನಗೆ, ಆಮೇಲೆ ಮಾತು. ಒಮ್ಮೊಮ್ಮೆ ನಗುವಷ್ಟೇ ನುಸುಳಿ, ಮಾತು ಬಾರದೆ ಉಳಿಯುತ್ತಿತ್ತು. ಒಮ್ಮೆ ನೋಡಿದರೆ ಸಾಕು; ಇವರ ಪರಿಚಯವಾಗಬೇಕು ಎನಿಸುವಂತಹ ವ್ಯಕ್ತಿತ್ವ.

ಅವರು ಕೊಡಗಿನವರೆಂದು ತಿಳಿದಾಗ ನನಗೆ ತುಂಬ ಕುತೂಹಲವಾಯಿತು. ಮತ್ತೆ ವಿಚಾರಿಸುವಾಗ ಅವರೇ ಕನ್ನಡ ಕತೆಗಾರ್ತಿ ಶ್ರೀಮತಿ ಗೌರಮ್ಮ— ಮಿಸೆಸ್ ಬಿ. ಟಿ. ಜಿ. ಕೃಷ್ಣ ಎಂದು ತಿಳಿದು ಬಹಳ ಸಂತೋಷವಾಯಿತು. ಅವರೊಡನೆ ಮಾತನಾಡಬೇಕೆಂಬ ಆಸೆಯಿಂದ ಅವರಿಳಿದ ಸ್ಥಳಕ್ಕೆ ಹೋದೆ. ಅಲ್ಲಿದ್ದ ನನ್ನ ಸ್ನೇಹಿತರೊಬ್ಬರು ಅವರ ಪರಿಚಯ ಮಾಡಿಸಿದರು. ಆಗ ಅವರು ಊಟಕ್ಕೆ ಕುಳಿತವರು ಎದ್ದು 'ನಮಸ್ಕಾರ' ಅಂದರು. ಅಂದಿನ ಆ ಮೊದಲ ಸಲದ ಅವರ ನಿಂತ ನಿಲವು, ಆ ವಿನಯ, ಆ ಸಹಜವಾದ ನಗೆ, ಇನ್ನೂ ನನ್ನ ಕಣ್ಣುಮುಂದಿವೆ. ಊಟವಾದೊಡನೆ ನಾವಿಬ್ಬರೇ ಒಂದೆಡೆಗೆ ಕುಳಿತೆವು. "ನೀವು ಹೊರಡುವಾಗ ನಮಗೇಕೆ ತಿಳಿಸಲಿಲ್ಲ ?" ಎಂದು ನಾನು ಕೇಳಿದ್ದಕ್ಕೆ " ಏನೆಂದು ತಿಳಿಸುವುದು ?

ಕೊಡಗಿನ ಚಕ್ರವರ್ತಿನಿ–ನಾನು ಬರುತ್ತೇನೆಂದೇ ? ಅಲ್ಲದೆ, ಮೊದಲು ನಿಮ್ಮನ್ನು ನೋಡಿ ನನಗೆ ಗೊತ್ತಿತ್ತೇ ?" ಎಂದು ನಕ್ಕು ನುಡಿದರು. ಅವರು ಯಾರೊಡನೆಯೂ ಮುಡುಕಿ ಪರಿಚಯ ಮಾಡಿಕೊಳ್ಳುತ್ತಿದ್ದಿಲ್ಲ. "ನೀವಾರು ? —ಎಂದು ಅವರು ಕೇಳಿದರೆ ನಾನೇನೆಂದು ಹೇಳುವುದು ?" ಎನ್ನುತ್ತಿದ್ದರು.



ಶ್ರೀಮತಿ ಗೌರಮ್ಮನವರು

ಗೌರಮ್ಮನವರು ಬಹಳ ವಿನೋದಿಗಳಾಗಿದ್ದರು. ಅವರ ಹೂವಿನಂತಹ ಮಾತುಗಳು ಯಾರ ಮನಸ್ಸನ್ನೂ ನೋಯಿಸದೆ ಅರಳಿಸುತ್ತಿದ್ದವು. ಅವರನ್ನು ಕಳಿಸಲು ಹುಬ್ಬಳ್ಳಿಯ ವರೆಗೆ ನಾನು ಹೋಗಿದ್ದೆ. ಹುಬ್ಬಳ್ಳಿ ಸ್ಟೇಶನ್ನಿನಲ್ಲಿ 'ನೀವು ಈಗ ನನ್ನ ಅತಿಥಿಗಳು; ಧಾರವಾಡದಿಂದ ಹುಬ್ಬಳ್ಳಿ ನಮ್ಮೂರ ಕಡೆಗೆ' ಎಂದು ಕಾಫಿ ಕೊಡಿಸಿದರು; ಕೂಡಿ ನಗುತ್ತ ಕುಡಿದೆವು. ಗಾಡಿ ಹೊರಡುವ ಸಮಯವಾಗಿತ್ತು. 'ಅಲ್ಲಿ ನೋಡಿ, ನಿಮ್ಮ ಮಾವ ಬರುತ್ತಿದ್ದಾರೆ' ಎಂದರವರು. ನಾನು ತಿರುಗಿ ನೋಡಿ, ನನ್ನ ಪರಿಚಿತರಾರನ್ನೂ ಕಾಣದೆ ಯಾರು ?" ಎಂದೆ. 'ನೋಡಿ, ನಿಮ್ಮ ಮಾವ–ಜರದ ರುಮಾಲಿನ ಯಜಮಾನ' (ನನ್ನ ಕತೆಯಲ್ಲಿಯ ಒಂದು ಪಾತ್ರ. ಧಾರವಾಡದಲ್ಲಿ ಆ ಕತೆಯನ್ನು ಓದಿ ತೋರಿಸಿದ್ದೆ.) ಎಂದರು. ನಾವೆಲ್ಲ ಗೊಳ್ಳೆಂದು ನಕ್ಕೆವು. ಸಿಳ್ಳುಹಾಕಿ ಗಾಡಿ ಹೊರಟಿತು. ಕಿಡಕಿಯಲ್ಲಿ ಮುಖ ಹಾಕಿ ಅವರು ನೋಡುತ್ತಿದ್ದರು. ನಾನು ಹಾಗೆಯೇ ಕಲ್ಲುಗೊಂಬೆಯಂತೆ ನೋಡುತ್ತ ನಿಂತಿದ್ದೆ. ಗಾಡಿ ಹೊರಟುಹೋಗಿದೆ; ಆದರೆ ಕಿಡಕಿಯಲ್ಲಿ ನಗುತ್ತ ಕುಳಿತ ಗೌರಮ್ಮ ಇನ್ನೂ ಕಾಣುತ್ತಿದ್ದಾರೆ.

ಗೌರಮ್ಮನವರಲ್ಲಿ, ಇದ್ದ ಮಾತನ್ನು ಎತ್ತಿ ಹಿಡಿಯುವ ದಿಟ್ಟತನವಿತ್ತು. ಅವರ ದೃಷ್ಟಿಯಲ್ಲಿ ಒಂದು ವಿಮರ್ಶಕ ಶಕ್ತಿಯಿತ್ತು. ಯಾರಿಗೂ ಸೊಪ್ಪು ಹಾಕದೆ ತಮಗೆ ತೋರಿದ ಮಾತುಗಳನ್ನು ಗಂಭೀರವಾಗಿ ಹೇಳುತ್ತಿದ್ದರು. ತಮಗೆ ಸೇರದ ಮಾತನ್ನು ಅಷ್ಟೇ ಸ್ಪಷ್ಟವಾಗಿ ಖಂಡಿಸುತಿದರು. ಹೆಣ್ಣುಮಕ್ಕಳು ಬರೆಯುವ

ಸಾಹಿತ್ಯ ಒಳ್ಳೆಯದಾಗಬೇಕು..........ಅದೊಂದು ಮಟ್ಟಕ್ಕೆ ಬರಬೇಕು.......... ಎಂಬ ಆಸೆ ಬಹಳವಾಗಿತ್ತವರಿಗೆ. ಇದು ಹೆಣ್ಣುಮಕ್ಕಳ ಕೃತಿ—ಎಂಬ ಪೊಳ್ಳು ಸಹಾನುಭೂತಿಯ ಹೊರೆಯನ್ನು ನಾವೆಷ್ಟು ದಿನ ಹೊತ್ತಿರಬೇಕು? ಇದರಿಂದ ಗಂಡಸರು ನಮ್ಮ ಸಾಹಿತ್ಯವನ್ನು ತೃಪ್ತಿದಾಯಕವಾಗಿ ಒಪ್ಪಿದಂತಾಯಿತೇ? ಅವರು ನಮ್ಮ ಸಾಹಿತ್ಯವನ್ನು ಗಂಡಸರು ಬರೆಯುವ ಸಾಹಿತ್ಯವನ್ನು ನೋಡುವ ದೃಷ್ಟಿ ಯಲ್ಲೊಮ್ಮೆ ನೋಡಲಿ—ಇಲ್ಲ, ನೋಡಲಾರರವರು, ಎನ್ನುತ್ತಿದ್ದರು.

ಒಮ್ಮೆ ನಾನು ಕೊಡಗಿಗೆ ಹೋಗುವುದನ್ನು ನಿರ್ಧರಿಸಿದೆ. ಹೊರಟು ಗೌರಮ್ಮ ನವರ ಮನೆಗೆ ಬಂದೆ. ನಾನು ಬಂದಾಗ ಗೌರಮ್ಮನವರೇ ಪೂಗಿಡಗಳ್ಗೆ ನೀರೆರೆಯು ತ್ತಿದ್ದರು. ಒಂದು ನಾಯಿ 'ವೊವ್' ಎಂದಿತು. ಗೌರಮ್ಮನವರು 'ಓ' ಎಂದು ಓಡಿಬಂದರು. ಅಂದಿನ ಅದೇ ನಗೆ! ಅದೇ ನಿಲುವು! ಅದೇ ಬಟ್ಟೆ, ಅದೇ ವೇಷಭೂಷಣ! "ನಮಸ್ಕಾರ ಮಹಾಶಯರೇ, ಅಂತೂ ಒಮ್ಮೆ ಬಂದಿರಾ?" ಎಂದರು. ಉಕ್ಕಿ ಬರುವ ನಗೆಗೆ ಸ್ವಾತಂತ್ರ್ಯ ಕೊಟ್ಟುಬಿಟ್ಟೆ. "ಸ್ವಲ್ಪ ನಿಲ್ಲಿ. ನಿಮ್ಮನ್ನು ಬೈಯಬೇಕಾಗಿದೆ. ಇಲ್ಲ, ಒಳಗೆ ಬನ್ನಿ; ಅಲ್ಲಿಯೇ ಬೈಯುತ್ತೇನೆ!" ಎಂದು ಒಳಗೆ ಕರೆದೊಯ್ದರು.

ಒಂದು ಕೋಚು, ನಾಲ್ಕು ಕುರ್ಚಿ. ನಡುನಡುವೆ ಹೂಪಾತ್ರೆಗಳನ್ನು ಹೊತ್ತ ಚಿಕ್ಕ ಮೇಜುಗಳು. ಒಂದೆಡೆಗೆ ಚಾಪೆ ಹಾಸಿದೆ. ನಾಲ್ಕು ಮೂಲೆಗೆ ನಾಲ್ಕು ಸಣ್ಣ ಮೇಜುಗಳು ಖಾದಿಯ ಬಟ್ಟೆ ಹೊದ್ದು ಹೂಪಾತ್ರೆಗಳಿಂದಲಂಕೃತ ವಾಗಿವೆ. ಸಾಲದುದಕ್ಕೆ ಬೇಬಿಯ ನಾನಾ ಭಂಗಿಯಲ್ಲಿ ನಿಂತ, ಆಡಿದ, ಓದುತ್ತಿರು ವಾಗಿನ ಭಾವಚಿತ್ರಗಳು! ಅಲ್ಲಿ ಗೌರಮ್ಮ ಕೂಡುವುದು ಕಡಿಮೆ. ಅದನ್ನು ದಾಟಿ ಮೊಗಸಾಲೆ; ಮುಂದೆ ಹೂದೋಟ. ತರತರದ ಹೂಗಿಡಗಳು—ಎಲೆಬಳ್ಳಿ; ಅರ್ಧ ಪರಿಘದಂತೆ ಒಂದು ಕಿತ್ತಳೆಯ ಸಾಲು ಹೂದೋಟವನ್ನಾಕ್ರಮಿಸಿದೆ. ಗೊಂಚಲು ಗೊಂಚಲಾಗಿ ಕಿತ್ತಳೆಗಳು ಗಿಡಗಳನ್ನು ಬಾಗಿಸಿವೆ. ಅಲ್ಲಿ ಒಂದು ದೊಡ್ಡ ಮೇಜು. ಅದರ ಮೇಲೆ ಲೇಖನ ಸಾಹಿತ್ಯ—ಗೌರಮ್ಮನವರ ಸಾಹಿತ್ಯ—ಇಂಗ್ಲೀಷು, ಕನ್ನಡ ಪುಸ್ತಕ-ಪತ್ರಿಕೆಗಳು ಹರಡಿವೆ. ಅಲ್ಲಿ ನಾಲ್ಕು ಕುರ್ಚಿಗಳು ಮೇಜನ್ನು ಸುತ್ತು- ವರಿದಿವೆ; ಒಂದು ಮುರುಕು ಕುರ್ಚಿ ಒಂದು ಮೂಲೆಗಿದೆ. ಅದರ ಬೆತ್ತದ ಜಾಳಿಗೆ ಹರಿದಿದೆ. ಅದರ ಬುಡದಲ್ಲೊಂದು ಸ್ಟೂಲನ್ನು ಸರಿಸಲಾಗಿದೆ. ನನಗೆ ಅದನ್ನು ನೋಡಿ ಆಶ್ಚರ್ಯವಾಯಿತು. ಅದರ ಹತ್ತಿರ ಹಾಯ್ದೆ; "ಹಾ! ಅದು ನನ್ನ ಸ್ಫೂರ್ತಿದಾಯಕ ಖುರ್ಚಿ, ನೀವು ಓದಿದ ಕತೆಗಳು ಅದರ ವರಗಳು. ನೀವು ಇತ್ತ ಬರಬೇಡಿ, ನನ್ನ ಸ್ಫೂರ್ತಿ ನಿಮ್ಮದಾದೀತು!" ಎಂದು ಒಂದೇ ಉಸುರಿನಲ್ಲಿ ಹೇಳಿದರು. ನಾನು ಹಟದಿಂದ ಅದರ ಕಡೆಗೆ ಹೋದೆ. ಬುಡದ ಸ್ಟೂಲನ್ನು ಎಳೆದರು—ಜಾಳಿಗೆ ಜೊಳ್ಳು ಬಿದ್ದಿತು. ನಾವಿಬ್ಬರೂ ಮೇಜಿನ ಹತ್ತಿರ ಬಂದೆವು.

ಒಂದೊಂದು ಆಸನವನ್ನು ಆಕ್ರಮಿಸಿದೆವು. "ಎಲ್ಲಿ, ಸುದ್ದಿ ಹೇಳಿ" ಎಂದರು. "ನನ್ನ ಕಾಗದಗಳಿವೆಯೇ ?" ಎಂದೆ. "ಇದಿರಲಿ--ಮೊದಲು ಸುದ್ದಿ ಹೇಳಿ." ಎಂದರು. ನಾನು ಕೈಯಲ್ಲಿದ್ದ ವೃತ್ತಪತ್ರ ಚಾಚಿದೆ. ಅದನ್ನಿಸಿದುಕೊಂಡು ಮೇಜಿನ ಮೇಲೆಸೆದು, "ಎಂಥ ಜನ ನೀವು!" ಎಂದರು. "ನನಗೆ ಅಂದು ಬರಲಿಕ್ಕೆ ಆಗಲಿಲ್ಲ" ಎಂದೆ. "ಅದು ನನಗೆ ಗೊತ್ತು--ಯಾಕೆ ಆಗಲಿಲ್ಲ ಹೇಳಿ!........ ಅಯ್ಯೋ ನಿಮ್ಮನ್ನು ಹಾಗೇ ಕೂರಿಸಿದೆನಲ್ಲ! ಸರಸ್ವತೀ, ಕಾಫಿ! ರುಕ್ಮಾ, ಹಣ್ಣು!" ಎಂದು ಕೂಗಿಕೊಂಡು ತಾವು ಹೋಗಿ ನನ್ನ ಕಾಗದಗಳನ್ನು ತಂದುಕೊಟ್ಟರು. ನಾನು ಅವುಗಳನ್ನು ಓದಲು ಆತುರನಾಗಿದ್ದೆ. "ಮೊದಲು ಕಾಫಿ ಕುಡಿಯಿರಿ, ಕಾಗದ ಆಮೇಲೆ ಓದಿದರೆ ಆಗದೇ? ಅಯ್ಯೋ ಇವರೆಲ್ಲಿ? ಮನೆಗೆ ಜನ ಬಂದಾಗ ಇವರಿರುವದೇ ಇಲ್ಲ" ಎಂದು ಒಂದೆಡೆಗೆ ಓಡಿದರು. ಎರಡು ನಿಮಿಷ ಗಳಲ್ಲಿ ಮತ್ತೆ 'ಹೋ' ಎನ್ನುತ್ತ ತಮ್ಮ ಪತಿ ಶ್ರೀ. ಗೋಪಾಲಕೃಷ್ಣರ (ಗೋಪಾ ಲಯ್ಯ ಎನ್ನುವುದೂ ಉಂಟು.) ಕೈಹಿಡಿದುಕೊಂಡು ಬರುತ್ತಿರುವುದನ್ನು ಕಂಡೆ. ಎರಡೂ ಒಂದು ಬಗೆಯ ಬೆಳಕಿನ ಮುಖ, ಒಂದೇ ನಗೆ, ಎರಡು ದೇಹ, ಒಂದೇ ಗಾತ್ರ—ಗತಿ. ಇಬ್ಬರೂ ಸಮನಾಗಿ ಹೆಜ್ಜೆ ಹಾಕುತ್ತ ಬರುತ್ತಿದ್ದರು. ಅವರು ನಡೆದುಬರುತ್ತಿದ್ದ ಆ ನೋಟ 'ಅವರಿನ್ನೂ ದೂರದಿಂದ ಬರುತ್ತಿರಬೇಕು; ಇಲ್ಲವೆ ನಾನು ಹಿಂದೆ ಸರಿಯುತ್ತಿರಬೇಕು. ಅವರು ಹಾಗೇ ಬರುತ್ತಿರಬೇಕು, ನಾನು ನೋಡು ತ್ತಲೇ ಇರಬೇಕು!' ಎನ್ನಿಸಿತು. ಎಂತಹ ಜೊತೆ ಅದು! ಸರ್ವಜ್ಞ ಕವಿ ಇಂತಹ ಒಂದು ದಾಂಪತ್ಯ ನೋಡಿಯೆ 'ಸ್ವರ್ಗಕ್ಕೆ ಕಿಚ್ಚು ಹಚ್ಚು' ಎಂದಿರಬೇಕು.

ಗೌರಮ್ಮನವರಲ್ಲಿ ದೇಶಭಕ್ತಿಯೂ ಉಜ್ವಲವಾಗಿತ್ತು. ಹತ್ತು—ಹನ್ನೆರಡು ವರುಷಗಳಿಂದ ಸಂಪೂರ್ಣವಾಗಿ ಖಾದಿ ಧರಿಸುತ್ತಿದ್ದರು. ಖಾದಿಯನ್ನು ಉಡು ತೊಡುವವರನ್ನು ಕಂಡರೆ ಅವರಿಗೆ ತುಂಬ ಸಂತೋಷ. ಮಹಾತ್ಮಾಗಾಂಧಿಯವ ರೊಮ್ಮೆ ಕೊಡಗಿಗೆ ಬಂದಾಗ, ಶ್ರೀ. ಮಂಜುನಾಥಯ್ಯನವರಲ್ಲಿ ಬಂದರಂತೆ. ಆಗ ಗೌರಮ್ಮನವರು ತಮ್ಮ ಮನೆಗೂ ಮಹಾತ್ಮರನ್ನು ಕರೆದರಂತೆ. ಸಮಯವಿಲ್ಲದ್ದ ರಿಂದ ಅವರು ಹೋಗಲು ಅಷ್ಟು ಆತುರಪಡಲಿಲ್ಲವಂತೆ. ಗೌರಮ್ಮನವರು 'ಫಾಸ್ಟ' ಆರಂಭಿಸುವೆನೆಂದು ಹೇಳಿ ಕಳಿಸಿದರು. ಹೆದರಿ ಬಂದ ಮುದುಕ. ಗೌರಮ್ಮ ತಮ್ಮ ಮೈಮೇಲಿನ ಎಲ್ಲ ಆಭರಣ ಬಿಚ್ಚಿ ಕೊಟ್ಟುಬಿಟ್ಟರಂತೆ. ಮಹಾತ್ಮರು ಗೋಪಾಲಯ್ಯನವರನ್ನು ಕರೆದು 'ನಿಮ್ಮ ಆಕ್ಷೇಪಣೆ ಇಲ್ಲವಷ್ಟೆ?' ಎಂದರಂತೆ. 'ಅವಳಿನ್ನು ಆಭರಣ ಬೇಡದಿದ್ದರಾಯಿತು!' ಎಂದು ನಕ್ಕು ನುಡಿದರಂತೆ ಗೋಪಾ ಲಯ್ಯನವರು. ಆಗ "ಹರಿಜನ"ದಲ್ಲಿ ಮಹಾತ್ಮರು ಈ ವಿಷಯದಲ್ಲಿ ಒಂದು ಲೇಖ ಬರೆದರಂತೆ. ನನಗಿದನ್ನು ಮಡಿಕೇರಿಯಲ್ಲಿ ಒಬ್ಬ ಸ್ನೇಹಿತರು ಹೇಳಿದರು. 'ಕೊಡಗು ಬ್ರಿಟಿಶ್ ಕನ್ನಡ ನಾಡಿನೊಡನೆ ಒಂದಾಗದೆ ಗತಿಯಿಲ್ಲ!' ಎಂದು. ಇವರು ಅಲ್ಲಿಯ ಏಕೀಕರಣ ಪಕ್ಷದ ಮುಖಂಡರಾಗಿ ಕೆಲಸ ಮಾಡುತ್ತಿದ್ದರು.

ಇವರ ಕತೆಗಳಿಂದ ಚಿಗುರಿದ ಹೆಣ್ಣುಮಕ್ಕಳ ಸಾಹಿತ್ಯ, ಕನ್ನಡ ಸಾಹಿತ್ಯದಲ್ಲಿ ಮಂಗಲಪ್ರದವಾಗಿ ಬೆಳೆಯುತ್ತಿರುವ ಈ ಕಾಲದಲ್ಲಿ, ಇವರ ಮರಣದಿಂದ ಕನ್ನಡ ನಾಡೇ ಮರುಗುವಂತಾಯಿತು.

ಇಷ್ಟೆಲ್ಲ ಆಟವಾಡಿದ ಗೌರಮ್ಮನವರು ಇನ್ನಿಲ್ಲ. 'ಓ' ಕೊಡದ ನಾಡಿಗೆ ನಡೆದುಬಿಟ್ಟರು. ಈ ಎಲ್ಲ ಸವಿನೆನಪುಗಳ ಹಿಂದೆ ಒಂದು ಕರಾಳ ಸತ್ಯವು ತಾಂಡವವಾಡಿ ಅವರ ಬಳಗವನ್ನೂ-ಕನ್ನಡ ನಾಡನ್ನೂ ಅಪಾರ ಶೋಕಕ್ಕೀಡುಮಾಡಿದೆ. ನುಗ್ಗಿ ಬರುವ ಇಂತಹ ನೆನಪುಗಳೊಡನೆ 'ಇನ್ನು ಅವರಿಲ್ಲವಲ್ಲ' ಎಂಬ ನೆನಪು ದುಃಖವನ್ನು ನೂರ್ಮಡಿಸುತ್ತಿದೆ. ಅವರಿಲ್ಲವೆಂಬ ದುಃಖ, ಈ ನೆನಪುಗಳಲ್ಲಿ ಒಂದು ನಿಮಿಷವಾದರೂ ಮರೆತರೆ ಅದೇ ರಸನಿಮಿಷ! ಇಂಥ ಪವಿತ್ರ ಆತ್ಮಗಳೂ ಇಲ್ಲದಾಗುತ್ತಿರಬಹುದೇ ?

—ದತ್ತಾತ್ರೇಯ ಕುಲಕರ್ಣಿ
(ಹಕ್ಕಿ ನೋಟದಿಂದ)

## ಅಭ್ಯಸನಗಳು

ಪ್ರಶ್ನೆಗಳು :—

(೧) ಶ್ರೀಮತಿ ಗೌರಮ್ಮನವರ ಮಾತಿನೊಳಗಿನ ವಿನೋದಗಳನ್ನು ಎತ್ತಿ ಹೇಳಿರಿ.

(೨) ಹೆಣ್ಣುಮಕ್ಕಳ ಸಾಹಿತ್ಯದ ಬಗೆಗೆ ಗೌರಮ್ಮನವರು ಯಾವ ಆಸೆಯನ್ನು ತಳೆದಿದ್ದರು ?

(೩) ಮಹಾತ್ಮಾಜಿಯವರ ಪ್ರೀತಿಗೆ ಶ್ರೀಮತಿ ಗೌರಮ್ಮನವರು ಹೇಗೆ ಪಾತ್ರರಾದರು ?

ಭಾಷಾಭ್ಯಾಸ :—

(೧) [ಅ] ಮೊದಲನೆಯ ವಾಕ್ಯವೃಂದವನ್ನು ಓದಿ, ಒಳ್ಳೆಯ ಚಿತ್ರಕಾರನು ಶ್ರೀಮತಿ ಗೌರಮ್ಮನವರ ಚಿತ್ರವನ್ನು ತೆಗೆಯಬಹುದು. ಈ ಬಗೆಯ ವರ್ಣನೆಯ ಶೈಲಿಯನ್ನು ನೀವು ಅಭ್ಯಾಸದಿಂದ ಪಡೆಯಬೇಕು.

[ಬ] ಕೆಳಗಿನ ವರ್ಣನೆಗಳನ್ನು ಬರೆಯಿರಿ.

(೧) ಸುಂದರವಾಗಿ ಅಲಂಕರಿಸಿದ ನಿಮ್ಮ ಅಭ್ಯಾಸದ ಕೋಣೆ.

(೨) ಕುರುಡ ಭಿಕ್ಷುಕಿ.

(೨) [೧] ಇದೊಂದು ಹೆಣ್ಣುಮಕ್ಕಳ ಕೃತಿ ಎಂಬ ಪೊಳ್ಳು ಸಹಾನುಭೂತಿಯ ಹೊರೆಯನ್ನು ನಾವೆಷ್ಟು ದಿನ ಹೊತ್ತಿರಬೇಕು ?

[೨] ಇಂತಹ ಪವಿತ್ರ ಆತ್ಮಗಳೂ ಇಲ್ಲದಾಗುತ್ತಿರಬಹುದೇ ?

ಈ ವಾಕ್ಯಗಳಲ್ಲಿಯ ವಿಚಾರವನ್ನು ಸ್ಪಷ್ಟಗೊಳಿಸಿರಿ.

ಶಬ್ದವಿಚಾರ :—

(೧) ಓಟ, ಕಾಟ, ನೋಟ, ಊಟ, ನಿಲವು — ಈ ಶಬ್ದಗಳು ಯಾವ ಧಾತುಗಳಿಂದ ಸಿದ್ಧವಾಗಿವೆ ಎಂಬುದನ್ನು ಹೇಳಿರಿ.

(೨) ವಿಮರ್ಶಕ ಶಕ್ತಿ, ರಸ ನಿಮಿಷ, ವ್ಯಕ್ತಿತ್ವ — ಈ ಶಬ್ದಗಳ ಅರ್ಥವನ್ನು

(೩) ಗೊಳ್ಳೆಂದು ನಗು, ಗಹಗಹಿಸಿ ನಗು — ಹೀಗೆ ಹೊಡೆ, ತಿನ್ನು, ಕುಣಿ, ಹರಿ, ತೊಯ್ಯು — ಇವುಗಳಿಗೆ ಅನುಕೃತಿ ಶಬ್ದಗಳನ್ನು ಬರೆಯಿರಿ.

ವಾಕ್‌ಶಿಕ್ಷಣ :—

‘ ಒಂದು ಕೋಚು, ನಾಲ್ಕು ಕುರ್ಚಿ .... ಕಿತ್ತಳೆ ಗಿಡಗಳನ್ನು ಬಾಗಿಸಿದೆ ’ ಈ ವರ್ಣನೆಯನ್ನು ಪಾಠ ಮಾಡಿರಿ. ಶ್ರೀಮಾನ್ ಬೇಂದ್ರೆಯವರು ಬರೆದ ‘ ತಂಗಿ ಗೌರವ್ಮಗೆ ’ ಎಂಬ ಕವಿತೆಯನ್ನು ಓದಿರಿ.

ಚರ್ಚೆ :—

(೧) ‘ ಹೆಣ್ಣುಮಕ್ಕಳು ಗಂಡಸರನ್ನು ಸರಿಗಟ್ಟಲಾರರು.’

(೨) ‘ ಗಂಡಸಿನಲ್ಲಿ ಇರುವ ಗುಣಗಳಿಗಿಂತ ಹೆಂಗಸಿನಲ್ಲಿರುವ ಗುಣಗಳು ಮಿಗಿಲಾದವು ’

ಬರೆಹ :—

(೧) ನಿಮ್ಮ ಶಾಲೆಯ ವಾರ್ಷಿಕ ಸ್ನೇಹ ಸಮ್ಮೇಲನಕ್ಕೆ ಬರಲು ನಿಮ್ಮ ಮಿತ್ರನಿಗೆ ಒಂದು ಪತ್ರ ಬರೆಯಿರಿ.

(೨) ಹೂದೋಟವನ್ನು ವರ್ಣಿಸಿರಿ.

(೩) ನಿಮ್ಮಲ್ಲಿ ಏನಾಗಬೇಕೆಂಬ ಮಹಾತ್ವಾಕಾಂಕ್ಷೆಯಿರುವದೆಂಬುದನ್ನು ಸಕಾರಣವಾಗಿ ಬರೆಯಿರಿ :—

ಕವಿ, ಸೇನಾಪತಿ, ಮುಖ್ಯಮಂತ್ರಿ, ವಿಜ್ಞಾನಿ, ನಟಿ–ನಟ — ಇತ್ಯಾದಿ.

# ೨೫. ಜಾತ್ರೆ

[ ನಮ್ಮ ನಾಡಿನ ಸಂಸ್ಕೃತಿ ಹೊಳೆತು ಕೊನರಿ ಜನಸಾಮಾನ್ಯರಲ್ಲಿ ಚೆಲ್ಲರಿದು ಹಬ್ಬಿದುದು ಜಾತ್ರೆಗಳ ಹಿನ್ನೆಲೆಯಲ್ಲಿಯೇ. ಇಂತಹ ಜಾತ್ರೆಗಳು ನಮ್ಮ ಊರು-ಊರುಗಳಲ್ಲಿಯೂ ಜರುಗುವವು. ಬಿಹಾರದ ಇದೇ ಬಗೆಯ ಒಂದು ಪ್ರಚಂಡ ಜಾತ್ರೆಯ ವರ್ಣನೆಯನ್ನಿಲ್ಲಿ ಕೊಟ್ಟಿದೆ.]

ವರ್ಷವರ್ಷವೂ ಕಾರ್ತಿಕ ಪೌರ್ಣಿಮೆಯ ದಿನ ಎಲ್ಲ ದಾರಿಗಳೂ ಸೋನಪುರದ ದಾರಿಗಳೇ ಆಗುತ್ತವೆ. ಉತ್ತರ ಬಿಹಾರದಲ್ಲಿರುವ ಸೋನಪುರದ ಜಾತ್ರೆ ಬಹಳ ದೊಡ್ಡದು. ಅದು ಭಾರತದಲ್ಲಿ ಮಾತ್ರವಲ್ಲ, ಏಶಿಯದಲ್ಲೇ ಅತಿ ದೊಡ್ಡ ಜಾತ್ರೆಯೆಂದು ಹೇಳುತ್ತಾರೆ. ರಶಿಯದಲ್ಲಿ ಸಪ್ಟಂಬರ ೧ ರಿಂದ ೧೫ ರ ವರೆಗೆ ಜರುಗುವ ನಿಜನಿನೊವಗ್ರಾಡ ಜಾತ್ರೆಯು, ಜಗತ್ತಿನಲ್ಲಿ ಜರುಗುವ ಎಲ್ಲ ಜಾತ್ರೆಗಳಲ್ಲಿ ಮೊದಲನೆಯ ಸ್ಥಾನ ಪಡೆದಿದೆ. ಆದರೆ ಇಲ್ಲಿ ಜರುಗುವ ಆನೆಗಳ ಮತ್ತು ಇತರ ಪ್ರಾಣಿಗಳ ಜಾತ್ರೆ ಮಾತ್ರ ಜಗತ್ತಿನಲ್ಲೇ ಅದ್ವಿತೀಯವಾದದ್ದು. ಸೋನಪುರ ರೇಲ್ವೆ ಪ್ಲ್ಯಾಟಫಾರ್ಮು ಜಗತ್ತಿನಲ್ಲಿಯೇ ಅತ್ಯಂತ ದೊಡ್ಡದು. ಅದು ಒಂದು ಮೈಲಿಗಿಂತ ಉದ್ದವಾಗಿದೆ. ನಿಜನಿನೊವಗ್ರಾಡದ ಜಾತ್ರೆ ಓಕಾ ಮತ್ತು ಓಲ್ಗಾ ನದಿಗಳ ಸಂಗಮದಲ್ಲಿ ಜರುಗುತ್ತಿದ್ದರೆ, ಸೋನಪುರದ್ದು ಗಂಗಾ ಮತ್ತು ಗಂಡಕಿ (ಅಥವಾ ನಾರಾಯಣಿ) ಸಂಗಮದಲ್ಲಿ ನಡೆಯುತ್ತದೆ.

ಸೋನಪುರವು ಬಿಹಾರದ ರಾಜಧಾನಿಯಾದ ಪಾಟಣಾ ಪಟ್ಟಣದಿಂದ ಸುಮಾರು ಇಪ್ಪತ್ತು ಮೈಲಿನ ಮೇಲಿರುವ ಒಂದು ಚಿಕ್ಕ ಹಳ್ಳಿ. ಜನಸಂಖ್ಯೆ ಕೆಲ ಸಾವಿರಕ್ಕಿಂತ ಹೆಚ್ಚು ಇಲ್ಲ. ಆದರೆ ಜಾತ್ರೆ ಬಂದಿತೆಂದರೆ ಅದರ ಸಮೃದ್ಧವಾದ ಮಾವಿನ ತೋಪುಗಳ ಕೆಳಗೆ, ನದೀತೀರದ ಬಯಲು ಪ್ರದೇಶಗಳಲ್ಲಿ ಲಕ್ಷಾಂತರ ಜನರಿಗೆ ಆಶ್ರಯ ಕೊಡುವ ನಗರವೊಂದು ಒಮ್ಮೆಲೆ ತಲೆ ಎತ್ತುವುದು. ಅವರು ಒಂದೆರಡು ವಾರ ಅಲ್ಲಿ ಉಳಿಯುವರು. ಇದಕ್ಕಾಗಿ ದೊಡ್ಡ ಪ್ರಮಾಣದಲ್ಲಿ ಸಿಬ್ಬಂದಿಯನ್ನು ನೇಮಿಸಿಕೊಳ್ಳಲಾಗುವುದು. ಆನೆ, ದನ, ಕುದುರೆ, ಆಡು, ಕುರಿ,



ಪಕ್ಷಿಗಳ ಪೇಟೆ

ಪಕ್ಷಿಗಳು, ವಿವಿಧ ಸರಕುಗಳು ಮುಂತಾದವುಗಳನ್ನು ಜಾತ್ರೆಗೆ ತಂದವರು ಎಡೆ ಸಿಕ್ಕಲ್ಲಿ ಗುಡಿ-ಗುಡಾರಗಳ ಆಶ್ರಯದಲ್ಲಿ ತಮ್ಮ ಬಿಡಾರ ಬಿಡುತ್ತಾರೆ. ಲಕ್ಷಾಂತರ ಜನರು ಪ್ರೇಕ್ಷಕರಾಗಿ ಬಂದು ಈ ತಾತ್ಪೂರ್ತಿಕ ನಗರದಲ್ಲಿ ಕಿಕ್ಕಿರಿಯುತ್ತಾರೆ.

ಎಲ್ಲಿ ಪಂಜಾಬ! ಎಲ್ಲಿ ಆಸಾಮು! ಎಲ್ಲ ಕಡೆಯಿಂದಲೂ ಉತ್ತಮ ಜಾತಿಯ ದನಕರುಗಳು, ಎಮ್ಮೆ ಕೋಣಗಳು, ಆನೆ ಕುದುರೆಗಳು, ಹಕ್ಕಿ ಪಕ್ಕಿಗಳು ಸೋನಪುರ ಜಾತ್ರೆಗೆ ಬರುತ್ತವೆ. ದನಗಳ ಜಾತ್ರೆಯಲ್ಲಿ ದಿನಕ್ಕೆ ೩೬ ಪೌಂಡು (೧೮ ಸೇರು) ಹಾಲು ಕರೆಯುವ ಒಂದು ಸಹೀವಾಲ ದನವು ಈ ವರ್ಷದ ಸರಕಾರೀ ಬಹುಮಾನವನ್ನು ಪಡೆಯಿತು. ಕುದುರೆಗಳಲ್ಲಿ ಸವಾರೀ ಜಾತಿಗಿಂತ ಗಾಡಿ ಎಳೆಯುವ ಜಾತಿಯವೇ ಹೆಚ್ಚಾಗಿರುವವು. ಕುದುರೆಗಳು ಸಾಕಷ್ಟು ಬಂದರೂ ಆನೆಗಳೇ ಜಾತ್ರೆಯ ಪ್ರಧಾನ ದೃಶ್ಯವಾಗಿವೆ. ಆನೆ ಭೂಮಿಯ ಮೇಲಿನ ಪ್ರಾಣಿಗಳಲ್ಲಿ ಅತಿ ದೊಡ್ಡದು. ೪೦-೫೦ ವರ್ಷದ ಚೆನ್ನಾಗಿ ಬೆಳೆದ ಆನೆ ಸ್ವತಃ ದರ್ಶನೀಯ ಪ್ರಾಣಿಯಾಗಿರುತ್ತದೆ. ಹಣೆಗೆ ಕೆಂಪು ಬಳಿದು, ದಂತಕ್ಕೆ ತಳತಳಿಸುವ ಉಂಗುರಗಳನ್ನು ತೊಡಿಸಿ, ಬೆನ್ನಿಗೆ ಜೂಲು ಹಾಕಿ, ಕೊರಳಿಗೆ ಸರಗಳನ್ನೂ ಗಂಟೆಗಳನ್ನೂ

ತೂಗುಬಿಟ್ಟರಂತೂ ಆನೆಯ ಭವ್ಯತೆ ಬೇರಾವ ಪ್ರಾಣಿಗೂ ದೊರೆಯಲಾರದು. ಏಕತ್ರಿತ ಸ್ನಾಯುಶಕ್ತಿಯ ಮೂರ್ತಿಯಂತಿರುವ ಈ ಪ್ರಾಣಿ ವಿಶ್ರಮಿಸುವಾಗ ನಿಶ್ಚಲ ಕಾಣಿಸಿದರೂ ಅದರ ಬಲಿಷ್ಠ ಸೊಂಡಿಲು ಮಾತ್ರ ಅತ್ಯಂತ ಚಪಲ ಚಂಚಲವಾಗಿಯೆ ಕಾಣಿಸುತ್ತದೆ. ನೂರಾರು ಚಿಕ್ಕ ದೊಡ್ಡ ಮತ್ತು ಹಸುಳೆ ಆನೆಗಳು ಸಾಲಾಗಿ ಸೊಂಡಿಲು ಆಡಿಸುತ್ತ ನಿಂತಿರುವ ದೃಶ್ಯ ಅಪೂರ್ವವಾಗಿದೆ. ಅವು ನದಿಯಲ್ಲಿಳಿದು ನೀರಾಟವಾಡುವುದಂತೂ ಮೋಹಕವೂ ಉತ್ತೇಜಕವೂ ಆದ ನೋಟ.



ಈ ಮಹಾಜಾತ್ರೆಯ ಮೂಲವು ಪುರಾತನ ಕಾಲಗರ್ಭದಲ್ಲಿ ಅಡಗಿದೆ. ಜಾತ್ರೆ ಇಲ್ಲೇ ಏಕೆ ಕೂಡುತ್ತದೆಂಬುದೂ ಸರಿಯಾಗಿ ಗೊತ್ತಿಲ್ಲ. ಆದರೆ ಕೆಲ ವೈಶಿಷ್ಟ್ಯಗಳೇ ಈ ಸ್ಥಳವನ್ನು ಆರಿಸಲು ಕಾರಣವಾಗಿರುವವೆಂಬುದು ಸ್ಪಷ್ಟವಾಗಿದೆ.

ಯಾವಾಗಲೂ ಸ್ನಾನವೆಂಬುದು ಚೈತನ್ಯದಾಯಕವಾದದ್ದು. ಅದರಲ್ಲಿಯೂ ತಿಳಿಯಾದ ನೀರಿನಲ್ಲಿ ಮೀಯುವುದರಿಂದ ದೇಹಾತ್ಮಗಳೆರಡೂ ಪರಿಶುದ್ಧವಾಗುತ್ತವೆ. ಆದ್ದರಿಂದಲೇ ಅದು ಪುಣ್ಯಕಾರ್ಯವೆಂಬ ಭಾವನೆ ನಮ್ಮಲ್ಲಿ ಬೇರೂರಿದೆ. ಒಂದಕ್ಕಿಂತ ಹೆಚ್ಚು ನದಿಗಳು ಸಂಗಮಿಸುವಲ್ಲಿ ಮಾಡುವ ಸ್ನಾನ ಪಾವನವೆನಿಸುತ್ತದೆ. ಇದನ್ನು ಅಂಧಾಚಾರವೆಂದು ಕೆಲವರು ತೆಗಳಬಹುದು. ಆದರೆ ಅವರೇ ತಮ್ಮಲ್ಲಿರುವ ಒಂದು ವಿಶಿಷ್ಟ ದಿನವೇ ಚರ್ಚು, ಮಸೀದೆ ಅಥವಾ ದೇವಸ್ಥಾನಕ್ಕೆ ಹೋಗುವ ರೂಢಿಯನ್ನು ಅಂಧಶ್ರದ್ಧೆಯೆಂದು ಹೇಳುವುದಿಲ್ಲ. ಎರಡರಲ್ಲಿಯೂ ಪುಣ್ಯ–ಪಾವಿತ್ರ್ಯದ ಭಾವನೆ ಉಂಟಾಗುವುದು ಮಾನಸಿಕ ಅನುಭೂತಿಯಿಂದ. ಸ್ನಾನದಲ್ಲಿ ಏನಿಲ್ಲೆಂದರೂ ದೇಹಶುದ್ಧಿಯಾದರೂ ಇದೆ. ಆದರೆ ಇತರ ಆಚಾರಗಳಲ್ಲಿ ಎಲ್ಲವೂ ಮಾನಸಿಕ ಭಾವನೆಯೇ.

ಸಂಗಮ ಸ್ಥಾನವು ಜಾತ್ರೆಯ ಒಂದು ಮುಖ್ಯ ಕಾರಣ. ಆದರೆ ಕಾರ್ತಿಕ ಪೂರ್ಣಿಮೆ ದಿನವೇ ಏಕೆ ? ಇಲ್ಲಿ ಪುರಾಣದ ಕಥೆಯೊಂದು ನಮ್ಮ ಸಹಾಯಕ್ಕೆ ಬರುತ್ತದೆ. ಆಚೆ ದಂಡೆಯ ಕೊನ್ಹಾರದಲ್ಲಿಯೇ ಪುರಾಣಪ್ರಸಿದ್ಧವಾದ ಗಜೇಂದ್ರ ಮೋಕ್ಷದ ಘಟನೆ ನಡೆಯಿತು. ಗಜೇಂದ್ರನಿಗೂ ಮೊಸಳೆಗೂ ಸಾವಿರ ವರುಷಗಳ ಕದನ ನಡೆದು ವಿಷ್ಣುವಿನ ಅನುಗ್ರಹದಿಂದ ಕೊನೆಗೆ ಗಜೇಂದ್ರನು ವಿಮೋಚನೆ ಹೊಂದಿದನು. ಈ ಕಾರಣದಿಂದಲೇ ಇದು ಆನೆಗಳಿಗೆ ಮಂಗಲಸ್ಥಾನ. ಅದರಿಂದಲೇ ಇಲ್ಲಿ ಆನೆಯ ಜಾತ್ರೆ ನಡೆಯುತ್ತದೆ. ಇಲ್ಲಿ ಆನೆಯ ವ್ಯಾಪಾರ ಮಾಡಿದರೆ ಕೊಂಡವನಿಗೂ ಕೊಟ್ಟವನಿಗೂ ಶುಭಕರವೆಂದು ಭಾವಿಸಲಾಗಿದೆ.



ಹರಿಹರನಾಥ ದೇವಾಲಯವು ಈ ಸಂಗಮದ ಇನ್ನೊಂದು ಆಕರ್ಷಣೆ. ಹರಿ ಮೇಲು ಹರ ಮೇಲೆಂಬ ಬಲುಗಾಲದ ಜಗಳವು ಮಧ್ಯ-ಮಾರ್ಗದಿಂದ ಬಗೆಹರಿದು ಈ ದೇವಸ್ಥಾನ ಕಟ್ಟಲ್ಪಟ್ಟಂತೆ ಕಾಣುವುದು. ಅಲ್ಲಿನ ಗರ್ಭಗುಡಿಯಲ್ಲಿ ಹರಿಹರ ವಿಗ್ರಹಗಳು ಹತ್ತಿರ ಹತ್ತಿರ ನಿಂತಿವೆ. ಅಂದು ಎರಡನ್ನೂ ಯಾತ್ರಿಕರು ಭೇದಭಾವನೆಯಿಲ್ಲದೆ ಪೂಜಿಸುತ್ತಾರೆ.

ಅಲ್ಲದೆ ಋತುಮಾನವೂ ಆಗ ತುಂಬ ಅನುಕೂಲ. ಮಳೆಗಾಲ ಮುಗಿದಿರುತ್ತದೆ; ಕೊರೆಯುವ ಚಳಿ ಇನ್ನೂ ಪ್ರಾರಂಭವಾಗಿರುವುದಿಲ್ಲ. ಹೊಲಗಳಲ್ಲಿಯೂ ಕೆಲಸವಿರುವುದಿಲ್ಲ. ಆಕಾಶ ನಿರಭ್ರವಾಗಿರುತ್ತದೆ. ಕಾರ್ತಿಕ ಪೌರ್ಣಿಮೆಯ ಬೆಳದಿಂಗಳು ಅತ್ಯಾನಂದದಾಯಕವಿರುತ್ತದೆ. ಇಂಥ ಸಮಯದಲ್ಲಿ ಸಂಗಮದಲ್ಲಿ

ಬಿಂದು, ಹರಿಹರೇಶ್ವರನನ್ನು ಆರಾಧಿಸಿ, ಕೆಲವು ಸಾಮಾನುಗಳನ್ನು ಕೊಂಡು ಹೊಸ ಹುರುಪಿನಿಂದ ಮನೆಗೆ ಮರಳಬಾರದೇಕೆ? ಎಂಬೀ ವಿಚಾರ ಸುತ್ತುಮುತ್ತಲ ಹಳ್ಳಿಗಳ ಜನರ ಮನಸ್ಸಿನಲ್ಲಿ ಸುಳಿಯುತ್ತಿರಬೇಕು.

ಭಾರತದಲ್ಲಿ ಜಾತ್ರೆಗಳು ವಿವಿಧೋದ್ದೇಶ ಸಾಧನಗಳಾಗಿರುತ್ತವೆ. ಮೂಲ ಕಾರಣ ಧಾರ್ಮಿಕವಾಗಿದ್ದರೂ ಅದು ನಿಮಿತ್ತಮಾತ್ರ. ದೂರದೂರದ ಬಂಧು ಬಾಂಧವ ಮಿತ್ರರನ್ನು ಕಾಣಲು, ಸುಖ ದುಃಖಗಳ ಮಾತುಗಳನ್ನು ಆಡಿಕೊಳ್ಳಲು, ಸರಕುಗಳನ್ನು ಕೊಳ್ಳಲು ಮಾರಲು ಅವು ಉತ್ತಮ ಸಂಧಿಗಳು; ಕಲೆ-ಕೈಗಾರಿಕೆ ಗಳ, ಕುಸ್ತಿ, ಡೊಂಬರಾಟಗಳ ಪ್ರದರ್ಶನದ ಅವಸರಗಳು; ಮನೋರಂಜನೆಯ ಸಂದರ್ಭಗಳು.

ಈ ಕೆಲ ವರ್ಷಗಳಿಂದ ಈ ಜಾತ್ರೆಯಲ್ಲಿ ಸ್ಥಿತಿಗತಿಗಳನ್ನು ಸುಧಾರಿಸಲು ಸರಕಾರವು ಯತ್ನಿಸುತ್ತಿದೆ. ಈ ವರುಷ ಎಪ್ಪತ್ತು ವಿಶೇಷ ರೇಲುಗಾಡಿಗಳು ಎಂಬತ್ತೆರಡು ಸಾವಿರ ಜನರನ್ನು ಜಾತ್ರೆಗೆ ತಂದವು. ಹಿಂದಿನ ವರ್ಷಕ್ಕಿಂತ ಇದು ಬಹಳ ಹೆಚ್ಚು. ಆದರೆ ಜನರು ಡೋಣಿಗಳಲ್ಲಿಯೂ ಕಾಲ್ನಡಿಗೆಯಿಂದಲೂ ಬರು ವುದೇ ಹೆಚ್ಚು. ಕಳೆದ ಕೆಲವರ್ಷಗಳಿಂದ ಸಾರ್ವಜನಿಕ ಆರೋಗ್ಯ, ಶುಚಿತ್ವ, ಕುಡಿಯುವ ನೀರಿನ ಸೌಕರ್ಯ ಮೊದಲಾದವುಗಳನ್ನು ಸುಧಾರಿಸಲಾಗಿದೆ; ಸರಕಾ ರವು ಕೃಷಿ, ಆರೋಗ್ಯ, ಕೈಗಾರಿಕೆ ಮೊದಲಾದ ಪ್ರದರ್ಶನಗಳನ್ನು ಏರ್ಪಡಿಸಿತ್ತು.

ದುರ್ದೈವದಿಂದ, ಕಳೆದ ಮೂವತ್ತು ವರುಷಗಳಿಂದ ಸೋನಪುರ ಜಾತ್ರೆ ಅವನತಿ ಹೊಂದುತ್ತಿದೆಯೆಂದು ಹೇಳಬೇಕಾಗಿದೆ. ಈ ವರ್ಷ ಪೌರ್ಣಿಮೆಯ ದಿನ ಎರಡು ಲಕ್ಷ ಯಾತ್ರಿಕರು ಕೂಡಿರಬಹುದು. ೩೫೦-೪೦೦ ಆನೆಗಳು ಬಂದಿದ್ದವು. ಆದರೆ ದನಕರುಗಳ ಸಂಖ್ಯೆ ನಲವತ್ತಾರು ಸಾವಿರದಷ್ಟಿತ್ತು. ಕುದುರೆಗಳು ಒಂದು ಸಾವಿರವಿರಬಹುದು. ಆಡು-ಕುರಿಗಳಿಗೆ ಲೆಕ್ಕವೇ ಇಲ್ಲ. ಮಾರಾಟಕ್ಕೆ ಬಂದ ಹಕ್ಕಿಗಳ ಜಾತಿಗಳು ಕಲ್ಪನಾತೀತವಾಗಿದ್ದವು. ಒಂದಂಗುಲ ಗುಬ್ಬಿಗಳಿಂದ ಹದ್ದು ನವಿಲುಗಳ ವರೆಗೆ ಅಸಂಖ್ಯ ಹಕ್ಕಿಗಳಿದ್ದವು. ಐದಾರು ಒಂಟೆಗಳೂ ಕಾಣಿಸು ತ್ತಿದ್ದವು.

ಇಂಥ ಜಾತ್ರೆಗಳ ಆಕರ್ಷಣೆಯನ್ನು ಹೆಚ್ಚಿಸಲು ಮತ್ತು ಹಳ್ಳಿಗರ ಉತ್ಸಾಹ ಶಕ್ತಿಯನ್ನೂ ಜ್ಞಾನ ಭಾಂಡಾರವನ್ನೂ ಅಭಿವೃದ್ಧಿಗೊಳಿಸಲು ಅವುಗಳನ್ನು ನಿಮಿತ್ತ ವಾಗಿ ಮಾಡಿಕೊಳ್ಳಲು ಹೆಚ್ಚಿನ ಸಂಘಟನೆಯ ಕಡೆಗೆ ವಿಶೇಷ ಲಕ್ಷ್ಯಕೊಡುವುದು ಅಗತ್ಯವಾಗಿದೆ. ಸಮಾಜೋದ್ಧಾರಕ್ಕೆ ಇವು ಅತ್ಯುತ್ತಮ ಸಿದ್ಧ ಸಾಧನಗಳಾಗಿವೆ. ಬಿಹಾರವೊಂದರಲ್ಲೆ ಪ್ರತಿವರ್ಷ ೮೫ ಜಾತ್ರೆಗಳು ಜರುಗುವವು. ಇತರ ರಾಜ್ಯಗಳ ಲ್ಲಿಯೂ ಅಷ್ಟೇ ಅಥವಾ ಅದಕ್ಕೂ ಹೆಚ್ಚು ಜಾತ್ರೆಗಳು ಆಗುತ್ತಿರಬಹುದು.

ಜಾತ್ರೆಗಳ ಸಂಸ್ಥೆಯನ್ನು ಪ್ರೋತ್ಸಾಹಿಸಲು ಹಲವು ಉಪಾಯಗಳಿವೆ. ನಗರದ ಸುಶಿಕ್ಷಿತರೂ ಸರಕಾರಿ ಅಧಿಕಾರಿಗಳೂ ಅವುಗಳಲ್ಲಿ ನೈಜ ಆಸ್ಥೆಯನ್ನು

ವಹಿಸಬೇಕು. ಅವು ಅಂಧಶ್ರದ್ಧೆಯಿಂದ ಪ್ರೇರಿತವಾದ ಜನಜಂಗುಳಿಯು ಕೂಟವೆಂದು ಕಡೆಗಣಿಸುವುದು ಸಲ್ಲದು. ಶುಚಿತ್ವ, ಸೌಕರ್ಯ, ಪ್ರಯಾಣದ ಅನುಕೂಲತೆಗಳು ಮತ್ತು ನಿಜವಾದ ಪ್ರಯೋಜನಗಳ ದೃಷ್ಟಿಗಳಿಂದ ಅವುಗಳಲ್ಲಿ ಸುಧಾರಣೆ ಮಾಡಲು ಅವಕಾಶವುಂಟು. ಮೂರನೆಯದಾಗಿ ಕಲೆ-ಕೈಗಾರಿಕೆಗಳ ಸ್ಪರ್ಧೆ, ಆಟಪಾಟಗಳು ಮೊದಲಾದವುಗಳನ್ನು ಈ ಜಾತ್ರೆಗಳಲ್ಲಿ ಏರ್ಪಡಿಸಿ ಹೆಚ್ಚು ಆಸ್ಥೆಯನ್ನೂ ಹುರುಪನ್ನೂ ಕುದುರಿಸಬಹುದು. ನಮ್ಮ ಮಕ್ಕಳನ್ನೂ ಶಾಲೆಯ ಹುಡುಗರನ್ನೂ ಜಾತ್ರೆಗೆ ಕರೆದುಕೊಂಡು ಹೋಗಿ ಅವರಿಗೆ ವಿವಿಧ ವಸ್ತುಗಳ ಮೂಲಕ ಜ್ಞಾನ ಕೊಡುವದು ಅಲ್ಲಿ ಸುಲಭ. ನಾವು ಈ ರೀತಿ ಕೆಲಸ ಮಾಡುತ್ತ ಹೋದಂತೆ ಹೊಸ ಹೊಸ ವಿಚಾರಗಳೂ ತಾವಾಗಿ ಹೊಳೆಯಬಹುದು. ಜಾತ್ರೆಗಳಿಗೆ ತೆರೆಗಣ್ಣಿನಿಂದ ಹೋದರೆ ಅದೇ ಒಂದು ಶಿಕ್ಷಣವಾಗುವುದೆಂಬಲ್ಲಿ ಸಂದೇಹವಿಲ್ಲ.

—ರಂಗನಾಥ ದಿವಾಕರ.

## ಅಭ್ಯಸನಗಳು

**ಪ್ರಶ್ನೆಗಳು :—**

(೧) ಸೋನಪುರ ಜಾತ್ರೆಯ ವೈಶಿಷ್ಟ್ಯವೇನು ?

(೨) ಜಾತ್ರೆಯನ್ನು ಜರುಗಿಸಲು ಸೋನಪುರದಲ್ಲಿರುವ ಅನುಕೂಲತೆಗಳಾವು ?

(೩) ಆನೆಯ ಜಾತ್ರೆಯು ಸೋನಪುರದಲ್ಲಿಯೇ ಜರುಗಲು ಕಾರಣವೇನು ?

(೪) ಆನೆಯನ್ನುಳಿದು ಈ ಜಾತ್ರೆಗೆ ಬರುವ ಆಕರ್ಷಕ ವಸ್ತುಗಳಾವು ?

(೫) ಸಮಾಜೋದ್ಧಾರ ಕಾರ್ಯದಲ್ಲಿ ಜಾತ್ರೆಗಳ ನೆರವನ್ನು ಪಡೆಯುವ ರೀತಿ ಯಾವುದು ?

(೬) ಜಾತ್ರೆಗಳನ್ನು ಆಕರ್ಷಕವಾಗುವಂತೆ ಹೇಗೆ ಸಂಘಟಿಸಬೇಕು ?

(೭) ನಮ್ಮ ಜಾತ್ರೆಗಳಲ್ಲಿಯ ಕುಂದು ಕೊರತೆಗಳಾವವು ? ಅವುಗಳನ್ನು ಕಡಿಮೆ ಮಾಡುವ ಬಗೆ ಹೇಗೆ ?

**ಭಾಷಾಭ್ಯಾಸ :—**

(೧) ಎಲ್ಲಿ ಪಂಜಾಬ ! ಎಲ್ಲಿ ಅಸಾಮ ! ಈ ವಾಕ್ಯಗಳಲ್ಲಿ 'ಎಲ್ಲಿ' ಎಂಬ ಶಬ್ದದ ದ್ವಿರುಕ್ತಿಯ ಪರಿಣಾಮವನ್ನು ನಿರೀಕ್ಷಿಸಬೇಕು ?

(೨) ಚಳಿ, ಬಿಸಿಲು, ಮಳೆ — ಇವುಗಳ ಹೆಚ್ಚಳವನ್ನು ಸೂಚಿಸುವ ಕೆಲವು ವಿಶೇಷಣಗಳನ್ನು ಹೇಳಿರಿ.

(೩) ಭಾರತದಲ್ಲಿ ಜಾತ್ರೆಗಳು ವಿವಿಧೋದ್ದೇಶದ ಸಾಧನಗಳಾಗಿರುತ್ತವೆ.
ಈ ವಾಕ್ಯದಲ್ಲಿಯ ವಿಚಾರವನ್ನು ವಿಸ್ತರಿಸಿ ಬರೆಯಿರಿ.

**ಶಬ್ದವಿಚಾರ :—**

(೧) ಅವನತಿ, ಕೊಳ್ಳು, ಪವಿತ್ರ, ಆಸ್ಥೆ, ಅಂಧಶ್ರದ್ಧೆ — ಇವುಗಳ ಮಾರು ನುಡಿಗಳನ್ನು ಹೇಳಿರಿ.

(೨) ಜನರು ಕೂಡಿದ್ದಾರೆ, ನೆರೆದಿದ್ದಾರೆ, ಕಿಕ್ಕಿರಿದಿದ್ದಾರೆ — ಇವುಗಳಲ್ಲಿರುವ ಅರ್ಥವ್ಯತ್ಯಾಸವನ್ನು ಹೇಳಿರಿ.

(೩) ತೆರೆಗಣ್ಣು, ಗರ್ಭದಲ್ಲಡಗು, ದರ್ಶನೀಯ, ಕುದುರಿಸು — ಇವುಗಳ ಅರ್ಥವನ್ನು ಹೇಳಿರಿ.

ವಾಕ್ ಶಿಕ್ಷಣ :—

ಜನರಿಗೆ ಜಾತ್ರೆಯ ಮಹತ್ತ್ವವನ್ನು ತಿಳಿಹೇಳುವ ಒಂದು ಭಾಷಣಮಾಡಿರಿ.

ಚರ್ಚೆ :—

ಜಾತ್ರೆಗಳಿಂದ ನಮ್ಮ ಅಂಧಶ್ರದ್ಧೆಯು ಬೆಳೆಯುತ್ತದೆ.

ಬರೆಹ :—

ಸಂಗೀತ, ನಾಟಕ, ಬೈಲಾಟ — ಇವುಗಳ ವಿಕಾಸಕ್ಕೆ ಜಾತ್ರೆಗಳು ನೆರವಾಗುವ ಬಗೆಯನ್ನು ಕುರಿತುಬರೆಯಿರಿ.



# ೨೬. ಇಂಗ್ಲಂಡಿನ ಹಳ್ಳಿ

[ ಹಳ್ಳಿಗಳ ಸುಧಾರಣೆಯ ಕಾರ್ಯಕ್ಕೆ ನಮ್ಮಲ್ಲಿಯೂ ಪ್ರಾರಂಭವಾಗಿದೆ. ಈ ಸಮಯದಲ್ಲಿ ಇಂಗ್ಲಂಡಿನ ಹಳ್ಳಿಗಳ ಸ್ವಲ್ಪ ಪರಿಚಯವೂ ಉಪಯುಕ್ತವೆನಿಸದಿರಲಾರದು.]

ಸಪ್ಟಂಬರ ತಿಂಗಳ ಕೊನೆ. ಬಿಸಿಲುಗಾಲ ಕಳೆದು ಚಳಿಗಾಲ ಅದೇ ಇಣಿಕುತ್ತಿದೆ. ಒಂದು ಸಂಜೆ ಅಗ್ಗಿಷ್ಟಿಕೆಯ ಮುಂದೆ ಕುಳಿತಿದ್ದಾಗ ಎಷ್ಟೋ ವಿಚಾರಗಳು ಬಂದು ತನ್ನ ತಾನೇ ಮಾಯವಾಗುತ್ತಿದ್ದುವು. ಈ ಅಗ್ಗಿಷ್ಟಿಗೆ ಎದುರು ತಾಸುಗಳು ಹೇಗೆ ಕಳೆದವೋ ತಿಳಿಯುವುದಿಲ್ಲ. ಆಗ ಬಂದು ಸುಳಿದುಹೋದ ವಿಚಾರವೊಂದನ್ನು ಇಲ್ಲಿ ವಿಸ್ತರಿಸುತ್ತಿದ್ದೇನೆ.

ಇಂಗ್ಲಂಡ ಎಂದರೆ ಇದೆಯಾದರೂ ಎಲ್ಲಿ ಎಂಬುದೊಂದು ಪ್ರಶ್ನೆ. ಲಂಡನ್ನಿನ ಪಿಕೆಡಲಿ ಸರ್ಕಸ ಎಂದರೆ ಇಂಗ್ಲಂಡ ಅಲ್ಲ. ಇಲ್ಲವೆ ಸ್ಕಾಟಲಂಡ, ವೇಲ್ಸ, ಅಥವಾ ಉತ್ತರ ಅಯರ್ಲಂಡಗಳಂತೂ ನಿಶ್ಚಿತವಾಗಿಯೂ ಅಲ್ಲ. ಆದರೆ ಇಂಗ್ಲಂಡ ನೋಡಲು ಬಂದ ಪ್ರವಾಸಿಕನು, ಮತ್ತೆನ್ನೆಲ್ಲಿ ಹೋಗದಿದ್ದರೂ ಪಿಕೆಡಲಿಗೆ ಹೋಗಿಯೇ ಹೋಗುವನು. ಪಿಕೆಡಲಿ ಸರ್ಕಸ್ ಎಂದರೆ ಇಂಗ್ಲಂಡಿನ ಸಮಾಜದ ಒಂದು ಚಿತ್ರ. ಐವತ್ತು ವರ್ಷಗಳ ಕೆಳಗೆ ನೀವು ಅಲ್ಲಿದ್ದರೆ ಕುದುರೆ ಗಾಡಿಗಳನ್ನು ಸಿರಿವಂತ ಹೆಣ್ಣುಮಕ್ಕಳ ಟೊಪ್ಪಿಗೆಯಲ್ಲಿ ಸುಂದರವಾದ ಗರಿಗಳನ್ನು ಕಾಣಬಹುದಾಗಿದ್ದಿತು. ಅಲ್ಲಿದ್ದ ಜನರನ್ನು ನೀವು ಮೇಲ್ತರಗತಿಯವರು, ಕೆಳತರಗತಿಯವರು, ಆಸ್ತಿವಂತರು, ಬಡವರು, ಪಟ್ಟಣಿಗರು, ಹಳ್ಳಿಗರು ಎಂದು ಬಗೆಬಗೆಯಾಗಿ ವಿಂಗಡಿಸಬಹುದಾಗಿದ್ದಿತು. ಅವರವರ ಕೆಲಸಗಳಂತೆ ಉಡುಗೆ-ತೊಡಿಗೆ, ಅದಕ್ಕೆ ತಕ್ಕಂತೆ ಅವರಿಗೆ ಮಾನ ಮರ್ಯಾದೆ, ದೊರೆಯುತ್ತಿದ್ದಿತು. ಆದರೆ ಇಂದು ಆ ಚಿತ್ರ ಬದಲಾಗಿದೆ. ಇಂದು ಕಾಣುವ ಜನಗಳಲ್ಲಿ ಬರಿ ಮೂವರನ್ನು ಗುರುತಿಸಬಹುದು. ಅವರೆಂದರೆ ಪೋಲೀಸ ಗಣ, ವೇಷದಲ್ಲಿದ್ದ ಸೈನಿಕ ದಳದವರು, ಮತ್ತು ನಾಗರಿಕರು.

ಎಲ್ಲರೂ ರಾಷ್ಟ್ರಸೇವಕರು. ಅವರ ಸಾಮಾಜಿಕ ಮಟ್ಟ ಜೇಬಿನಲ್ಲಿಯ ಹಣದಂತೆ ಗುಪ್ತವಾಗಿರುವುದು. ಇಂದು ಪಿಕೆಡಲಿಯಲ್ಲಿ ಉಳ್ಳವರನ್ನು ಇಲ್ಲದವರಿಂದ, ಊರವರನ್ನು ಹಳ್ಳಿಯವರಿಂದ, ರಜೆಯ ದಿನವನ್ನು ಕೆಲಸದ ದಿನದಿಂದ, ಅದೇಕೆ, ಹುಡುಗರನ್ನು ಹುಡಿಗೆಯರಿಂದ ಬೇರ್ಪಡಿಸಿ ಹೇಳುವುದು ಕಷ್ಟವಾಗಿದೆ!

ಇಂಗ್ಲಂಡಿನ ಇತಿಹಾಸವನ್ನು ಓದಿದರೆ, ನೂರು ವರ್ಷಗಳ ಹಿಂದಿನ ಇಂಗ್ಲಂಡಿನ ಸಮಾಜ ನಮ್ಮಲ್ಲಿರುವಂತೆಯೇ ಇದ್ದಿತು. ದೊಡ್ಡ ದೊಡ್ಡ ಜಮೀನುದಾರರ ಕೈಯಲ್ಲಿ ರಾಜ್ಯಕಾರಭಾರ. ೧೮೮೦ ರ ವರೆಗೆ ಹಳ್ಳಿಗನಿಗೆ ಮತದಾನದ ಹಕ್ಕಿರಲಿಲ್ಲ. ೧೯೨೦ ರ ವರೆಗೆ ಹೆಣ್ಣುಮಕ್ಕಳಿಗೆ ಮತ ಕೊಡುವಂತಿರಲಿಲ್ಲ. ಆದರೆ ಈಗ ಅದೆಲ್ಲವೂ ಪ್ರಯತ್ನದಿಂದ, ವಿಚಾರದಿಂದ ಬದಲಾಗಿರುವುದು.

ಇಂಗ್ಲಂಡಿನ ಪಟ್ಟಣ ಮತ್ತು ಕಾರಖಾನೆಗಳ ಕೇಂದ್ರಗಳಿಗಿಂತ ಇಲ್ಲಿಯ ಹಳ್ಳಿಗಳು ನಿಜವಾಗಿಯೂ ಅಂದವಾಗಿರುವವು. ಪ್ರತಿಯೊಂದು ಹಳ್ಳಿಯ ಸೌಂದರ್ಯವನ್ನು ಅಲ್ಲಿ ಹೋಗಿಯೇ ನೋಡಿ ನಲಿಯಬೇಕು. ಅಲ್ಲಿ ಕಾಣುವ ಸ್ವಚ್ಛತೆ, ಮನೆಗಳಲ್ಲಿಯ ಚೊಕ್ಕಟ, ಅವರಿಗೆ ಸಿಕ್ಕುವ ಅನುಕೂಲತೆಗಳಿಂದ ಹಳ್ಳಿಯ ಜೀವನ



ಮಿಲ್ಟನ್ ಅಬ್ಬಾಸ್ ಎಂಬ ಹಳ್ಳಿಯ ದೃಶ್ಯ.

ಸುಖಕರವಾಗಿರುವುದು. ಏಳೆಂಟು ನೂರು ಜನರಿರುವ ಚಿಕ್ಕ ಹಳ್ಳಿಗಳಲ್ಲಿಯೂ ವಿದ್ಯುತ್ ಪೂರೈಕೆ, ಸಾಕಷ್ಟು ನೀರಿನ ಸೌಕರ್ಯಗಳು ದೊರೆಯುವುದರಿಂದ ದಿನದ ಕೆಲಸ ಹಗುರಾಗಿದೆ. ಹಳ್ಳಿಗಳಲ್ಲಿ ಹುಲ್ಲಿನ ಮನೆಯಿದ್ದರೂ ಸಾಕಷ್ಟು ಹಂಚಿನ ಮನೆಗಳೂ ಕಾಣುವವು. ಅಲ್ಲಿ ಬರಿ ಒಕ್ಕಲತನವೇ ಎಂದೂ ಮುಖ್ಯ ಬೇಸಾಯವಾಗಿರಲಿಲ್ಲ. ನೇಕಾರಿಕೆ, ಕಮ್ಮಾರಿಕೆ, ಚಿನಿವಾಲಿಕೆ ಪ್ರತಿ ಹಳ್ಳಿಯಲ್ಲಿಯೂ

ಇದ್ದುವು. ಆದರೆ ಇಂದು ದೊಡ್ಡ ಗಿರಣಿಗಳಿಗೆ ಹೋಗಿದೆ ಈ ಕೆಲಸ. ಶಾಸ್ತ್ರವು ನಮ್ಮ ಬದುಕನ್ನೇ ಬದಲಾಯಿಸಿದೆ. ಭೌತಿಕ ಪರಿಸ್ಥಿತಿಯಲ್ಲಾದ ಮಾರ್ಪಾಡಿನ ಮೂಲಕ ನಮ್ಮ ಕೆಲಸ ಮತ್ತು ವಿಶ್ರಾಂತಿ, ನಮ್ಮ ಶಕ್ತಿ ಸಾಮರ್ಥ್ಯಗಳ ಕಲ್ಪನೆ



ಮಾರಿಸ್ ಕುಣಿತ ಎಂಬ (ಹಳ್ಳಿಯ) ನೃತ್ಯದಲ್ಲಿ ಸ್ಪರ್ಧಿಸಲು ಎಲ್ಲ ದೇಶದ ಜನರು ಬರುವರು

ಇಂದು ಬೇರೆಯಾಗಿದೆ. ಅದರಿಂದಲೇ ಇಂದಿನದನ್ನು ಕೆಲಸಾರೆ ಶಾಸ್ತ್ರೀಯ ಯುಗ ವೆಂದು ಕರೆಯುವರು. ಶಾಸ್ತ್ರೀಯ ಶೋಧಗಳ ಉಪಯೋಗ ಮಾಡದಿರುವ ಉದ್ಯಮವೇ ಇಂದು ಕಾಣುವದಿಲ್ಲ. ಇಂದಿನ ಒಕ್ಕಲತನ ಪೆಟ್ರೋಲ ಯಂತ್ರಗಳ ಸಹಾಯದಿಂದ ಸಂಪೂರ್ಣವಾಗಿ ಬದಲಾಗಿರುವದು. ಟ್ರಾಕ್ಟರುಗಳು, ಜೋಡೆತ್ತಿಗಿಂತ ಎಷ್ಟೋ ಪಾಲು ಕೆಲಸವನ್ನು ಬೇಗ ಮತ್ತು ಅನಾಯಾಸವಾಗಿ ಮಾಡಿಕೊಡುವವು. ಅದರಿಂದ ಇಂದಿನ ಒಕ್ಕಲಿಗನಿಗೆ ಯಂತ್ರ ಸಾಮಗ್ರಿಗಳ ಪರಿಚಯ ಚೆನ್ನಾಗಿರುವುದು ಅವಶ್ಯವಾಗಿದೆ.

ಕಳೆದ ಶತಮಾನದಲ್ಲಿ ಲೀಟಿಗನೆಂಬ ಜರ್ಮನ್ ಶಾಸ್ತ್ರಜ್ಞನು ರಸಾಯನ ಶಾಸ್ತ್ರ ಮತ್ತು ಒಕ್ಕಲತನಗಳಲ್ಲಿರುವ ಸಂಬಂಧವನ್ನು ತೋರಿಸಿಕೊಟ್ಟನು. ಒಕ್ಕಲಿಗನಿಗೆ ಬೀಜ ಮೊಳೆಯುವುದರ ಕಾರಣವೇನು, ಅದಕ್ಕೆ ಯಾವ ಬಗೆಯ ಗೊಬ್ಬರಗಳ ಅವಶ್ಯಕತೆಯಿದೆ, ಭೂಮಿಗೆ ಪ್ರತಿವರ್ಷ ಏಕೆ ವಿಶ್ರಾಂತಿ ಕೊಡಬೇಕಾಗುವದು ಇವೇ ಮುಂತಾದವುಗಳ ಜ್ಞಾನವಿರಲಿಲ್ಲ. ಕೆಲವೊಂದು ವಿಶಿಷ್ಟ ಕಾಲದಲ್ಲಿ ಬೆಳೆ ಬರುವುದೆಂದಿಷ್ಟೇ ಅವನಿಗೆ ಗೊತ್ತು. ಒಂದು ಸಲ ಹದಿನಾಲ್ಕಾಣೆ ಬೆಳೆ ಬಂದರೆ

ಮತ್ತೊಂದು ಸಲ ಎರಡೇ ಆಣೆ ! ಬೇಕಾದಷ್ಟು ಭೂಮಿ ಸಾಗುವಳಿಗೆ ಇರುವವರೆಗೆ ಯಾವ ಯೋಚನೆಯೂ ಇರಲಿಲ್ಲ. ಆದರೆ ೧೯ನೆಯ ಶತಮಾನದ ರಸಾಯನ ಶಾಸ್ತ್ರಜ್ಞನು ಒಳ್ಳೆಯ ಬೆಳೆ ಬರುವುದಕ್ಕೆ ಸಸ್ಯಗಳಿಗೆ ಅವುಗಳ ಆಹಾರದಲ್ಲಿ ಪೊಟಿಕ್ ಫಾಸ್ಫೇಟ್ ಮತ್ತು ನೈಟ್ರೇಟ್‌ಗಳ ಅವಶ್ಯಕತೆಯಿದೆಯೆಂದು ತೋರಿಸಿಕೊಟ್ಟನು. ಬೇರುಗಳಲ್ಲಿ ಬರುವ ಬೆಳೆಗಳಿಗೆ (ಉದಾಃ ಗೆಣಸು, ಬಟಾಟೆ) ಪೊಟಿಕ್, ಹಣ್ಣು ಹಂಪಲುಗಳಿಗೆ ಫಾಸ್ಫೇಟ್ ಮತ್ತು ಕಾಯಿಪಲ್ಲೆಗಳಿಗೆ ನೈಟ್ರೇಟ್ ಗೊಬ್ಬರಗಳ ಅವಶ್ಯಕತೆಯಿದೆ. ಯುದ್ಧಪೂರ್ವದಲ್ಲಿ ಇಂಗ್ಲಂಡಿನ ಆಹಾರ ಪೂರೈಕೆ ೧/೩ ದಷ್ಟು ಮಾತ್ರವಾಗಿದ್ದಿತು. ಆದರೆ ೧೯೪೫ ರ ತರುವಾಯ ಸಾಧ್ಯವಾದ ಭೂಮಿಯನ್ನೆಲ್ಲ



ಕೃಷಿವಿದ್ಯಾಲಯದಲ್ಲಿ ನಡೆದ ಕೆಲಸ

ಸಾಗುಮಾಡಿ, ಬೆಳೆಯತೊಡಗಿದುದರಿಂದ ಇಂಗ್ಲಂಡಿನಲ್ಲಿ ಇಂದು ೨/೩ ದಷ್ಟು ಆಹಾರ ದೊರೆಯುತ್ತಿದೆ. ಇದರ ಶ್ರೇಯಸ್ಸು ಒಕ್ಕಲುತನದಲ್ಲಿ ಯಂತ್ರಸಾಮಗ್ರಿಗಳ ಉಪಯೋಗ, ಬೆಳೆಗಳಿಗೆ ಬೇಕಾಗುವ ಸರಿಯಾದ ಕೃತ್ರಿಮ ಗೊಬ್ಬರಗಳ ಪೂರೈಕೆ, ಪೈರನ್ನು ಕ್ರಿಮಿ ಕೀಟಕಗಳಿಂದ ಕಾಪಾಡುವುದಕ್ಕೆ ಬೇಕಾಗುವ ಕೀಟನಾಶಕಗಳ ಉಪಯೋಗ ಇಂತಿವೆಲ್ಲವು ರೈತನಿಗೆ ಸರಕಾರವು ಒದಗಿಸಿದ ಸೌಕರ್ಯವೇ ಆಗಿದೆ. ಇಂಗ್ಲಂಡಿನ ರೋಥಾಮಸ್ಟೆಡ್ ಪ್ರಯೋಗಶಾಲೆಯು ಒಕ್ಕಲತನಕ್ಕೆ ಉಪಯುಕ್ತವಾದ ಸಂಶೋಧನಕ್ಕಾಗಿ ಸುಪ್ರಸಿದ್ಧವಾಗಿದೆ. ಸಂಶೋಧನದ ಲಾಭ ಪಡೆದು ಅಲ್ಲಿಯ ಹೊಲದಲ್ಲಿ ೧೮೪೩ರಿಂದ ಇಂದಿನ ವರೆಗೆ ಪ್ರತಿವರುಷ ತಪ್ಪದೆ ಗೋದಿಯನ್ನು ಬೆಳೆಸಿದ್ದಾರೆ. ಇದು ಸರ್ವಸಾಮಾನ್ಯ ಒಕ್ಕಲಿಗನ ಅನುಭವಕ್ಕೆ ವಿರುದ್ಧವಾಗಿದೆ.

ಇಂಗ್ಲಂಡಿನಲ್ಲಿ ಎಲ್ಲ ಚಿಕ್ಕ ದೊಡ್ಡ ಹಳ್ಳಿಗಳನ್ನು ಜೋಡಿಸುವ ಒಳ್ಳೆಯ ದಾರಿಗಳಿವೆ. ಇಂತಹ ದಾರಿಯುದ್ದಕ್ಕೂ ಪ್ರವಾಸ ಮಾಡುವುದು ಬಹಳೇ ಸುಖಕರವೆನಿಸುವುದು. ಈ ಮಾರ್ಗಗಳು ತನ್ನ ತಾನೇ ಆಗಿಲ್ಲ. ಹೊಸ ಮಾರ್ಗಗಳನ್ನು ಹಾಕುವುದು, ಅದನ್ನು ಉತ್ತಮ ಸ್ಥಿತಿಯಲ್ಲಿರಿಸುವುದರ ದೊಡ್ಡ ಭಾರವು ಸರಕಾರದ ಮೇಲಿರುವುದು. ಯುದ್ಧಪೂರ್ವದಲ್ಲಿದ್ದ ಕುದುರೆಯ ಬಂಡಿ ಹೋಗಿ ಹಳ್ಳಿಗನ ಹತ್ತಿರ ಈಗ ಮೋಟರಿರುವದು. ಅದರಿಂದ ಅವನು ವೇಳೆ ದೊರೆತೊಡನೆ ಸಮೀಪದ ಪಟ್ಟಣಕ್ಕೆ ಸಿನೇಮಾ ನಾಟಕಗಳನ್ನು ನೋಡುವುದಕ್ಕೆಂದು, ವಿಶೇಷ ವ್ಯಾಪಾರಕ್ಕೆಂದು ಬರುವನು. ಮೋಟರಿಲ್ಲದವರು ಸುಲಭವಾಗಿ ಉಗಿಬಂಡಿಯಿಂದಲೂ ಪ್ರವಾಸ ಮಾಡಬಹುದು. ಹಳ್ಳಿಯಲ್ಲಿ ವಿಧವಿಧವಾದ ಸಂಘಗಳಿರುವವು. ಬಿಸಿಲುಗಾಲದಲ್ಲಿ ಕ್ರಿಕೆಟ್, ಚಳಿಗಾಲದಲ್ಲಿ ಫುಟಬಾಲ್ ಆಟಗಳನ್ನು ವಿಶೇಷ ಆಸಕ್ತಿಯಿಂದ ಆಡುವರು.

ಇಲ್ಲಿಯ ಹಳ್ಳಿಗರು ನೂರು ವರ್ಷಗಳ ಪೂರ್ವದಲ್ಲಿ ನಮ್ಮಲ್ಲಿಯಂತೆಯೇ ಅಶಿಕ್ಷಿತರಾಗಿದ್ದರು. ಶಿಕ್ಷಣ ಪ್ರಸಾರಕ್ಕಾಗಿ ಹೊಸ ಸಾಲೆಗಳನ್ನು ತೆರೆದಾಗ ಬಾಗಿಲ ಮೇಲೆ ಬರೆದರು. "ಪುಕ್ಕಟೆ ಶಿಕ್ಷಣ ಪಡೆಯಬಯಸುವವರು ತಮ್ಮ ಮಕ್ಕಳನ್ನು ಈ ಶಾಲೆಗೆ ಕಳುಹಿಸಬೇಕು. ಕಾಸನ್ನೂ ಕೊಡದೆ ಶಿಕ್ಷಣ ಬೇಡಾದವರು ನಮಗೆ ಹಣ ಸಹಾಯ ಕೊಡಬಹುದು." ಆದರೆ ಇಂದು ಪ್ರತಿಯೊಬ್ಬನೂ ಸಾಲೆಗೆ ಹೋಗಲೇಬೇಕೆಂಬ ಒತ್ತಾಯವಿರುವದು. ಆ ಹಳ್ಳಿಯ ಸಮೀಪದಲ್ಲಿದ್ದ ಕೌಂಟಿ ಕೌನ್ಸಿಲಿನ ಅಧಿಕಾರದಲ್ಲಿ ಈ ಸಾಲೆಗಳ ವ್ಯವಸ್ಥೆ ಇರುವದು. ಇಲ್ಲಿ ಬಡತನ ಶಿಕ್ಷಣಕ್ಕೆ ಅಡ್ಡಿ ತರುವುದಿಲ್ಲ. ಇಂದು ಕೌಂಟಿಯ ವಿದ್ಯಾರ್ಥಿವೇತನ ದೊರೆತರೆ ವಿಶ್ವವಿದ್ಯಾಲಯದ ವರೆಗಿನ ಶಿಕ್ಷಣಕ್ಕೂ ಅನುಕೂಲತೆಯಿರುವದು. ಒಕ್ಕಲತನದ ಶಿಕ್ಷಣ ಪಡೆದವರು ತಿರುಗಿ ಹೊಲಗಳಲ್ಲಿ ಕೆಲಸ ಮಾಡಬೇಕೆಂದು ಸರಕಾರವು ಸದಾ ಬಯಸುವದು. ಪಟ್ಟಣಗಳಲ್ಲಿ ಶಿಕ್ಷಣ ಪಡೆದೊಡನೆ ತಿರುಗಿ ಹಳ್ಳಿಗಳಲ್ಲಿ ಹೋಗಿ ವಾಸವಾಗುವುದಕ್ಕೆ ಮನಸ್ಸಾಗುವುದಿಲ್ಲೆಂಬದರ ಅನುಭವ ಇಲ್ಲಿಯೂ ಇದೆ. ಆದರೂ ಸುಶಿಕ್ಷಿತರಾದ ತರುಣರಿಂದಲೇ ಅವರ ಈ ಹೊಲಗಳು, ಹಳ್ಳಿಗಳು ಊರ್ಜಿತವಾಗಿವೆ. ಅದಲ್ಲದೆ ಜರ್ಮನಿ ಅಮೇರಿಕೆಗಳೊಡನೆ ವ್ಯಾಪಾರದ ಸ್ಪರ್ಧೆಯಲ್ಲಿ ನಿಲ್ಲಬೇಕಾದರೆ ವಿಶಿಷ್ಟ ಶಾಸ್ತ್ರೀಯ ಶಿಕ್ಷಣದ ಅವಶ್ಯಕತೆಯಿರುವದೆಂಬುದನ್ನು ಆಂಗ್ಲರು ಮರೆತಿಲ್ಲ.

ಪ್ರತಿಯೊಂದು ಜಿಲ್ಹೆಗೊಂದು ಶಾಯರ ಅಥವಾ ಕೌಂಟಿ ಕೌನ್ಸಿಲ ಇರುವುದು. ಚಿಕ್ಕಪುಟ್ಟ ಹಳ್ಳಿಗಳಲ್ಲಿಯ ಕೌನ್ಸಿಲುಗಳಿಂದ ಆರಿಸಿಬಂದ ಕೆಲ ಪ್ರತಿನಿಧಿಗಳು ಇವನ್ನು ನಡಸುವರು. ಹಳ್ಳಿಗಳಲ್ಲಿಯ ಪ್ರಾಥಮಿಕ ಶಿಕ್ಷಣ, ಮಾಧ್ಯಮಿಕ ಶಿಕ್ಷಣ, ಪ್ರೌಢ ಶಿಕ್ಷಣಗಳನ್ನು ಇವರು ನೋಡಿಕೊಳ್ಳುವರು. ಹಳ್ಳಿಯ ಸುಧಾರಣೆ, ವಾಚನಾಲಯ, ಹೆದ್ದಾರಿ, ಪೋಲೀಸಿನ ವ್ಯವಸ್ಥೆ, ಆರೋಗ್ಯ, ಅಗ್ನಿ

ನಾಶಕ ಯಂತ್ರಗಳ ವ್ಯವಸ್ಥೆಯನ್ನು ಇವರೇ ಮಾಡಿಕೊಳ್ಳುತ್ತಾರೆ. ಕಳೆದ ಸಮಾಜ ವಾದಿ ಸರಕಾರದಿಂದ ಸ್ಥಾಪಿತವಾದ ಆರೋಗ್ಯದ ಸುಧಾರಣೆ ಶ್ಲಾಘನೀಯವಾಗಿದೆ. ದೇಶದಲ್ಲಿಯ ಪ್ರತಿಯೊಬ್ಬ ನಾಗರಿಕನು ಸ್ವಲ್ಪ ವೆಚ್ಚದಲ್ಲಿ ವೈದ್ಯರ ಸಲಹೆ ಮತ್ತು ಔಷಧಗಳನ್ನು ಪಡೆಯಬಹುದಾಗಿದೆ. ಇವೆಲ್ಲ ಸೌಕರ್ಯಗಳಿಂದ ಜೀವನದಲ್ಲಿ ನಮ್ಮ ದೇಶದಲ್ಲಿ ಕಾಣುವ ನಿರಾಶೆಯು ಈ ದೇಶದಲ್ಲಿ ಅನುಭವಕ್ಕೆ ಬರುವುದಿಲ್ಲ. ಸುಮಾರು ಮೂರು, ನಾಲ್ಕು ನೂರು ವಸತಿಯುಳ್ಳ ಹಳ್ಳಿಯಲ್ಲಿ ಕೌನ್ಸಿಲೊಂದನ್ನು ಸ್ಥಾಪಿಸಬಹುದು. ಇಲ್ಲಿ ಆರಿಸಿ ಬಂದ ಎಂಟು ಹತ್ತು ಸದಸ್ಯರ ಸಾರ್ವಜನಿಕ ಸೇವೆಯ ಆಸ್ಥೆ ಮತ್ತು ಪ್ರಾಮಾಣಿಕತನದ ಮೇಲೆಯೆ ಆ ಹಳ್ಳಿಯ ಪ್ರಗತಿ ಅವ ಲಂಬಿಸಿರುವುದು. ಹಳ್ಳಿಯ ಆಟದ ಬೈಲು, ಉದ್ಯಾನಗಳನ್ನು ಪ್ರಾರಂಭಿಸಲು ಅಲ್ಲಿದ್ದ ಉದಾರ ಆಶ್ರಯದ ಒಬ್ಬಿಬ್ಬ ನಾಗರಿಕರನ್ನೇ ಅವಲಂಬಿಸಬೇಕಾಗುವುದು. ಅಂಚೆಯ ಆಫೀಸು, ಹೊಸದಾರಿಗಳ ಯೋಜನೆ, ಹೊಸ ಕಟ್ಟಡಗಳ ಅನುಕೂಲತೆ ಮುಂತಾದ ನೂರಾರು ಕೆಲಸಗಳಿಗಾಗಿ ಕೌಂಟಿ ಕೌನ್ಸಿಲಿನ ಸಹಾಯ ಬೇಗ ದೊರೆಯುವಂತೆ ಇಲ್ಲಿಯ ಸದಸ್ಯರು ಪ್ರಯತ್ನಪಡುವರು.

ಇಲ್ಲಿಯ ಪ್ರತಿಯೊಬ್ಬ ನಾಗರಿಕನು ೧೫ ವರುಷಗಳಾಗುವ ವರೆಗೆ ಶಿಕ್ಷಣ ಪಡೆಯುವ ಒತ್ತಾಯವಿರುವುದು. ಈ ಶಿಕ್ಷಣವು ಪುಕ್ಕಟೆ ದೊರೆಯುವುದು. ಈ ವರೆಗಿನ ಶಿಕ್ಷಣದಲ್ಲಿ ಒಳ್ಳೆಯ ಪ್ರಗತಿ ಕಂಡು ಬಂದದ್ದಾದರೆ ಅಲ್ಲಿಯ ಕೌಂಟಿಯಿಂದಾ ಗಲಿ ಕೇಂದ್ರ ಸರಕಾರದಿಂದಾಗಲಿ ಹೆಚ್ಚಿನ ವಿದ್ಯಾಭ್ಯಾಸಕ್ಕೂ ಅನುಕೂಲತೆ ದೊರೆ ಯುವುದು. ೧೮ರಿಂದ ೨೬ ವರುಷಗಳು ಮುಗಿಯುವ ಮೊದಲು ಎರಡು ವರುಷ ಗಳ ವರೆಗೆ ಪ್ರತಿ ಆಂಗ್ಲ ನಾಗರಿಕನೂ ಸರಕಾರದ ಸೈನ್ಯ ಪಡೆಯಲ್ಲಿ ಶಿಕ್ಷಣಕ್ಕಾಗಿ ಹೋಗಲೇಬೇಕಾಗುವುದು.

ಇತ್ತೀಚೆಗೆ ನಮ್ಮಲ್ಲಿಯ ತರುಣ ಪೀಳಿಗೆ ತೋರುವಷ್ಟು ಧಾರ್ಮಿಕ ಅಶ್ರದ್ಧೆ ಇಂಗ್ಲಂಡಿನಲ್ಲಿ ಕಂಡುಬರುವುದಿಲ್ಲ. ಯುದ್ಧಪೂರ್ವದಲ್ಲಿದ್ದ ಚರ್ಚಿನಲ್ಲಿಯ ಅನಾಸ್ಥೆ ಇತ್ತೀಚೆಗೆ ಕಡಿಮೆಯಾಗುತ್ತಿದೆ. ಯಾಂತ್ರಿಕ ಯುಗದಿಂದಲೇ ನಮ್ಮ ಸರ್ವತೋಮುಖ ಏಳ್ಗೆಯಾಗುವದೆಂದು ಇಪ್ಪತ್ತು ವರುಷಗಳ ಹಿಂದಿನ ಉತ್ಸಾಹ, ಶ್ರದ್ಧೆ ಒಟ್ಟಿನಲ್ಲಿ ಇಂದು ಕಡಿಮೆಯಾಗಿದೆ. ಆದರೆ೧೯ನೆಯ ಶತಮಾನದಲ್ಲಿ ಪಾದ್ರಿಗೂ ಚರ್ಚಿಗೂ ಇದ್ದ ಮಹತ್ತ್ವವು ಇನ್ನು ಎಂದಾದರೂ ಬಂದೀತೆಂದು ನಂಬುವುದು ಕಠಿಣವಾಗಿದೆ. ಏಕೆಂದರೆ ಹಳ್ಳಿಯ ಶಿಕ್ಷಣ, ಆರೋಗ್ಯ, ನ್ಯಾಯ ಮುಂತಾದ ಬಗೆಯ ಸಾಮಾಜಿಕ ಹೊಣೆ ಇಂದು ಚರ್ಚಿನ ಮೇಲೆ ಅವಲಂಬಿಸಿಲ್ಲ. ಪ್ರತಿಯೊ ಬ್ಬರ ವಿಮರ್ಶಾಶಕ್ತಿ ಬೆಳೆದಿರುವುದರಿಂದ ಮತಗಳ ಸರ್ವಾಧಿಕಾರಿತ್ವಕ್ಕೆ ಯಾವ ಸ್ವತಂತ್ರ ವಿಚಾರಿಯೂ ತಲೆಬಾಗಿ ಶರಣುಹೋಗಲಾರನು.

ಯಾವ ಹಳ್ಳಿಯ ಚಿತ್ರವೂ ವಿಶ್ರಾಂತಿ ಗೃಹ ಇಲ್ಲದೆ ಪೂರ್ಣವಾಗಲಾರದು. ಇನ್ ಎಂದು ಇದಕ್ಕೆ ಹೆಸರು. ಒಬ್ಬ ಸಾಮಾನ್ಯ ಆಂಗ್ಲನಿಂದ ಅವನ ತಿಂಡಿ-



ಮಹಿಳಾ ಮಂಡಳದ ಪ್ರದರ್ಶನದ ದೃಶ್ಯ

ಹಳ್ಳಿಯ ವಿಶ್ರಾಂತಿ ಗೃಹ. (ಇನ್)

ಈ ಮಂಡಳದ ಸದಸ್ಯರಿಗೆ ಜ್ಞಾನ ಮಾಡಿ ಕೊಡುವ ಅನುಕೂಲತೆ ಇರುತ್ತದೆ. ತಿಂಗಳಿಗೆ ಒಂದು ಬಾರಿಯಾದರೂ ಎಲ್ಲ ಸದಸ್ಯರು ಒಂದೆಡೆಗೆ ಸೇರುವರು. ಪಾಕಶಾಸ್ತ್ರ ಹೊಲಿಗೆ, ಕೈಗೆ-ಲಸ ಮೊದಲಾದ ವಿಷಯಗಳ ಜ್ಞಾನವನ್ನು ಕಲಿಸುವರು. ಇಲ್ಲಿ ಕಲಿತ ಮೇರೆಗೆ ಸಿದ್ಧಪಡಿಸಿದ ಮತ್ತು ತಮ್ಮ ಹಿತ್ತಲಲ್ಲಿ ಬೆಳೆದ ಹಲವು ವಸ್ತುಗಳ ಪ್ರದರ್ಶನವನ್ನು ನೆರವೇರಿಸುವರು.

ತೀರ್ಥ, ಬೀಡಿ, ಮತ್ತು ಕೊನೆಯದಾಗಿ 'ಫುಟಬಾಲ ಪೋಲನ್ನು' ಕಸಿದುಕೊಂಡರೆ ಬಹಳೇ ಕಷ್ಟದ ಕಾಲ ಬಂದೀತು ಎಂದು ನಗೆಯಾಗಿ ಆ ಜನ ಹೇಳುವರು.

ಹಳ್ಳಿಯ ವಿಶ್ರಾಂತಿ ಗೃಹಗಳು ಸಾಮಾಜಿಕ ಕ್ಲಬ್ಬುಗಳಂತಿವೆ. ಸರ್ವಸಾಮಾನ್ಯವಾಗಿ ಆಂಗ್ಲರು ಮಾತಾಳಿಗಳಲ್ಲವೆಂದು ಅವರ ಖ್ಯಾತಿಯಿದ್ದರೂ ಈ ಕೂಟಗಳಲ್ಲಿ ಅವರ ನಾಲಗೆಯ ಹರಿತ, ನಲಿದಾಟ ನೋಡಬೇಕು. ಆದರೂ ಫ್ರೆಂಚ ಜನರ ಸಂಭಾಷಣೆಯಲ್ಲಿ ತೋರುವ ವಿಚಾರ ಭಾವನೆಗಳ ಆವೇಶ, ಓಘವು ಇಲ್ಲಿ ಕಾಣುವುದಿಲ್ಲವೆಂಬದು ಮಾತ್ರ ನಿಜ. ಈ ವಿಶ್ರಾಂತಿ ಮಂದಿರವೇ ಅವರ ಸಭಾರಂಗ; ಪಾರ್ಲಿಮೆಂಟು; ಕ್ರೀಡಾರಂಗ ಎಲ್ಲ ಇಲ್ಲಿಯೇ !

ಇಂಗ್ಲಂಡಿನ ರಾಜಕೀಯ ಪಕ್ಷ ಪಂಗಡಗಳಲ್ಲಿ ಎಷ್ಟೇ ಮತಭೇದಗಳಿದ್ದರೂ ಏನೇ ವಿರೋಧವಿದ್ದರೂ ಅವರ ಅರಸು ಮನೆತನ ಎಲ್ಲರನ್ನೂ ಹೊಂದಿಸುವುದಕ್ಕೆ ಅತ್ಯಂತ ಉಪಯುಕ್ತವಾಗಿದೆ. ಇಂಗ್ಲಂಡಿನಲ್ಲಿ ಇನ್ನೂ ಉಳಿದುಕೊಂಡಿರುವ ಅರಸು ಮನೆತನವು ಬ್ರಿಟಿಶರ ನಿನ್ನೆ ಮತ್ತು ಇಂದನ್ನು, ಹಳೆ ಮತ್ತು ಹೊಸತನ್ನು ಹಿತವಾಗಿ ಮಿತವಾಗಿ ಮಿಶ್ರಣ ಮಾಡಿಕೊಳ್ಳುವ ಅವರದೇ ಆದ ಬಾಳನ್ನು ಹದಗೊಳಿಸಿಕೊಂಬ ಜಾಣತನದ ಸಾಕ್ಷಿಯಾಗಿದೆ.

-ಬಲ್ಲಾಳ ಜೋಶಿ.

## ಅಭ್ಯಸನಗಳು

ಪ್ರಶ್ನೆಗಳು :—

(೧) ಇಂಗ್ಲಂಡಿನ ಮತ್ತು ನಮ್ಮ ದೇಶದ ಒಕ್ಕಲತನದಲ್ಲಿ ವ್ಯತ್ಯಾಸವೇನು ?

(೨) ನಮ್ಮ ರೈತನು ಇಂಗ್ಲೀಷ ರೈತನಂತೆ ಆಗಬೇಕಾಗಿದ್ದರೆ ಆತನಲ್ಲಿ ಆಗಬೇಕಾಗುವ ಬದಲಾವಣೆಗಳು ಯಾವವು ?

(೩) ಇಂಗ್ಲಂಡಿನ ಹಳ್ಳಿಗಳಲ್ಲಿ ಮತ್ತು ನಮ್ಮ ಹಳ್ಳಿಗಳಲ್ಲಿರುವ ಭೇದವೇನು ?

ಭಾಷಾಭ್ಯಾಸ :—

ಕೆಳಗೆ ಕೊಟ್ಟ ವಾಕ್ಯಗಳನ್ನು ಸ್ಪಷ್ಟೀಕರಿಸಿರಿ.

(೧) ಅವರವರ ಸಾಮಾಜಿಕ ಮಟ್ಟ ಜೇಬಿನಲ್ಲಿಯ ಹಣದಂತೆ ಗುಪ್ತವಾಗಿರುವದು.

(೨) ಆಧುನಿಕ ಶಾಸ್ತ್ರವು ನವ ಬದುಕನ್ನೇ ಬದಲಾಯಿಸಿದೆ.

(೩) ಹೊಸತು ಮತ್ತು ಹಳತನ್ನು ಹಿತವಾಗಿ ಮಿತವಾಗಿ ಮಿಶ್ರಣಮಾಡಿಕೊಳ್ಳುವ, ಬಾಳನ್ನು ಹದಗೊಳಿಸಿಕೊಳ್ಳುವ ಜಾಣತನವು ಇವರಲ್ಲಿ ಕಂಡುಬರುತ್ತದೆ.

ಶಬ್ದವಿಚಾರ :—

(೧) ಹೊಸ + ಅಡಿಕೆ; ಒಳ + ಒಕ್ಕಲು; ಆದರಿಂದ + ಏ; ಕಾಡು + ಕಿಚ್ಚು; ಇನಿದು + ಮಾವು — ಇವುಗಳನ್ನು ಸಂಧಿ ಮಾಡಿ ಬರೆಯಿರಿ.

(೨) ನಾಗರಿಕ — ಇದರಂತೆ, ಇಕ ಪ್ರತ್ಯಯವನ್ನು ಹಚ್ಚಿ ಐದು ಶಬ್ದಗಳನ್ನು

ವಾಕ್ ಶಿಕ್ಷಣ:—

ವೇಷ ಮತ್ತು ಅಭಿನಯದಿಂದ ಐವತ್ತು ವರುಷಗಳ ಹಿಂದಿನ ಮತ್ತು ಇಂದಿನ ವೇಷ ಮತ್ತು ರೀತಿಗಳಲ್ಲಿಯ ವ್ಯತ್ಯಾಸವನ್ನು ಅಭಿನಯಿಸಿರಿ.

ಚರ್ಚೆ—

(೧) ಇಂಗ್ಲಂಡದಂತೆ ಇಲ್ಲಿಯೂ ಸೈನಿಕ ಶಿಕ್ಷಣ, ಶಸ್ತ್ರಾಯುಧ ಶಿಕ್ಷಣವಾಗಬೇಕೆ ?

(೨) ಕೃತ್ರಿಮ ಗೊಬ್ಬರ ಮತ್ತು ಯಂತ್ರಗಳನ್ನು ಒಕ್ಕಲತನದಲ್ಲಿ ಉಪಯೋಗಿಸುವದು ಯುಕ್ತವೇ ?

ಬರೆಹ:—

ಹಿಂದುಸ್ತಾನದಲ್ಲಿ ಜಾಗತಿಕ ರಂಗದಲ್ಲಿ ಸಮಾನ ಸ್ಥಾನವನ್ನು ಕಾಯ್ದುಕೊಳ್ಳಬೇಕಾದರೆ ಆಧುನಿಕ ಯಂತ್ರೋಪಕರಣಗಳನ್ನು ಉಪಯೋಗಿಸುವ ಅವಶ್ಯಕತೆಯನ್ನು ಬರೆಯಿರಿ.

# ೨೭ ಭಾಷಾಶೈಲಿ

[ ಶೈಲಿಯಲ್ಲಿ ಇರಬೇಕಾದ ಅವಶ್ಯಕ ಗುಣಗಳನ್ನು ಇಲ್ಲಿ ಸೂಚಿಸಲಾಗಿದೆ. ಭಾಷಾ ಶೈಲಿಯ ವಿವಿಧ ಮಾದರಿಯ ಉದಾಹರಣೆಗಳು ಈ ಪುಸ್ತಕದ ಪಾಠಗಳಲ್ಲಿ ಅಲ್ಲಲ್ಲಿ ಬೇಕಾದಷ್ಟು ಬಂದಿವೆ. ಶೈಲಿಯ ಪ್ರಕಾರಗಳನ್ನು ವಿವರಿಸಲು ಪಾಠಗಳಲ್ಲಿ ಬಂದ ಆ ಭಾಗಗಳನ್ನು ಇಲ್ಲಿ ಬಳಸಿಕೊಳ್ಳಬೇಕು, ವಿಸ್ತಾರ ಭಯದಿಂದ ಇಲ್ಲಿ ಎಲ್ಲವನ್ನು ಎತ್ತಿ ಹೇಳಿಲ್ಲ.]

ಭಾಷೆ ಎಂದರೇನು ? ಮರಗಳು ಎಂದರೇನು ಎಂಬುದಕ್ಕೆ ಯಾವ ಉತ್ತರವೊ ಅದುವೆ ಭಾಷೆಯೆಂದರೂ. ತೆಂಗಿನ ಮರವುಂಟು, ಮಾವಿನ ಮರವುಂಟು. ಆದರೆ ಬರಿಯ ' ಮರ ' ಎಂದರೆ ಏನು, ಅದು ಎಲ್ಲಿದೆ, ಎಂದು ಕೇಳಿದರೆ ಹೇಳುವುದು ಕಷ್ಟ. ಹಲಸು, ತೇಗು, ಜಾಲಿ, ಬಕುಲಾದಿ ಮರಗಳನ್ನು ತಟ್ಟಿ ಮುಟ್ಟಿ ನೋಡಲು ಶಕ್ಯವಿದೆ. ಆದರೆ 'ಮರ' ಎಂಬುದನ್ನು ಮಾತ್ರ ಕಲ್ಪನೆಯಿಂದಲೇ ಗ್ರಹಿಸಿ ಅರಿಯಬೇಕಾದುದು ಅಗತ್ಯ. ಇದರಂತೆಯೆ ಭಾಷೆಯೆಂಬುದನ್ನು ಬುದ್ಧಿಯಿಂದ ತಿಳಿದುಕೊಂಡಲ್ಲದೆ ಅದನ್ನು ಮಾತಿನಿಂದ ಬೇರ್ಪಡಿಸಿ ತೋರಿಸಲಿಕ್ಕಾಗದು. ಬಸವಣ್ಣನ ಮಾತು, ಭೀಮನ ಮಾತು, ಗೌರಿಯ ಮಾತು, ಶರೀಫನ ಮಾತು—ಹೀಗೆ ಒಬ್ಬೊಬ್ಬರು ಆಡುವ ಮಾತನ್ನು ಕೇಳಲು ಶಕ್ಯವಿದೆಯೆ ಹೊರತು, ವ್ಯಕ್ತಿಗಳಾಡುವ ಮಾತನ್ನುಳಿದ ಭಾಷೆಯೆಂಬುದು ಭಾವನಾಲೋಕದ ಒಂದು ವಸ್ತುವು. ಅದಕ್ಕೆ ಪ್ರಪಂಚದಲ್ಲಿ ಸ್ವತಂತ್ರ ಅಸ್ತಿತ್ವವಿಲ್ಲ. ಹೀಗೆಂದ ಮಾತ್ರಕ್ಕೆ ಭಾಷೆಯೆ ಇಲ್ಲವೆಂದು ಸಾಧಿಸುವುದು ತಿಳಿಗೇಡಿತನದ ಸಾಹಸವೇ ಸರಿ. ತೇಗು, ತೆಂಗು, ಜಾಲಿ, ಆಲ, ಹಲಸು, ಹುಣಸೆ ಮೊದಲಾದ ಮರಗಳು ಒಂದೊಂದು ಬೇರೆಯಾಗಿರುವುದು ನಿಜವಾದರೂ ಇವೆಲ್ಲವುಗಳಲ್ಲೂ ಬೊಡ್ಡೆ, ಬೇರು, ಎಲೆಗಳಂತಹ ಸಾಮಾನ್ಯ ಧರ್ಮಗಳು ಇರುವುದು ಸುಳ್ಳಲ್ಲ. ಇದೇ ಮೇರೆಗೆ ವ್ಯಕ್ತಿಗಳು ಆಡುವ ಒಂದು ಬಗೆಯ ಮಾತುಗಳಲ್ಲಿ ಹಲಕೆಲವು ಸಾಮಾನ್ಯ ಗುಣಧರ್ಮ

ಗಳು ಇದ್ದುದು ಅನುಭವಕ್ಕೆ ಬರುತ್ತವೆ. ಒಂದು ಜನದ ಮಾತಿನ ಲಘುತಮ ಸಾಧಾರಣ ಭಾಜ್ಯವೇ ಭಾಷೆ.

ಮಾವು, ಬೇವು, ತಾಳೆ, ತೆಂಗು ಮೊದಲಾದುವೆಲ್ಲ ಮರಗಳೇ. ಆದರೆ 'ಮರ' 'ಮರ'ಗಳಲ್ಲಿ ವ್ಯತ್ಯಾಸವಿದೆ. ತೀರ ಹತ್ತಿರಕ್ಕೆ ಹೋಗದೆಯೆ ಕೆಲವೊಂದು ದೂರ ದಿಂದ ಅವುಗಳ ನಿಲುವನ್ನು ನಿರೀಕ್ಷಿಸಿ ಅಲ್ಲಿ ಯಾವ ಯಾವ ಬಗೆಯ ಮರಗಳು ಉಂಟೆಂಬುದನ್ನು ಸ್ಥೂಲವಾಗಿ ವಿಂಗಡಿಸಿ ಹೇಳಲು ಶಕ್ಯವಿದೆ. ತೇಗಿನಂತೆ ತೆಂಗಿನ ಮರ ಇಲ್ಲ; ಆಲ, ಜಾಲಿ, ಬೇವು, ಮಾವುಗಳ ಒಂದೊಂದು ಅಂದವೇ ಬೇರೆ. ಪ್ರಾಣಿ ಮತ್ತು ವನಸ್ಪತಿಗಳಲ್ಲಿ ಇಂತು ಒಂದನ್ನು ಇನ್ನೊಂದರಿಂದ ಬೇರ್ಪಡಿಸಿ ತೋರುವ ನಿಲುಮೆಯ ಪ್ರಕಾರಕ್ಕೆ 'ಶೈಲಿ' ಎಂಬ ಹೆಸರಿದೆ.

ಭಾಷೆಯಲ್ಲಿ ಗದ್ಯದ ಶೈಲಿಗೂ ಪದ್ಯದ ಶೈಲಿಗೂ ಇರುವ ಸ್ಥೂಲ ಭೇದವನ್ನು ಎಂತಹರೂ ಅರಿತುಕೊಳ್ಳಬಹುದಾಗಿದೆ. ಗದ್ಯದಲ್ಲೂ ಕಥೆ ಕಾದಂಬರಿ ನಾಟಕಾದಿ ಸಾಹಿತ್ಯದಲ್ಲಿರುವ ಭಾಷೆಯ ರೀತಿಗೂ, ಗಣಿತ, ಭೂಗೋಲಾದಿ ಶಾಸ್ತ್ರೀಯ ತಾತ್ತ್ವಿಕ ವಿವರಣೆಗಳಲ್ಲಿ ಬರುವ ಭಾಷೆಗೂ ಅದೆಷ್ಟು ಅಂತರ ! ಒಂದು ಕಥೆ ಹೇಳಿದರೂ ಪುರಾಣಿಕರ ಕಥನ ಪದ್ಧತಿಗೂ ಕೀರ್ತನಕಾರರ ನಿವೇದನ ರೀತಿಗೂ ವ್ಯತ್ಯಾಸ ವಿದೆ. ಇವರಿಬ್ಬರಿಂದ ಶಿಕ್ಷಕನ ರೀತಿಯು ಇನ್ನೂ ಒಂದು ಬೇರೆ. ಸ್ತ್ರೀ-ಪುರುಷರ ಭಾಷೆಯಲ್ಲಿ ವ್ಯತ್ಯಾಸವೇ ಇಲ್ಲವೆಂದು ಯಾರಾದರೂ ಹೇಳಬಹುದೆ ?

ಶೈಲಿ-ಶೈಲಿಗಳಲ್ಲಿರುವ ಈ ಸೂಕ್ಷ್ಮ ಭೇದಗಳನ್ನು ಬಗೆದು ಭಾವಿಸಿ, ಅರಿತು ಅಳವಡಿಸಿಕೊಳ್ಳದವರ ಮಾತು-ರೀತಿಗಳಲ್ಲಿ ನಯ-ನಾಜೂಕು ಕಡಿಮೆ. ತಮ್ಮ ತಮ್ಮೊಳಗಣ ಸುಖಸಂಕಥಾವಿನೋದದ ಮಾತುಗಳಲ್ಲಿ ನಡೆವ ಸಂಭಾಷಣೆಯ ಕಾಲ ದಲ್ಲಿಯೂ ವ್ಯಾಸಪೀಠದ ಮೇಲಿಂದ ಬಹುಜನ ಸಮಾಜದ ಎದುರಿನಲ್ಲಿ ಮಾಡುವ ಉಪನ್ಯಾಸದ ಮಾದರಿಯಲ್ಲೇ ಮಾತಾಡುವ ಚಟ ಕೆಲವರಿಗೆ ಇರುತ್ತದೆ. ಮನೆಯ ಹೆಂಡತಿ ಮಕ್ಕಳೆದುರೂ ಉಪನ್ಯಾಸವೇ ಪ್ರಾರಂಭವಾದರೆ ಆ ಮಾತು ತಲೆಬೇಸರಾಗಿ ರಸ ಹಾನಿಯಾಗುತ್ತದೆ.

ಪ್ರಸಂಗಕ್ಕೆ ಅನುರೂಪವಾದ ಶೈಲಿಯು ಇರಬೇಕು. ಶೈಲಿಯು ಭಾಷೆಗೆ ಮಾತ್ರವಲ್ಲ, ಅದು ಸಮಗ್ರ ಜೀವನಕ್ಕೆ ಸಂಬಂಧಪಟ್ಟುದಾಗಿದೆ. ಉತ್ಸವ, ಸಮಾ ರಂಭಾದಿಗಳಲ್ಲಿ ಹಾಕಿಕೊಳ್ಳುವ ಉಡಿಗೆ-ತೊಡಿಗೆಗಳನ್ನು ವಿಷಾದ ದುಃಖದ ಸಂದರ್ಭಗಳಲ್ಲಿಯೂ ಧರಿಸುವುದು ಉಚಿತವಾದೀತೇ ? ಉಡುಪಿನಂತೆಯೆ ಮಾತು. ಆದುದರಿಂದಲೇ ಶೈಲಿಯಲ್ಲಿ ಔಚಿತ್ಯವಿರಬೇಕೆಂದು ಹೇಳುವುದು. ಉಚಿತವಲ್ಲದ ಮಾತುಗಳು ಶೈಲಿಯಲ್ಲಿ ಇರಕೂಡದು. ಕಾಲೇಜಿನ ವಿದ್ಯಾರ್ಥಿಗಳು ಒಮ್ಮೆ ಒಂದು ನಾಟಕವನ್ನು ಅಭಿನಯಿಸತಕ್ಕವರಿದ್ದರು. ಅವರಲ್ಲಿ ಒಬ್ಬರ ಪಾಲಿಗೆ ದಾಸಿಯ ಪಾತ್ರವು ಬಂದಿತ್ತು. ಆದರೂ ಅವರಿಗೆ ತಾವು ರೇಶಿಮೆಯ ಸೀರೆಯನ್ನುಟ್ಟೇ ರಂಗ ಭೂಮಿಯ ಮೇಲೆ ಬರಬೇಕೆಂಬ ಚಪಲ ! ಈ ಬಗೆಯ ಔಚಿತ್ಯಭಂಗವಾದಲ್ಲಿ

ಮನಸ್ಸಿನ ಮೇಲೆ ಆಗಬೇಕಾದ ಒಟ್ಟಿನ ಪರಿಣಾಮದಲ್ಲಿ ಕೊರತೆಯುಂಟಾಗುತ್ತವೆ. ಆದುದರಿಂದ ಔಚಿತ್ಯಪೂರ್ಣವಾದುದೇ ಶ್ರೇಷ್ಠ ಶೈಲಿ.

ವಿಶೇಷವಾದ ಸಂಭ್ರಮ ಅಥವಾ ದುಃಖದ ಸಂದರ್ಭದಲ್ಲಿ ಭಾವನೆಗಳು ಹಿಡಿತವನ್ನು ಮೀರುತ್ತವೆ. ಅಂತಹ ಸಂದರ್ಭದ ಮಾತುಗಳಲ್ಲಿ ಅತಿಶಯೋಕ್ತಿಯು ನುಸುಳಿಕೊಳ್ಳುವುದುಂಟು. ಸಮಾರಂಭಗಳಲ್ಲಿ ಸತ್ಕರಿಸತಕ್ಕ ವ್ಯಕ್ತಿಯನ್ನು ಈತನೇ ಇಂದ್ರ, ಚಂದ್ರ, ಬೃಹಸ್ಪತಿ ಎಂಬಂತೆ ಹೊಗಳುವ ಮೋಹವುಂಟಾಗುತ್ತದೆ. ಮಡಿದವರನ್ನು ಕುರಿತು ಮಿಡುಕುವಾಗ ಸತ್ತ ವ್ಯಕ್ತಿಯಲ್ಲಿ ಇದ್ದ ಕಡ್ಡಿಯಷ್ಟು ಗುಣವನ್ನು ಗುಡ್ಡವಾಗಿ ಮಾಡುವುದು, ಇಲ್ಲದ ಗುಣಗಳನ್ನು ಇದ್ದುವೆಂದು ಹೇಳುವುದು, 'ಇಂತಹರು ಹಿಂದೆ ಆಗಲಿಲ್ಲ; ಮುಂದೆ ಆಗಲಿಕ್ಕಿಲ್ಲ' ಎಂದು ಸಾರುವುದು, 'ಇಂತಹ ಪರೋಪಕಾರಿ ಸರ್ವಗುಣಸಂಪನ್ನ ಪುರುಷರತ್ನವನ್ನು ಸೆಳೆದುಕೊಂಡು ಹೋದ ದೇವರು ಕ್ರೂರ, ಅನ್ಯಾಯಿ' ಎಂದು ಹಲುಬುವುದು ಒಂದು ಚಟವಾಗಿದೆ. 'ದೇವರಿಗೆ ಪ್ರಿಯರಾದವರು ಬೇಗನೆ ಹೊರಟುಹೋಗುತ್ತಾರೆ' ಎಂದು ಹಾಡಿಕೊಂಡು ಕಣ್ಣೀರಿಡುವುದುಂಟು. ಸಿಟ್ಟಿನ ಆರ್ಭಟೆಯಲ್ಲಿ 'ನೆತ್ತರ ಕುಡಿವ ವರೆಗೆ ಮಾತಿನ ಕಾವು ಏರುತ್ತದೆ. ಕೂಡಲೇ ಹರ್ಷ ವಿಷಾದಗಳಿಗೆ ಒಳಗಾಗುವ ಭಾವನಾತ್ಮಕರ ಭಾಷೆಯಲ್ಲಿ ತೂಕವು ಕಡಿಮೆ. ಅಡುಗೆಗೆ ಉಪ್ಪಿಲ್ಲದೆ ರುಚಿಯಿಲ್ಲವೆಂಬುದು ನಿಜ. ಆದರೆ ಅದಕ್ಕೂ ಒಂದು ಮಿತಿಯುಂಟಷ್ಟೆ ? ಸಕ್ಕರೆಯ ಸಿಹಿತನವು ಮಿತಿಮೀರಿದರೆ ಅದೂ ಕಹಿ ಹತ್ತುತ್ತದೆ. ಸಾಮಾನ್ಯ ಸಕ್ಕರೆಯ ೫೦೦ ಪಟ್ಟು ಸಿಹಿಯಾದ ಸಕ್ಕರೆಯ ಒಂದು ಪ್ರಕಾರವುಂಟು. ಅದರ ಕೆಲವು ಕಣಗಳನ್ನು ತಿನ್ನಲಿಕ್ಕೂ ಬೇಡವೆನಿಸುತ್ತದೆ. ಅದರಂತೆ ಅತಿಶಯೋಕ್ತಿಯಿಂದಲೂ ಶೈಲಿಯ ಪಾಕವು ಹದಗೆಡುತ್ತದೆ. ಪರಿಣಾಮವು ವಿಪರೀತವಾಗುತ್ತದೆ.

ಶೈಲಿಯಿಂದ ವ್ಯಕ್ತಿಯ ಸ್ವಭಾವವನ್ನು ಕಂಡುಕೊಳ್ಳಲು ಸಾಧ್ಯವಿದೆ. ಉಡಿಗೆ ತೊಡಿಗೆಗಳಿಂದ ಆ ವ್ಯಕ್ತಿಯ ಅಭಿರುಚಿ ಎಂತಹದು ಎಂಬುದು ವ್ಯಕ್ತವಾಗುತ್ತಿರುತ್ತದೆ. ಒಳ್ಳೆ ಎದ್ದಾಗಿ ಕಾಣುವ, ಮಿರಿಮಿರಿ ಮಿಂಚುವ, ಕಣ್ಣಲ್ಲಿ ನಡುವಂತಹ ಬಣ್ಣಬಣ್ಣದ ಬಟ್ಟೆಗಳು ಯಾರಿಗೆ ಸೇರುವವೊ ಅವರಲ್ಲಿ ವಿಚಾರ ವಿವೇಕಗಳು ಸ್ವಲ್ಪ ಕಡಿಮೆ ಎಂದು ಧಾರಾಳವಾಗಿ ಹೇಳಬಹುದಾಗಿದೆ. ಆದರೆ ಸೌಮ್ಯವಾದ ವರ್ಣಛಾಯೆಗಳ ಉಡುಪಿನವರೆಲ್ಲ ಸಜ್ಜನರು, ವಿಚಾರವಂತರೇ ಇರುತ್ತಾರೆಂಬುದು ಮಾತ್ರ ಸುಳ್ಳು. ಶೈಲಿಯಿಂದ ಶೀಲವು ವ್ಯಕ್ತವಾಗುತ್ತದೆ ಎಂಬುದು ನಿಜವಿದ್ದರೂ, ಅದು ಆ ವ್ಯಕ್ತಿಯ ಸೋಗು ಅಲ್ಲ, ಇದು ಅವನ ನಿಜವಾದ ಶೈಲಿ ಎಂಬುದು ನಿಶ್ಚಿತವಾಗಿ ಗೊತ್ತಾಗುವ ವರೆಗೆ ಬರಿಯ ಹೊರಮಾತಿನಿಂದ ಆ ವ್ಯಕ್ತಿಯ ಶೀಲ ಸ್ವಭಾವವನ್ನು ಕುರಿತು ಎದೆತಟ್ಟಿ ಏನನ್ನು ಹೇಳುವುದೂ ಅವಿಚಾರವೇ ಸರಿ.

ಸ್ವಂತದ ಶೈಲಿಯು ರೂಪಗೊಳ್ಳಬೇಕಾಗಿದ್ದರೆ ಶ್ರೇಷ್ಠಸಾಹಿತ್ಯ ಕೃತಿಗಳ ಆಳವಾದ ಅಭ್ಯಾಸ ಮಾಡಬೇಕು. ಅದರ ಜೊತೆಗೆ ತನ್ನ ಅಂತರಂಗದ ವಿಚಾರ,

ಭಾವನೆಗಳ ಸೂಕ್ಷ್ಮ ನಿರೀಕ್ಷಣೆಯ ಸ್ವಭಾವವನ್ನು ಬೆಳಸಿಕೊಳ್ಳಬೇಕು. ತನ್ನಿಂದ ಹೊರಡುವ ಮಾತಿಗೂ ತನ್ನ ಅಂತರಂಗದ ಭಾವನಾ–ವಿಚಾರಗಳಿಗೂ ಇರುವ ಅನ್ಯೋನ್ಯ ಸಂಬಂಧವನ್ನು ಕಂಡುಕೊಳ್ಳಲು ಹಿಂದೆಗೆಯಬಾರದು. ಆತ್ಮವಿಮರ್ಶೆಗೆ ಎದೆಗಾರಿಕೆ ಬೇಕಾಗುತ್ತದೆ. ತನ್ನ ಗುಣಾವಗುಣಗಳನ್ನು ನಿರ್ದಾಕ್ಷಿಣ್ಯದಿಂದ ಒರೆಗೆ ಹಚ್ಚಿಕೊಳ್ಳಲು ಬೇಕಾಗುವ ಧೈರ್ಯ ಪ್ರಾಮಾಣಿಕತೆಯಿಲ್ಲದವರ ಶೈಲಿಯಲ್ಲಿ ಜೊಳ್ಳು ಪೊಳ್ಳು ಬೆರೆತುಕೊಳ್ಳದೆ ಇರಲಾರದು. ಸಹಾನುಭೂತಿ, ಪ್ರೇಮ, ಪ್ರಾಮಾಣಿಕಬುದ್ಧಿಗಳ ಪ್ರಚೋದನೆಯಿಂದ ಹೊರಹೊಮ್ಮುವ ಮಾತಿನ ಶೈಲಿಯು ಪರಿಣಾಮಕಾರಿಯೂ ಮೇಲ್ತರದ್ದೂ ಆಗುವಲ್ಲಿ ಸಂದೇಹವಿಲ್ಲ.

ಉಪ್ಪು, ಕಾರ, ಸಿಹಿ, ಮಧುರಾದಿ ಸೂಕ್ಷ್ಮವರಿಯದ ಅಡಸಲ ಬಡಸಲು ತಿನ್ನಾಸಕರಿಗೆ ಯಾವ ಅಡುಗೆಯಾದರೂ ಅಷ್ಟೇ. ಸವಿಗಾರ ರಸಿಕರಲ್ಲದವರಿಂದ ಯಾವ ಸರಸ ಪದಾರ್ಥವೂ ಸಿದ್ಧವಾಗಲಾರದು. ರುಚಿಕರವಾದ ಸರಸ ಪದಾರ್ಥಗಳನ್ನು ಮಾಡುವುದಕ್ಕೆ ಬಾರದೇ ಇದ್ದರೂ, ಒಂದೊಂದು ಪದಾರ್ಥದ ರುಚಿ ವೈಚಿತ್ರ್ಯಗಳನ್ನೂ ಆಸ್ವಾದಿಸಿ ಆನಂದಿಸಲು ಬಾರದವರು ಏನು ಕಲಿತರೂ ಏನು? ಅವರು ಹುಂಬರು, ಅರಸಿಕರು, ಅಸಂಸ್ಕೃತರೇ ಸರಿ. ನಮ್ಮ ಸಂಸ್ಕಾರಗಳು ಎಂತಹವು ಅಂತಹ ಶೈಲಿ ನಮ್ಮದು. ಮುಖಮುದ್ರೆ, ಅಂಗವಿನ್ಯಾಸ, ಮಾತುಕಥೆ, ತಿನಿಸು ಉಣಿಸು, ಉಡುಪುತೊಡುಪು ಇಂತಹ ಪ್ರತಿಯೊಂದು ಸಂಗತಿಯಲ್ಲೂ ಆ ಶೈಲಿಯು ಅಭಿವ್ಯಕ್ತವಾಗುತ್ತಿರುತ್ತದೆ. ಮನುಷ್ಯನ ಈ ಎಲ್ಲ ಅಭಿವ್ಯಕ್ತಿಗಳಲ್ಲಿ ಶೈಲಿಯಲ್ಲಿ ಸೂಕ್ಷ್ಮವಾದ ಹೊಂದಿಕೆಯು ಇದ್ದುದನ್ನು ಕಂಡುಕೊಳ್ಳಬಹುದು.

ಉತ್ತಮ ಚಿತ್ರಕಾರನಿಗೆ ತಾನು ಬಳಸುವ ಬಣ್ಣ ಬಣ್ಣಗಳ ಸೂಕ್ಷ್ಮ ತಾರತಮ್ಯವು ತಿಳಿದಿರಬೇಕಾಗುತ್ತದೆ. ಹಾಗೆ ತಾನಾಡುವ ಅಥವಾ ಬರೆಯುವುದರಲ್ಲಿ ಬಳಸುವ ಪ್ರತಿಯೊಂದು ಶಬ್ದದ ಸ್ಥೂಲ ಸೂಕ್ಷ್ಮಾರ್ಥದ ಛಾಯೆಗಳ ಸಂಪೂರ್ಣ ಅರಿವು ಇರಬೇಕಾಗುತ್ತದೆ. ಇಲ್ಲವಾದರೆ ಅನುಚಿತ ಪದಪ್ರಯೋಗಗಳಿಂದ ನಗೆಗೀಡಾಗಬೇಕಾಗುತ್ತದೆ. ಪರಕೀಯರು ಬಂದು ನಮ್ಮಲ್ಲಿ ಇಲ್ಲದ ತೊಂದರೆಗಳನ್ನುಂಟು ಮಾಡದಿರಲಿ, ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುವುದಕ್ಕಾಗಿ ಒಬ್ಬ ಪ್ರತಿಕಾಕಾರನು ಹಿಂದೊಮ್ಮೆ 'ಪರಪುರುಷರ ಸಂಪರ್ಕವು ನಮಗೆ ಬೇಡ' ಎಂಬ ತಲೆ ಬರೆಹದಲ್ಲಿ ಒಂದು ಲೇಖನವನ್ನು ಪ್ರಕಟಿಸಿದನು! ಪದಪದ್ಯಗಳಿಗಷ್ಟೆ ರಾಗ ಛಂದಸ್ಸುಗಳಿರುತ್ತವೇತಲ್ಲ; ಗದ್ಯದ ಶೈಲಿಯಲ್ಲಿಯೂ ಆಯಾ ಪ್ರಸಂಗೋಚಿತವಾದ ಗತಿನಾದ ಇದ್ದೇ ಇರುತ್ತದೆ. ಸಿಟ್ಟಿನ ಆವೇಶದ ಮಾತಿನಲ್ಲಿ ಇರುವ ವೇಗವು ಶಾಂತ ವಿಚಾರದ ಭಾಷೆಯಲ್ಲಿ ಇರುವುದಿಲ್ಲ. ಉದಾತ್ತ ಗಂಭೀರ ಭಾಷಣಗಳಲ್ಲಿ ಕಾಣಿಸಿಕೊಳ್ಳುವ ಛಂದೋಗತಿಯ ಉತ್ತಮವಾದ ಮಾದರಿಗಳನ್ನು ಶ್ರೇಷ್ಠ ವಾಗ್ಮಿಗಳೆಂದು ವಿಖ್ಯಾತರಾದವರ ವಕ್ತೃತ್ವಗಳಲ್ಲಿ ಕೇಳಿ ಮನಗಾಣಬೇಕು. ಅಂತಹ ಭಾಗಗಳು ಗದ್ಯರೂಪದ ಪದ್ಯಗಳೆಂದೆ ಹೇಳಬಹುದು. ನುಡಿಯ ಮೃದು–ಮಧುರ ಮಾತು

ಗಳಲ್ಲಿ ಮಹಾಪ್ರಾಣ ಕರ್ಕಶ ವರ್ಣಗಳಿಗೆ ಹೆಚ್ಚು ಆಸ್ಪದವಿರಬಾರದೆಂದು ಬೇರೆ ಹೇಳಬೇಕೆ ? ಯಾವ ಭಾವಕ್ಕೆ ಎಂತಹ ಛಂದದ ಶಬ್ದವು ಇದ್ದರೆ ಲೇಸೆಂಬುದನ್ನು ಶ್ರೇಷ್ಠರ ಗ್ರಂಥಗಳಿಂದ ಅರಿತುಕೊಳ್ಳಬೇಕಲ್ಲದೆ ತಾನು ಹಾಗು ಹೆರವರಾಡುವ ಜೀವಂತ ಮಾತಿನಲ್ಲಿ ಶಬ್ದ ಮತ್ತು ನಾದದೊಳಗಿರುವ ಹೊಂದಿಕೆಯನ್ನು ವಿಮರ್ಶಿಸಿ ಅರಿತುಕೊಳ್ಳಬೇಕು.

ಎಷ್ಟು ವ್ಯಕ್ತಿಗಳೊ ಅಷ್ಟು ಪ್ರಕೃತಿಗಳು, ಎಂಬ ಲೋಕೋಕ್ತಿಯು ಶೈಲಿಗೂ ಸರಿಹೋಗುತ್ತದೆ. ಶೈಲಿಯಲ್ಲಿ ಯಾರ ಅಂಧಾನುಕರಣವೇ ಆಗಲಿ ಹಾನಿಕರ. ಅದರಿಂದ ಸ್ವಂತದ ವ್ಯಕ್ತಿತ್ವವು ಹಾಳಾಗುತ್ತದೆ. ರುಚಿಯಾದ ಶುಚಿಯಾದ ಆಹಾರ ಪದಾರ್ಥಗಳನ್ನು ಎಲ್ಲೆಲ್ಲಿಂದಲೂ ದೊರಕಿಸಿ ಸವಿಯಬೇಕು. ಉಂಡುದನ್ನು ಅರಗಿಸಿ ಕೊಳ್ಳಬೇಕು. ಇದರಿಂದ ಮಾತ್ರ ಆರೋಗ್ಯದ ಅಭಿವೃದ್ಧಿಯಾದೀತೇ, ಹೊರತು ತಿಂದುದನ್ನು ಹಾಗೆಯೇ ಮರುಕಳಿಸುವವರು ತಮ್ಮ ಹಾನಿಯನ್ನು ತಾವೇ ಮಾಡಿ ಕೊಳ್ಳುತ್ತಾರೆ.

—ಶಂ. ಬಾ. ಜೋಶಿ.

## ಅಭ್ಯಸನಗಳು

ಪ್ರಶ್ನೆಗಳು:—

(೧) ಮಾತು ಮತ್ತು ಭಾಷೆಗಳಲ್ಲಿರುವ ಭೇದವೇನು ?
(೨) ಶೈಲಿಯು ಸಮಗ್ರ ಜೀವನಕ್ಕೆ ಸಂಬಂಧಪಟ್ಟುದು ಎಂದರೇನು ?
(೩) ಪ್ರಸಂಗಕ್ಕೆ ತಕ್ಕ ಶೈಲಿಯಿಲ್ಲದಿದ್ದರೆ ಆಗುವ ಹಾನಿಯೇನು ?
(೪) ಸ್ವಂತದ ಶೈಲಿಯನ್ನು ರೂಪಿಸಿಕೊಳ್ಳಲು ಮಾಡಬೇಕಾದ ಸಾಧನೆಯೇನು ?

ಭಾಷಾಭ್ಯಾಸ:—

(೧) ಒಂದು ಜನದ ಮಾತಿನ ಲಘುತಮ ಸಾಧಾರಣ ಭಾಜ್ಯವೇ ಭಾಷೆ.
(೨) ಅತಿಶಯೋಕ್ತಿಯಿಂದ ಶೈಲಿಯು ಹದಗೆಡುತ್ತದೆ.
(೩) ಎಷ್ಟು ವ್ಯಕ್ತಿಗಳೋ ಅಷ್ಟು ಪ್ರಕೃತಿ.
ಈ ವಾಕ್ಯಗಳನ್ನು ಸ್ಪಷ್ಟೀಕರಿಸಿರಿ.

ಶಬ್ದವಿಚಾರ:—

ಶೀಲ — ಶೈಲಿ
ಹೀಗೆ — ಕ್ರೂರ —
ಸುಂದರ —
ಶೂರ —
ಉದಾರ —
ಮೃದು —

ಇವುಗಳಿಂದ ಆಗುವ ಸಾಧಿತ ರೂಪಗಳನ್ನು ಬರೆಯಿರಿ.

ನಿಲುವೆ — ಇದರಂತೆ ವೆ ಪ್ರತ್ಯಯ ಹಚ್ಚಿ, ಐದು ಭಾವನಾಮಗಳನ್ನು ಹೇಳಿರಿ.

(೨) ಇಂದ್ರ, ಚಂದ್ರ, ಬೃಹಸ್ಪತಿ, ಶಕುನಿ — ಈ ಶಬ್ದಗಳ ವಿಶೇಷಾರ್ಥವೇನು? ನರಿ, ನಾಯಿ, ನೊರಜು, ಕುದುರೆ, ಸಿಂಹ — ಇವುಗಳ ವಿಶೇಷಾರ್ಥವು ವ್ಯಕ್ತವಾಗುವಂತೆ ಒಂದೊಂದು ವಾಕ್ಯವನ್ನು ಬರೆಯಿರಿ.

**ವಾಕ್ ಶಿಕ್ಷಣ :—**

(೧) 'ಗೋರಕ್ಷಣೆ' ಎಂಬ ವಿಷಯವನ್ನು ಕುರಿತು ಕೀರ್ತನಕಾರ, ರಾಜಕೀಯ ಮುಂದಾಳು, ಓರ್ವ ಶಿಕ್ಷಕ — ಇವರು ಹೇಳುವ ರೀತಿಯಲ್ಲಿ ಆಗುವ ವ್ಯತ್ಯಾಸವನ್ನು ಅಭಿನಯಿಸಿ ತೋರಿಸಿರಿ.

(೨) ಸರ್ವಜ್ಞ ವಚನಗಳು, ಗಾದೆಯ ಮಾತುಗಳು, ಬಿ. ಎಂ. ಶ್ರೀ ಅವರ ಭಾಷಣಗಳು ಇವುಗಳನ್ನು ಓದಿರಿ.

**ಚರ್ಚೆ:—**

ಸಂಸ್ಕೃತವನ್ನು ಹೆಚ್ಚಾಗಿ ಬಳಸುವದರಿಂದ ಭಾಷೆಯ ಚೆಲುವು ಹೆಚ್ಚುತ್ತದೆ.

**ಬರೆಹ:—**

ನಿಮ್ಮ ಮನಸ್ಸಿನ ಮೇಲೆ ಪರಿಣಾಮಮಾಡಿದ ಒಬ್ಬ ಗ್ರಂಥಕಾರನ ಭಾಷೆಯ ಸೊಬಗನ್ನು ವರ್ಣಿಸಿರಿ.



# ೨೮. ಕತೆಯ ಅಂತರಂಗ

[ ಇನಿದಾದ ಮಾವು ಎಂದೊಡನೆ, ಎಲ್ಲ ಮಾವಿನ ಹಣ್ಣಿನ ಸವಿ ಒಂದೇ ಬಗೆಯಾಗಿರುವುದಿಲ್ಲ. ರುಚಿ — ರುಚಿಗಳೊಳಗಿನ ಸೂಕ್ಷ್ಮ — ಪರ್ಯಾಯಗಳನ್ನು ಅರಿತು ಆನಂದಿಸುವುದಕ್ಕೂ ಯೋಗ್ಯತೆ ಬೇಕು; ಸಂಸ್ಕಾರ ಪಡೆಯಬೇಕು. ಅಭಿರುಚಿ ಬೆಳೆಯಬೇಕು. ಇದೇ ಮಾತು ಸಾಹಿತ್ಯಕ್ಕೂ ಸರಿಹೋಗುತ್ತದೆ. ಕತೆಯ ಅಂತರಂಗದ ಮರ್ಮವನ್ನು ತಿಳಿದುಕೊಳ್ಳಲು ಅವಶ್ಯಕವಾದ ನಾಲ್ಕು ಮಾತುಗಳನ್ನು ಇಲ್ಲಿ ಸ್ವಲ್ಪದರಲ್ಲಿ ಹೇಳಿದೆ.]

ಕತೆಗಳನ್ನು ಹೇಳುವುದರಲ್ಲಿ ಕೇಳುವುದರಲ್ಲಿ ಎಲ್ಲರಿಗೂ ಯಾವಾಗಲೂ ಆಸಕ್ತಿ. ಅಜ್ಜಿ ಮೊಮ್ಮಕ್ಕಳಿಗೆ, ಮರಿಮಕ್ಕಳಿಗೆ ಕತೆ ಹೇಳುತ್ತಾಳೆ. ಕೇಳುವುದು ಮಕ್ಕಳಿಗೂ ತುಂಬ ಆಸೆ. ಮುದುಕರಾಗಿದ್ದವರು ಕಿರಿಯರಿಗೆ ತಮ್ಮ ಕಾಲದ ಅನುಭವಗಳನ್ನು ಹೇಳುತ್ತಿರುವುದು ವಾಡಿಕೆ. ಕೇಳುವವರು ಕಿರಿಯರಾದರೂ ಒಳ್ಳೇ ಆಸಕ್ತಿಯಿಂದ ಕೇಳುತ್ತಾರೆ. ಅಂತು ಕತೆಯೆಂದರೆ ಎಲ್ಲರಿಗೂ ಪ್ರೀತಿ. ನೀವೇ ನೋಡಿ. ನಿಮ್ಮ ಮನೆಯಲ್ಲಿ ಯಾರಾದರೂ ಪ್ರವಾಸದಿಂದ ಹಿಂದಿರುಗಿದಾಗ ಅವರು ಹೇಳುವುದನ್ನು ಎಂಥ ಕುತೂಹಲದಿಂದ ಕೇಳುತ್ತೀರಿ? ಹೇಳುವವರ ಆತುರಕ್ಕೆ ಸರಿಯಾಗಿ ಕೇಳುವವರ ಕುತೂಹಲ ಕೆರಳುತ್ತದೆ. ಮುಂದೇನು? ಆಮೇಲೆ ಏನಾಯಿತು? ಎಂದು ಮುಂತಾಗಿ ಕೇಳಿ ಇನ್ನೂ ಹೆಚ್ಚಿನ ವಿವರಗಳನ್ನು ತಿಳಿಯ ಬಯಸುತ್ತೀರಿ. ಯಾಕೆ? ತನಗೆ ಅನಿಸಿದ್ದನ್ನು, ತಾನು ಅನುಭವಿಸಿದ್ದನ್ನು ಇನ್ನೊಬ್ಬ

ರಿಗೆ ತಿಳಿಸುವ ವರೆಗೆ ಮನುಷ್ಯನಿಗೆ ಸಮಾಧಾನವಿಲ್ಲ. ಮನುಷ್ಯ ಎಂದರೆ ಸಮಾಜ ದಲ್ಲಿ ಬದುಕಿರಬೇಕಾದ ಜೀವ ಅಲ್ಲವೇ ? ಎಂಥ ಅನುಕೂಲಗಳಿದ್ದರೂ ಇನ್ನೊಬ್ಬರ ಸಂಪರ್ಕವಿಲ್ಲದ ಬಾಳು ಬರಡು. ಅಂತೆಯೆ ಮನುಷ್ಯ ತನ್ನ ಅನುಭವಗಳನ್ನು ಇನ್ನೊಬ್ಬರಿಗೆ ಹೇಳುವುದರಲ್ಲಿ, ಇನ್ನೊಬ್ಬ ಅದನ್ನು ತಿಳಿಯುವುದರಲ್ಲಿ ಸಂತೋಷಪಡು ತ್ತಾನೆ. ಕತೆಗಳ ಬಗೆಯಲ್ಲಿಯ ನಮ್ಮ ಪ್ರೀತಿಗೆ ಇದೇ ಮೂಲಕಾರಣ.

ಹಾಗಾದರೆ ಕತೆ ಅಂದರೇನು ? ಕತೆ ಅಂದರೆ ನಮ್ಮ ನಿಮ್ಮ ಅನುಭವ ? ಹೌದು. ನಮ್ಮ ನಿಮ್ಮ ಅನುಭವ ಎಂದರೆಯೆ ಕತೆ ಅಲ್ಲದಿದ್ದರೂ ನಮ್ಮ ನಿಮ್ಮ ಅನು ಭವಗಳನ್ನು ಉಪಯೋಗಿಸಿಕೊಂಡೇ ಕತೆಯನ್ನು ಕಟ್ಟಲಾಗಿರುತ್ತದೆ. ನೀವು ಓದಿದ ಯಾವ ಬೇಕಾದ ಕತೆಯನ್ನು ನೆನೆದುಕೊಳ್ಳಿ. ಅದರಲ್ಲಿ ನಡೆದದ್ದು ನಿಮ್ಮ ಅನುಭವದ ಮಾತಾಗಿರಬಹುದು. ಆದರೆ ಅದು ಇನ್ನಾರದೊ ಅನುಭವ ಖಂಡಿತವಾಗಿ ಇರ ಬಹುದು. ಅದರಲ್ಲಿ ಹೇಳಿದ್ದು ಯಾರ ಅನುಭವ ಎನ್ನುವುದಕ್ಕಿಂತ, ಅದು ಸಾಧ್ಯವೆ? ಸಂಭಾವ್ಯವೆ ? ಎನ್ನುವ ಮಾತು ಮುಖ್ಯ. "ಹುಲಿಯ ಬೇಟೆ" ಕತೆಯನ್ನೋದಿ. ನೀವು ಹುಲಿಯ ಬೇಟೆಗಾಗಿ ಕಾಡಿಗೆ ಹೋಗಿರಲಾರಿರಿ. ಆದರೆ ಹೋದವರು ಕೆಲವರು ಇರಬಹುದಲ್ಲ ! ಹೋದವರಿಗೂ ಬಗೆಬಗೆಯ ಅನುವಭಗಳು ಬಂದಿರಲು ಸಾಕು. ಹೊಡೆಯಬೇಕೆಂದ ಗುಂಡಿನ ಗುರಿ ತಪ್ಪಿದಾಗ, ಹುಲಿ ಅಬ್ಬರಿಸಿ ಹಾರಿ ಬಂದಾಗ ಬೇಟೆಗಾರನ ಬವಣೆ ಎಂಥದು ಎಂಬುದನ್ನೆಲ್ಲ ಅನುಭವಿಸಿದವ ತನಗೆನಿಸಿದ್ದನ್ನು ತಾನು ಪಟ್ಟ ಪಾಡನ್ನು ವಿವರವಾಗಿ ತಿಳಿಸಿದಾಗ ನೀವೂ ಅಂಥದೇ ಅನುಭವವನ್ನು ಪಡೆಯುತ್ತೀರಿ. ಕೈಯಲ್ಲಿ ಪುಸ್ತಕವನ್ನು ಹಿಡಿದುಕೊಂಡು ಓದುತ್ತಿದ್ದರೂ ಒಂದು ಕ್ಷಣ ನಿಮ್ಮ ಓದಿನೊಡನೆ ಉಸಿರು ತಡೆಯುತ್ತದೆ, ಎದೆ ಬಡಕೊಳ್ಳುತ್ತದೆ; ನಿಮ್ಮೆ ದುರಿಗೆ ನಿಜವಾಗಿಯೂ ಹುಲಿ ಬಂದ ಹಾಗೆ ಅನಿಸುತ್ತದೆ, ಗಾಬರಿಯೂ ಎನಿಸುತ್ತದೆ. ಅಂದರೆ ಆ ಕ್ಷಣಕ್ಕೆ ನೀವು ನಿಮ್ಮ ಕೋಣೆಯನ್ನು ಬಿಟ್ಟು ಕಟ್ಟಡವಿಯಲ್ಲಿಯೇ ಇರುತ್ತೀರಿ. ಎಲ್ಲವನ್ನೂ ಮರೆತುಬಿಟ್ಟು ಕತೆಯನ್ನು ಹೇಳುತ್ತಿದ್ದವನ ಅನುಭವ ದೊಡನೆ ಸಮರಸವಾಗಿರುತ್ತೀರಿ. ಇದು ಸಾಧ್ಯವಾದಾಗ ಕತೆಯನ್ನು ಹೇಳಿದವ ಸರಿ ಯಾಗಿ ಹೇಳಿದ್ದಾನೆ; ಕೇಳಿದವನು ಸರಿಯಾಗಿ ಕೇಳಿದ್ದಾನೆ ಎಂದು ಹೇಳಬೇಕು.

ಅಂದರೆ ಏನೆಂದ ಹಾಗಾಯಿತು ? ಕತೆ ಹೇಳುವವ ತನ್ನ ಒಂದು ಅನುಭವ ವನ್ನು ಮನಮುಟ್ಟುವಂತೆ ಹೇಳುವುದೇ ಮುಖ್ಯವಾದಂತೆ ಅದನ್ನು ಹೇಳುವ ರೀತಿ ಯಿಂದಾಗಿ ನೀವು ಅದನ್ನು ಯಥಾವತ್ತಾಗಿ ಕಣ್ಣೆದುರು ಕಾಣಬೇಕು ಎಂದಾಯಿತು. ಸರಿ. ಆದರೆ ಎಲ್ಲರೂ ತಮ್ಮ ಎಲ್ಲ ಅನುಭವಗಳನ್ನು ಹೇಳಿದರೆ ಕತೆಯಾಗುತ್ತದೆಯೆ? ಎಂದು ನೀವು ಕೇಳಬಹುದು. ಅಲ್ಲದೆ ಕತೆಗಾರ ಹೇಳಿದ ಎಲ್ಲ ವಿವರಗಳೂ ನಿಜ ವಾಗಿಯೂ ಆತ ಪಡೆದ ಅನುಭವಗಳೇ ? ಎಂದೂ ಕೇಳಬಹುದು. ಸರಿಯಾದ ಪ್ರಶ್ನೆಗಳು ಇವು. ಈ ಪ್ರಶ್ನೆಗಳನ್ನು ನಾವು ಸರಿಯಾಗಿ ತಿಳಿದರೆ ಕಥನ ಕಲೆಯಲ್ಲಿಯ

ಒಂದೆರಡು ಮುಖ್ಯಾಂಶಗಳನ್ನು ತಿಳಿಯಬಹುದಾಗಿದೆ. ಮೊದಲನೆಯದಾಗಿ, ಎಲ್ಲರಿಗೂ ಬಗೆ ಬಗೆಯ ಅನುಭವಗಳು ಉಂಟಾಗುತ್ತಿದ್ದರೂ ಎಲ್ಲರೂ ಕಥೆಗಳನ್ನು ಬರೆಯಲಾರರು, ಹೇಳಲಾರರು. ಏಕೆಂದರೆ, ಕತೆಯನ್ನು ಹೇಳುವ ಕೌಶಲ ಅವರಲ್ಲಿರುವುದಿಲ್ಲ. ಹೇಳಬೇಕಾದಾಗ ಅನುಸರಿಸಬೇಕಾದ ರೀತಿಯನ್ನು ಅವರು ತಿಳಿದವರಾಗಿರುವುದಿಲ್ಲ. ಕೆಲವರಿಗೆಯೆ ಆ ಕಲೆ ಹಸ್ತಗತವಾಗಿರುತ್ತದೆ. ಕೆಲವರಿಗೆ ಸರಿಯಾಗಿ ಮಾತನಾಡಲೂ ಬರುವುದಿಲ್ಲ. ಕೆಲವರು ಸೊಗಸಾಗಿ, ರಸವತ್ತಾಗಿ, ಮಾತನಾಡುತ್ತಾರೆ. ಹಾಗೆಯೇ ಕೆಲವರಿಗೆ ಬೇಕಾದಂಥ ಅನುಭವ ಇದ್ದರೂ ಹರಕು ಮುರುಕಾಗಿ ಹೇಳುತ್ತಾರೆ. ಇನ್ನು ಕೆಲವರು ತಮಗೆ ಬಂದ ಅನುಭವವನ್ನು ರಸವತ್ತಾಗಿ, ಸೊಗಸಾಗಿ ಹೇಳಬಲ್ಲವರಿರುತ್ತಾರೆ. ಹಾಗಾದರೆ ಸೊಗಸಾಗಿ ರಸವತ್ತಾಗಿ ಹೇಳುವುದು ಎಂದರೆ ಹೇಗೆ? ಇದೂ ಒಂದು ಮಹತ್ತ್ವದ ಪ್ರಶ್ನೆ. ಅದಕ್ಕೆ ಆಮೇಲೆ ಉತ್ತರ ಹುಡುಕುವಾ. ಅದಕ್ಕೂ ಮೊದಲು ಆಗಲೆ ಕೇಳಿದ ಎರಡನೆಯ ಪ್ರಶ್ನೆ. ಕತೆಗಾರ ಹೇಳುವ ಎಲ್ಲ ಅನುಭವಗಳೂ ನಿಜವಾದ ಅನುಭವಗಳೇ ಇರಬೇಕಾದದ್ದಿಲ್ಲ. ಅನುಭವ ನಿಜವಾದದ್ದಿರಬಹುದು, ಅಥವಾ ಕಲ್ಪಿತವಾದದ್ದಿರಬಹುದು, ಅಥವಾ ಕೆಲವು ಭಾಗ ನಿಜವಾದ ಅನುಭವವಾಗಿರಬಹುದು; ಇನ್ನು ಕೆಲವು ಭಾಗ ಕಲ್ಪಿತವಾಗಿದ್ದು ಕತೆ ಎರಡರ ಬೆರಕೆಯಾಗಿರಬಹುದು; ಕೇಳಿದ್ದಕ್ಕೆ ನೋಡಿದ್ದಕ್ಕೆ ಉಪ್ಪುಕಾರ ಹಚ್ಚಿ ಹೇಳುವುದು ಮನುಷ್ಯನ ಸ್ವಭಾವ! ಪ್ರಯಾಣ ಮುಗಿಯಿಸಿ ಬಂದವನ ರೈಲು ಬರಿ ಹದಿನೈದು ನಿಮಿಷ ತಡವಾಗಿ ಬಂದಿದ್ದರೂ ಒಂದು ಗಂಟೆ ತಡವಾಗಿತ್ತೆಂದಾಗಲಿ ಅದರಿಂದಾಗಿ ತಾನು ಪಟ್ಟ ಅನನುಕೂಲಗಳನ್ನು ಪ್ರಯಾಣಿಕ ಹಿಗ್ಗಿಸಿ, ಬೆಳೆಯಿಸಿ ಹೇಳುವುದಿಲ್ಲವೇ ? ಕತೆಗಳಲ್ಲಿಯೂ ಹಾಗೆಯೇ ನಡೆದುದನ್ನು ನಡೆದಂತೆಯೇ ವಿವರಿಸುವ ಕತೆ ವಾಸ್ತವ ಕತೆಯಾಗುತ್ತದೆ; ಕಲ್ಪಿತವಸ್ತು ಸೇರಿಕೊಂಡಾಗ – ಸೇರಿಕೊಂಡಷ್ಟರ ಮಟ್ಟಿಗೆ – ರಮ್ಯ ಕತೆಯಾಗುತ್ತದೆ.

ಇನ್ನು ಒಂದು ಬಗೆಯ ಕತೆಗಳನ್ನು ನೀವು ಓದುತ್ತಿರಬಹುದು. ಅಥವಾ ಇನ್ನೂ ಮುಂದೆ ಓದಬಹುದು. ಆ ಕತೆಯೆಂದರೆ ಅದ್ಭುತ ರಮ್ಯ ಕತೆ. ಇಂಥ ಕತೆಗಳಲ್ಲಿ ನಡೆಯಲಾರದ್ದೆಲ್ಲವೂ ನಡೆಯಬಹುದು. ನಡೆಯುತ್ತದೆ. ಅತಿ ಮಾನವರು, ದಾನವರು, ದೆವ್ವಗಳು ಮಂತ್ರವಾದಿಗಳು ಇತ್ಯಾದಿಯಾಗಿ ಒಂದು ವಿಚಿತ್ರವಾದ, ಅದ್ಭುತವಾದ ಕತೆಗಳನ್ನು ಸಾಧ್ಯವಾಗಿಸುವರು. ಅಲ್ಲಾವುದ್ದೀನನಿಗೆ ದೀಪವೊಂದು ಸಿಕ್ಕಿದ್ದರಿಂದ, ಅದರ ಸಹಾಯದಿಂದ ಬೇಕಾದುದನ್ನು ಮಾಡಬಲ್ಲವನಾಗಿದ್ದ. ಸಿಂದ್‌ಬಾದ್ ಎಂಬ ನಾವಿಕ ರತ್ನಗಳ ಕಂದರದಲ್ಲಿ ದಾರಿ ತಪ್ಪಿದ್ದ. ನಮ್ಮಲ್ಲಿಯ ಪುರಾಣಗಳಲ್ಲಿ ಅನೇಕ ಅಸ್ತ್ರ, ಆಕಾಶವಾಣಿ, ಶಾಪ, ಸಂಜೀವಿನಿ ಮುಂತಾದವುಗಳಿಂದಾಗಿ ಅದ್ಭುತಗಳು ನಡೆಯುವುದಿಲ್ಲವೇ ? ಹಾಗೆ ಇಂಥ ಅನುಭವಗಳು ನಿತ್ಯವ್ಯವಹಾರ ಜೀವನದಲ್ಲಿ ಅಸಾಧ್ಯ. ಆದರೂ ಅವುಗಳಲ್ಲಿ ನಮಗೆ ಆಸಕ್ತಿ ಇರುತ್ತದೆ. ಇದಕ್ಕೆ ಕಾರಣವೇನು? ನಾವೆಲ್ಲರೂ

ಒಂದಿಲ್ಲೊಂದು ಬಗೆಯಿಂದ ಅಸಾಧ್ಯವಾದುದರ ಆರಾಧಕರು. ಕಲ್ಪನೆಯ ರಾಜ್ಯದಲ್ಲಿ ಕನಸುಗಳನ್ನು ಕಂಡು ಸಂತೋಷಪಡುವವರು. ಕೆಲಸವಿಲ್ಲದೆ ಸುಮ್ಮನೆ ಕುಳಿತಾಗ ನಾವು ಎಂಥೆಂಥ ಕನಸುಗಳನ್ನು ಕಟ್ಟುವುದಿಲ್ಲ ? ಲಕ್ಷಾಧೀಶನಾದರೆ–? ಮಂತ್ರಿಯಾದರೆ–? ಸೇನಾಪತಿಯಾದರೆ–? ಇತ್ಯಾದಿಯಾಗಿ ಆಕಾಶ-ಕುಸುಮಗಳನ್ನು ಅರಸುವುದಿಲ್ಲವೇ ? ಸುತ್ತಲಿನ ಪ್ರಪಂಚದಲ್ಲಿ ನಮಗೆ ಬೇಸರವಾದಾಗ ನಾವು ಇಂಥ ಊಹಾಪ್ರಪಂಚವನ್ನು ಸೇರುತ್ತೇವೆ. ಅದಕ್ಕೆಂದೇ ಇಂಥ ಅದ್ಭುತ ಕತೆಗಳಲ್ಲಿ ನಮಗೆ ತುಂಬ ಪ್ರೀತಿ. ನಾವು ಸ್ಟಂಟ್ ಚಿತ್ರಗಳನ್ನು ಮೆಚ್ಚುವುದಾದರೂ ಇದೇ ಕಾರಣಕ್ಕಾಗಿ.

ಕತೆಗಳ ವಿಷಯ ಯಾವುದಾದರೂ ಆದೀತು. ಸಾಮಾನ್ಯ ಮನುಷ್ಯನ ಸಾಮಾನ್ಯ ಅನುಭವವಾಗಿರಬಹುದು; ಅಸಾಮಾನ್ಯರ ಅಸಾಮಾನ್ಯ ಅನುಭವವೂ ಆಗಿರಬಹುದು; ಎರಡರ ಬೆರಕೆಯೂ ಆಗಿರಬಹುದು. ಯಾವುದೇ ಆದರೂ ಅದನ್ನು ನಿರೂಪಿಸುವ ಬಗೆ ಮಾತ್ರ ರಸವತ್ತಾಗಿರಬೇಕು. ಅಂದರೆ ಕೇಳುವವ ಮೊದಲಿನಿಂದ ಕೊನೆಯ ವರೆಗೆ ಕುತೂಹಲದಿಂದ ಕೇಳಬೇಕು. ಅದರಲ್ಲಿ ಸಮರಸವಾಗಿ ಕೇಳಬೇಕು, ಕೇಳಿ ಸಂತೋಷಪಡಬೇಕು. ಇದನ್ನು ಕತೆಗಾರ ಹೇಗೆ ಸಾಧಿಸುತ್ತಾನೆ? ಆತನ ಈ ಕಲೆಯ ಗೂಢವೇನು ? ಇದಕ್ಕೆ ಉತ್ತರ ಆಗಲೆ ಸೂಚಿತವಾಗಿದೆ. ಕೇಳುವವ ಅಥವಾ ಓದುವವ ಕೊನೆಯ ವರೆಗೂ ಮುಂದೇನು ? ಮುಂದೇನು ? ಮುಂದೇನು ? ಅನ್ನುತ್ತಲೆ ಇರಬೇಕು. ಕತೆಗಳಲ್ಲಿ ಬರುವ ಸಂಗತಿಗಳ ಜೋಡಣೆ ಆ ರೀತಿಯದಾಗಿರಬೇಕು. ಅಲ್ಲದೆ ಹೇಳಬೇಕಾದ ಸಂಗತಿಗಳಲ್ಲಿ ಓದುಗನ ನಿರೀಕ್ಷೆಯನ್ನು ಮೀರಿಸುವ ಕೆಲವು ಅಂಶಗಳಿರಬೇಕು. ನೀವು ಇಲ್ಲಿಂದ ಬೆಂಗಳೂರಿಗೆ ಪ್ರವಾಸಕ್ಕೆ ಹೊರಟಿರಿ ಎನ್ನುವಾ. ನೀವು ಹೊರಟ ದಿನ ರೈಲು ಸರಿಯಾದ ವೇಳೆಗೆ ಬಂದು ದಾರಿಯಲ್ಲಿ ಯಾವ ಅನನುಕೂಲಗಳೂ ಇಲ್ಲದೆ ನೀವು ಊರು ಸೇರಿದಿರಾದರೆ ಆ ಪ್ರವಾಸದಲ್ಲಿ ಯಾವ ವಿಶೇಷ ? ಅದು ಕತೆಯಾಗಲಾರದು. ಇದಕ್ಕೆ ಪ್ರತಿಯಾಗಿ ರೈಲು ಆರು ಗಂಟೆ ತಡವಾಗಿ ಬಂದಿತು ಎನ್ನುವಾ. ನಡುದಾರಿಯಲ್ಲಿ ಯಾರೋ ನಿಮ್ಮ ಹಣದ ಚೀಲವನ್ನೇ ಕದ್ದರು! ನಿಮ್ಮ ಟಿಕೆಟ್ ಕೂಡ ಕಳೆದುಹೋಯಿತು. ಚೆಕರ್ ಬಂದಾಗ ನೀವು ಎಷ್ಟು ಹೇಳಿಕೊಂಡರೂ ನಿಮ್ಮನ್ನು ಆತ ನಂಬಲಿಲ್ಲ. ನಿಮ್ಮನ್ನು ನಡುರಾತ್ರಿಯಲ್ಲಿ ಯಾವುದೊ ಒಂದು ದೀಪಗಳು ಕೂಡ ಇಲ್ಲದ ನಿಲ್ದಾಣದಲ್ಲಿ ಇಳಿಸಲಾಯಿತು! ನಿಮ್ಮ ಬಳಿಯಲ್ಲಿದ್ದ ಒಂದೆರಡು ಸಾಮಾನುಗಳನ್ನು ಕಸಿದುಕೊಳ್ಳಲಾಯಿತು. ಆಮೇಲೆ ಕೈಯಲ್ಲಿ ಕಾಸಿಲ್ಲ, ಹೊಟ್ಟೆಗೆ ಅನ್ನವಿಲ್ಲ. ನಡುರಾತ್ರಿ. ಸರಿ. ಇದು ಕತೆ ಅಥವಾ ಕುತೂಹಲವನ್ನು ಬೆಳೆಯಿಸುವ ವಿಧಾನ. ಇಂಥವೇ ಹತ್ತಾರು ರೀತಿಗಳಲ್ಲಿ ಕತೆಯನ್ನು ಕೊನೆಗಾಣಿಸಬಹುದು. ಒಂದಿಲ್ಲೊಂದು

ಬಗೆಯಲ್ಲಿ ಕುತೂಹಲವನ್ನು ಕೆರಳಿಸದ ವಿವರ ಕತೆಯೇ ಅಲ್ಲ ಎನ್ನುವುದು ಮುಖ್ಯ.

ಆದರೆ ಇನ್ನೊಂದು ಮಾತನ್ನು ನಾವು ನೆನೆಯಬೇಕು. ಈ ಕುತೂಹಲ ಬಗೆ–ಬಗೆಯದಾಗಿರಬಹುದು. "ಕೂಲಿ" ಎಂಬ ಕತೆಯನ್ನು ನೀವು ಓದಿದ್ದೀರಿ. ಕತೆಯನ್ನು ಅರ್ಧ ಓದಿದಾಗ ಕೊನೆಯಲ್ಲಿ ಏನು ನಡೆಯುತ್ತದೆ ಎಂಬುದನ್ನು ನೀವು ಊಹಿಸಬಲ್ಲಿರಾ ? ಸಾಮಾನ್ಯವಾಗಿ ಸಾಧ್ಯವಿಲ್ಲ ಎಂದೇ ಕಾಣುತ್ತದೆ. ಹಾಗೆ ನೋಡಿದರೆ ಅನಿರೀಕ್ಷಿತವಾದದ್ದು, ಅಲ್ಲಿ ಯಾವುದೂ ನಡೆಯುವುದಿಲ್ಲ. ಕೂಲಿಯ ಬಡತನಕ್ಕಾಗಿ ಸಹಾನುಭೂತಿಯನ್ನು ತೋರಿದ ಲೇಖಕರು ಆತನನ್ನು ಮಾತಾಡಿಸುತ್ತಾರೆ. ಆತನ ಬಡತನದ ಬಗೆಯಲ್ಲಿ ಹೆಚ್ಚಿನ ವಿವರಗಳನ್ನು ತಿಳಿಯುವಂತಾಗುತ್ತಾರೆ. ಮನೆಯಲ್ಲಿಯ ತಾಯಿ ಆತನಿಗೆ ಅನ್ನವನ್ನು ಹಾಕುತ್ತಾಳೆ. ಕೊಡಬೇಕಾದ ಕೂಲಿಯನ್ನು ಲೇಖಕರು ಕೊಡುತ್ತಾರೆ. ಬಡಕೂಲಿಯವ ಕೃತಜ್ಞತೆಯ ಮಾತನ್ನು ಹೇಳಿದಾಗ ಲೇಖಕರು ಒಂದು ಮುತ್ತಿನಂಥ ಮಾತನ್ನು ಹೇಳುತ್ತಾರೆ. ಪ್ರಪಂಚದಲ್ಲಿಯ ಬಡತನವನ್ನು ನೀಗಿಸಲು ಯಾರಿಗೆ ಸಾಧ್ಯ ! ಆದರೆ ಹೃದಯದ ಸಹಾನುಭೂತಿಯನ್ನು ತೋರಿಸುವುದಕ್ಕೂ ಕೊರತೆಯೇ ? ಇಷ್ಟಕ್ಕಾಗಿಯೇ ಈ ಕತೆ. ಈ ಭಾವನೆಯನ್ನು ನಮ್ಮಲ್ಲಿ ಹುಟ್ಟಿಸುವುದಕ್ಕೆ ಲೇಖಕರು ಹೇಗೆ ಮೊದಲಿನಿಂದಲೂ ದಾರಿಕಡಿದಿದ್ದಾರೆ ಎಂಬದನ್ನು ನೆನೆದರೆ ಕತೆ ಹೇಗೆ ಒಮ್ಮುಖವಾಗಿ ಬೆಳೆದಿದೆ ಎಂಬುದನ್ನು ನೀವು ತಿಳಿಯಬಹುದು; ಒಟ್ಟಿನಲ್ಲಿ ಕತೆ ಒಮ್ಮುಖವಾಗಿ ಬೆಳೆಯಬೇಕು. ಒಂದು ಸ್ಪಷ್ಟವಾದ ಪರಿಣಾಮವನ್ನು ಓದುಗರ ಮೇಲೆ ಮಾಡಬೇಕು. ಕೊನೆಯವರೆಗೂ ನಮ್ಮ ಆಸಕ್ತಿ ಅದರಲ್ಲಿ ಉಳಿಯುವಂತಾಗಬೇಕು. ಈ ಅಳತೆಗೋಲಿನಿಂದ ನೀವು ಓದಿದ ಕತೆಗಳನ್ನು ಅಳೆದುನೋಡಿ. ಕತೆ ಒಳ್ಳೆಯದೊ ಅಲ್ಲದ್ದೊ ಎಂಬ ಬಗೆಯಲ್ಲಿ ವಿವೇಚನೆ ಇದರಿಂದ ಸಾಧ್ಯವಾಗುತ್ತದೆ.

ಇನ್ನೊಂದು ವಿಷಯ. ಕತೆಗಳನ್ನು ಯಾತಕ್ಕೆ ಓದಬೇಕು ? ಕತೆ ಜೀವನದ ಚಿತ್ರ ಎಂಬುದು ನಿಜವಾದರೆ ಕತೆಯ ಬದಲಾಗಿ ಜೀವನವನ್ನು ನೋಡಬಹುದಲ್ಲ ! ಎಂದು ಕೇಳಬಹುದು. ಆದರೆ ಒಬ್ಬ ಮನುಷ್ಯನು ತನ್ನ ಪರಿಮಿತವಾದ ಜೀವನಾವಧಿಯಲ್ಲಿ, ಪರಿಮಿತವಾದ ಅವಕಾಶಗಳ ಮೂಲಕ ಎಷ್ಟನ್ನು ಪ್ರತ್ಯಕ್ಷವಾಗಿ ನೋಡಬಹುದು ? ಎಷ್ಟು ಬಗೆಯ ಅನುಭವಗಳನ್ನು ನೇರವಾಗಿ ಪಡೆಯಬಹುದು ? ಎಷ್ಟು ಜನ ಹುಲಿಯ ಬೇಟೆಗೆ ಹೋಗಬಹುದು? ಎಲ್ಲ ಬಗೆಯ ಅನುಭವಗಳನ್ನು ಎಲ್ಲರೂ ಪಡೆಯುವುದು ಸಾಧ್ಯವಿಲ್ಲ. ಆದ್ದರಿಂದಲೇ ಬೇರೆ ಬೇರೆ ಬಗೆಯ ಬರೆಹಗಳನ್ನು ಓದಿ ನಮ್ಮ ಅನುಭವವನ್ನು ವಿಸ್ತಾರಗೊಳಿಸಬೇಕಾಗುತ್ತದೆ. ಇದೂ ಅಲ್ಲದೆ, ನಮ ಜೀವನದಲ್ಲಿ ಅನುಭವಗಳು ನೂರಾರು ವಿಧವಾಗಿ ಒಂದರೊಳಗೊಂದು ಸಿಲುಕಿಕೊಂಡಿರುವುದರಿಂದ ಒಂದೊಂದು ಅನುಭವವನ್ನು ಬಿಡಿಬಿಡಿಯಾಗಿ ಅರ್ಥಮಾಡಿ

ಕೊಳ್ಳಲು ಸಾಧ್ಯವಾಗುವುದಿಲ್ಲ. ಕೆಲವೇ ಅನುಭವಗಳನ್ನು ಒಂದು ವಿಧದಲ್ಲಿ ಜೋಡಿಸಿ ಕತೆಗಾರ ತೋರಿಸುತ್ತಾನೆ. ಆದ್ದರಿಂದ ಆ ಅನುಭವದ ಸ್ವರೂಪವನ್ನಲ್ಲದೆ ಅದರ ಅರ್ಥವನ್ನೂ ನಾವು ತಿಳಿಯಬಲ್ಲವರಾಗುತ್ತೇವೆ. ಹೀಗೆ ಅನುಭವವನ್ನು ತಿಳಿಯುವುದರಲ್ಲಿ ಒಂದು ಬಗೆಯ ಸಂತೋಷವನ್ನೂ ಪಡೆಯುತ್ತೇವೆ. ಇದೇ ಸಾಹಿತ್ಯದಿಂದ ಉಂಟಾಗುವ ರಸಾನುಭವ—ಆನಂದ.

—ಇನಾಂದಾರ ವೆಂಕಟರಾಯರು

## ಅಭ್ಯಸನಗಳು

ಪ್ರಶ್ನೆಗಳ ೧:—

(೧) ಕತೆಗಳನ್ನು ಕೇಳುವದರಲ್ಲಿ ನಮಗೆ ಆಸಕ್ತಿ ಏಕೆ?

(೨) ಕತೆಯು ಚಿತ್ತಾಕರ್ಷಕವಾಗಬೇಕಾದರೆ ಯಾವ ಸಂಗತಿಗಳು ಅವಶ್ಯವಿರುವವು?

(೩) ಕತೆಗಳನ್ನು ಓದುವ ಅವಶ್ಯಕತೆ ಏನು?

ಅಭ್ಯಾಸ:—

(೧) ಓದಿದ ಕತೆಯನ್ನು ಹೇಗೆ ವಿಮರ್ಶಿಸಬೇಕು ಎಂಬುದರ ಮಾದರಿಗಾಗಿ 'ಬಣ್ಣದ ಬುಗ್ಗೆ' ಎಂಬ ಕತೆಯ ವಿಮರ್ಶೆಯನ್ನು ಕೊಟ್ಟಿದೆ.

"ಬಣ್ಣದ ಬುಗ್ಗೆ" ಕತೆಯನ್ನೇ ವಿಮರ್ಶಿಸುವಾ. ಇಲ್ಲಿ ಕತೆಗಾರರು ಮಾಡಬೇಕೆಂದಿದ್ದ ಪರಿಣಾಮ ಯಾವುದು? ಅರ್ಥಸೂಚನೆ ಏನು? ಆ ಪರಿಣಾಮ, ಆ ಅರ್ಥಸೂಚನೆ ಸಾಧ್ಯವಾಗುವಂತೆ ಆ ಕಥೆಯ ವಿವಿಧಾಂಗಗಳು ಏಕಮುಖವಾಗಿ ಕೆಲಸ ಮಾಡುತ್ತಿವೆಯೆ? ಮಾಡುತ್ತಿದ್ದರೆ ಹೇಗೆ? ಅಥವಾ ಆ ಇಷ್ಟಪರಿಣಾಮಕ್ಕೆ ವಿರುದ್ಧವಾಗಿ, ವಿಸಂಗತವಾಗಿ ಯಾವ ಅಂಶಗಳಾದರೂ ಅದರಲ್ಲಿ ಸೇರಿಕೊಂಡು ಕತೆಯ ಏಕಮುಖತೆಯನ್ನು ಹಾಳುಮಾಡುತ್ತಿವೆಯೆ? ಈ ಪ್ರಶ್ನೆಗಳಿಗೆ ನಾವು ಸಮರ್ಪಕವಾದ ಉತ್ತರಗಳನ್ನು ಹೇಳಿಕೊಂಡರೆ ಆ ಕತೆಯ ಅಚ್ಚುಕಟ್ಟುತನ, ಅದರ ಪರಿಣಾಮವಾಗಿಯೇ ಓದುಗರ ಮನಸ್ಸಿನ ಮೇಲೆ ಉಂಟಾಗುವ ಏಕಾಗ್ರವಾದ ಪರಿಣಾಮ, ಅದರ ಮೂಲಕವೇ ಮನವನ್ನು ಮುಟ್ಟುವ ವಿಷಯ ಮತ್ತು ರೀತಿಗಳ ಏಕಜೀವವಾದ ಹೆಣಿಕೆ ನಮ್ಮ ಕಣ್ಣೆದುರು ನಿಲ್ಲುವವು. ಸಾಮಾಜಿಕ ಪ್ರತಿಷ್ಠೆಯ ಹಂಬಲಕ್ಕೆ ಮೋಸಬಿದ್ದು, ಜನರು ತಮ್ಮ ಮರುಳುತನಕ್ಕಾಗಿ ತನ್ನ ಮೇಲೆ ಹೊರಿಸಿದ ಹಿರಿತನ ನಿಜವಾಗಿಯೂ ತನಗೆ ಸಲ್ಲಬೇಕಾದುದೆಂಬ ಭ್ರಮೆಗೆ ಒಳಗಾಗಿ, ಜನ ತನ್ನ ಮರುಳುತನವನ್ನು ಕಂಡು ಕಂಡೋ ಅಥವಾ ಇನ್ನಾವ ಕಾರಣಕ್ಕಾಗಿಯೋ ಆತನಿಗೆ ಮೊದಲಿನಂತೆ ಮನ್ನಣೆ ಸಲ್ಲಿಸದಿದ್ದಾಗ ಸಂಕಟಪಡುವ ಒಂದು ಜೀವದ ಚಿತ್ರ ಈ ಕತೆಯಲ್ಲಿದೆ. ಈ ಜೀವವನ್ನು ಮೂರು ಹಂತಗಳಲ್ಲಿ ನಾವು ಕಾಣುತ್ತೇವೆ. ಮೋಸಬೀಳುವ ಮೊದಲಿನದು ಮೊದಲನೆಯ ಭಾಗದಲ್ಲಿ, ಭ್ರಮೆಯ ಅಟ್ಟಹಾಸವನ್ನು ಎರಡನೆಯದರಲ್ಲಿ, ಭ್ರಮನಿರಸನವನ್ನು ಮೂರನೆಯದರಲ್ಲಿ ಕಾಣುತ್ತೇವೆ. ಇದಕ್ಕೆ ಪ್ರತಿಯಾಗಿ ಈ ಹಿರಿಮೆ ದೊಡ್ಡಸ್ತಿಕೆಗಳೆಲ್ಲವೂ ಒಂದು ಮೋಸ, ಒಂದು ಭ್ರಮೆ, ಬದುಕಿನಲ್ಲಿ ತನ್ನ ಪಾಲಿಗೆ ಬಂದ ಕೆಲಸದ ಪ್ರಾಮಾಣಿಕವಾದ ನಿರ್ವಹಣೆಯೇ ನಿಜವಾದ ಸಂತೃಪ್ತಿ, ಸಂತೃಪ್ತಿಯೇ ಸುಖ, ಎಂಬ ಸೂಚನೆಯನ್ನು ಕತೆಯುದ್ದಕ್ಕೂ ಹಿನ್ನೆಲೆಯಾಗಿ ಆ

ಕಡಲೆಕಾಯಿ ಮಾರುವ ಮುದುಕಿಯ ಮೂಲಕ ಕೊಟ್ಟಿದ್ದಾರೆ. ತನ್ನ ಬದುಕಿನ ಸುಖ ಸಂಕಷ್ಟಗಳಿಗೆ ತಾನೇ ಹೊಣೆಯೆಂಬ ಧ್ವನಿಯೂ ಹೊರಡುತ್ತದೆ. ಬಡತನದಿಂದ ಮೊದಲಾದ ಕತೆ ಬಡತನದಲ್ಲಿಯೇ ಮುಕ್ತಾಯವಾಗುತ್ತದೆ. ಮುದುಕಿಯ ಬಡತನದ ಕಷ್ಟ ಮೊದಲಿನಿಂದ ಕೊನೆಯ ವರೆಗೂ ಇದ್ದು — ಹಾಗಿದ್ದುದರಿಂದಲೇ — ಎಷ್ಟು ಅಸಹನೀಯವಾದರೂ ಆಕೆಯ ಸಂತೃಪ್ತವೃತ್ತಿಯ ಮೂಲಕ ಸಹನೀಯವಾಗುತ್ತದೆ. ಆದರೆ ನಡುವೆಯೆ ಐಶ್ವರ್ಯದ ಕುದುರೆಯನ್ನೇರಿದವನಿಗೆ ಆ ಕುದುರೆಯನ್ನಿಳಿದು ಮತ್ತೆ ನೆಲದ ಮೇಲೆ ನಡೆಯಬೇಕಾದಾಗ ನಡೆಯುವ ಕಷ್ಟ ಅಸಹನೀಯವಾಗುತ್ತದೆ. ನಾನೇಕೆ ಆ ಕುದುರೆಯನ್ನೇರಿದೆನೊ, ಏರದಿದ್ದರೆ ಒಳ್ಳೆಯದಾಗುತ್ತಿತ್ತು, ಎಂದು ಹೇಳಿಕೊಳ್ಳುವಂತಾಗುತ್ತದೆ. ಈ ಸೂಚನೆ ಹಿನ್ನೆಲೆಯಲ್ಲಿದ್ದುಕೊಂಡ ಮುದುಕಿಯ ಸಹನೆಯಲ್ಲಿದೆ; ತನ್ನ ಕಾಯಕದಲ್ಲಿಯೆ ಆಕೆ ಪಡೆಯುವ ಸಂತೃಪ್ತಿಯಲ್ಲಿದೆ. ಕೊನೆಗೆ ಆಕೆಯೆ ನಿಜವಾದ ಸುಖಿ, ನಿಷ್ಕಾಮ ಕರ್ಮಿ ಎಂಬ ಅರಿವು ಕತೆಯ ಮುಖ್ಯಪಾತ್ರಕ್ಕೆ ಬಂದಾಗ ಕತೆ ಮುಗಿಯುತ್ತದೆ.

(೧) ಇದೇ ಬಗೆಯಾಗಿ ರತ್ನಮಣಿ ಮತ್ತು ಸೇಬು ಇವೆರಡನ್ನು ವಿಮರ್ಶಿಸಿರಿ. ಇವೆರಡರ ಕಥಾವಸ್ತು ಮತ್ತು ರಚನೆ ಇವುಗಳಲ್ಲಿಯ ಭೇದವನ್ನು ನಿರೀಕ್ಷಿಸಿರಿ.

(೨) ' ಕೂಲಿ ' ಮತ್ತು ' ಗೌರಜ್ಜಿ ' ಇವು ಹರಟೆಯ ಮಾದರಿಗಳಿದ್ದು, ಇವುಗಳಲ್ಲಿ ಕಥಾಸ್ವರೂಪವೂ ಇದೆ.

# ೧. ನಾಡನೆಲೆಗಾರ್ತಿ

[ ಕರ್ನಾಟಕದ ವಿಷಯದಲ್ಲಿರುವ ಸದಭಿಮಾನವನ್ನು ವ್ಯಕ್ತಪಡಿಸುವ ನಾಡಹಾಡು ಇದು. ಇದರೊಳಗಿನ ನಾದಾನುಕೂಲತೆಯು ಕಿವಿಗೆ ಇಂಪಾಗಿದ್ದು ಮನಸ್ಸನ್ನು ಸೆಳೆಯು ವಂತಿದೆ. ]

ಸಿಂಗರ ಬನದಲಿ ಹೊಂಗೊಳಲೂದುತ ಬಗೆಬಗೆ ಭಂಗಿಯೊಳು
ಮುಂಗುರುಳೇಳಲು ತೀಡುತ ನಡೆದಳು ಹೆಳಲದು ಬಿಚ್ಚಿರಲು ।
ಮಿಂಚಿನ ವೇಗದಿ ಮುಂದಕೆ ಸರಿದಳು ಮಿಸುನಿಯ ಮಿರುಗಿನಲಿ
ಕಂಚಿಯ ಮರದಲಿ ಕಾಣುವ ಕನ್ನಡವಕ್ಕಿಯೆ ಹೇಳಿಲ್ಲಿ
ಕಣ್ಣನು ಕುಕ್ಕಿಸಿ ನೋಡದೆ ನಡೆದಳು ಯಾರಿವಳೆಲೆ ಹಕ್ಕಿ ?
ಬಣ್ಣನೆ ಕೇಳಲೊ ಬಿತ್ತರಿಸುವೆ ಕತೆ ಘಾತಕಿ ನೀ ಸೊಕ್ಕಿ ॥

" ಚಲುಕ್ಯ ದೇವನ ಬೀರವನುಕ್ಕಿಸಿ ಕಾರ್ಯವ ತೋರಿದ ವೀರಕಲೆ
ರಟ್ಟರ ನಾಡೊಳು ಕಟ್ಟಿಸಿ ಗುಡಿಗಳ ಸೌಖ್ಯದಿ ಮೆರೆದಿಹ ಸಿರಿಕಮಲೆ
ಹೊಯ್ಸಳ ರಾಯರ ಹುರುಪಿನ ಕಾರ್ಯದಿ ಲೋಕದ ಕಣ್ಣಿಗೆ ಆಸೆಬಲೆ
ವಿದ್ಯಾನಗರದ ವಿಜಯ ದುಂದುಭಿಯ ಮೊಳಗಿಸಿ ಬೆಳೆದಿಹ ಜಯಶೀಲೆ
ಯದುವನು ವರಿಸಿದ ಗುಣಶೀಲೆ
ಮೈಸೂರೊಡೆಯರ ನಾಡನೆಲೆ.

" ಪಂಪನ ಕಂಠದಿ ಕುಳಿತು ಸುರಿಸಿರುವ ತನಿರಸ ಕಾವ್ಯದ ಸೊಂಪುಮಳೆ
ರನ್ನನು ಹೊನ್ನನು ಉಕ್ಕುತೆ ಉಸುರಿದ ಮಿಕ್ಕುವ ನುಡಿಗಳ ನಾಡಕಳೆ
ಗಾನವನುಕ್ಕಿಸಿ ಜೈಮಿನಿ ಹೇಳಿಸಿ ಮೌನವ ಬಿಡಿಸಿದ ಗಾನಕಲೆ
ಕನ್ನಡ ಕಾವ್ಯದ ಕುಸುರನು ಕೆತ್ತಿದ ಕುಮಾರವ್ಯಾಸನ ಉಕ್ಕುಬೆಳೆ
ನುಡಿಗಳ ಸೊಬಗಿನ ಕಿವಿಯ ಸೆಳೆ
ನಾಡೊಳು ಮೆರೆದಿಹ ಹೆಣ್ಣಿವಳೆ.

" ಮುದ್ದಣನೆದೆಯಲಿ ಎದ್ದು ತೋರುತಿಹ ನನ್ನಿಯ ಮಾತಿನ ಮುದ್ದು ಕಣಿ
ಜೈನರ ಮೌನವ ನಿಲ್ಲಿಸಿ ನುಡಿಸಿದ ಚೆಲು ಚೆಲು ಕಬ್ಬದ ಸಾಲುಮಣಿ
ಹೊನ್ನೆಯ ಕೃತಿಯಿಂ ಹದಿಬದೆಧರ್ಮವ ಸಾರಿದ ಭಾಗ್ಯದ ಕಟ್ಟಾಣಿ
ಕನ್ನಡ ನಾಡಿನ ಚೆನ್ನಿಗರೆಲ್ಲರು ನನ್ನಿಯಲುಣ್ಣುವ ಸವಿಗರಣಿ
ದಾಸರ ಕಂಠದ ಸುರವಾಣಿ
ಶರಣರೊಳುಕ್ಕಿದ ಉಕ್ಕು ಕೆನಿ

" ಬಾಳೆಯ ಬನಗಳ ತೆಂಗಿನ ಸಾಲ್ಗಳ ಅಡಿಕೆಯ ಮರಗಳ ತುಂಬು ಬೆಳೆ
ಬಗೆ ಬಗೆ ಬಳ್ಳಿಯ ಹೂವಿನ ಹಂದರ ಮೆರೆಯುವ ಸೊಬಗಿನ ಕಣ್ಣಸೆಳೆ
ನದಿಗಳನುಕ್ಕಿಸಿ ನಾಡಿನ ಹೊಲಗಳ ಬೆಳೆಯಿಸಿ ಪೊರೆಯುವ ಸೊಗದ ಸೆಲೆ
ನಾಡಿನ ಗುಡಿಯಲಿ ಮೂಜಗ ಮೆಚ್ಚಲು ಕುಸುರನು ಬರೆದಿಹ ಶಿಲ್ಪಕಲೆ
ಬಣ್ಣಿಸಲಾಗದು ಇವಳ ನೆಲೆ
ಜಗದಧಿದೇವತೆ ನೋಡಿವಳೆ.

" ನಡೆಯುವ ಕಾಲದ ನಾಡಿನ ಭಾಗ್ಯವು ಮನಸಿಗೆ ಸಾಕಾಗಿ
ನಾಡನು ತೊರೆಯುತೆ ನಿಂತಿಹಳಿಲ್ಲಿಯೆ ಕಾಡಿದು ಬೇಕಾಗಿ
ನಿನ್ನಯ ನಾಡೊಳು ನಾಲ್ಕೆಡೆ ನೆಲೆಸಿದ ದೇವಿಯೆ ಇವಳಾಗಿ
ಚೆನ್ನಿಗ ನಿನ್ನಯ ನನ್ನಯ ತಾಯಿಯು ತಿಳಿಯೆಲೊ ನೀ ತೂಗಿ. "

ಮನ್ನಿಪೆ ನಿನ್ನನು ಹೇಳೆಲೆ ಹಕ್ಕಿಯೆ ನನ್ನ ತಾಯಿಯೆಂದು
ನನ್ನಯ ನಾಡಿಗೆ ಎಂದಿಗೆ ಬರುವಳು ಕೂದಲು ತಾ ಹೆಣೆದು ?
" ನಿನ್ನನು ನೀ ತಿಳಿ ಕನ್ನಡತನದಲಿ ಚದರಿದ ನಾಡನ್ನು
ಮುನ್ನಿನ ತೆರದೊಳು ಮಾಡಲು ನಿಂತರೆ ಬರುವಳು ನೋಡಿನ್ನು. "
ಚೆಲುವನು ಸಿಕ್ಕಿ ಹೇಳಲೆ ಹಕ್ಕಿ ನನ್ನನು ನಾನರಿವೆ
ನಿಲಿಸುವೆ ಗುಡಿಯನು ಕೂಡಿಸಿ ನಾಡನು ತಾಯಿಯ ನಾ ಕರೆವೆ.

— ರಾಮು

## ಅಭ್ಯಸನಗಳು

ಪ್ರಶ್ನೆಗಳು :—

೧. ಕನ್ನಡ ನಾಡಿನ ಐತಿಹಾಸಿಕ ವೈಭವವು ಎಂತಹದು ?
೨. ಪಂಪ, ರನ್ನ, ಹೊನ್ನ ಮೊದಲಾದ ಕವಿಗಳ ವೈಶಿಷ್ಟ್ಯವೇನು ?
೩. ನಾಡದೇವಿಯು ಕಾಡಿನಲ್ಲಿ ನಿಲ್ಲಲು ಕಾರಣವೇನು ?
೪. ನಾಡದೇವಿಯು ಪುನಃ ವೈಭವದಿಂದ ನೆಲಿಸಲು ಕನ್ನಡಿಗರು ಮಾಡಬೇಕಾದ ಕರ್ತವ್ಯವೇನು ?

ಭಾಷಾಭ್ಯಾಸ :—

೧. ಕವಿಯು ಸಂಕೇತಗಳಿಂದ ಕೆಲವೊಂದು ಭಾವವನ್ನು ವ್ಯಕ್ತಪಡಿಸುವನು. ಹೆಳಲು ಹಾಕಿಕೊಳ್ಳದೆ ಇರುವದು ದುಃಖದ ಸಂಕೇತ. ಇದರಂತೆ ಹೊಂಗೊಳಲು ಗಾನಕಲೆಯ ಪ್ರತೀಕ.
೨. ಮಿಂಚಿನ ವೇಗದಿ ಮುಂದಕೆ ಸರಿದಳು ಮಿಸುನಿಯ ಮಿರುಗಿನಲಿ ಈ ಸಾಲಿನಲ್ಲಿ 'ಮ' ಕಾರವು ಮೇಲಿಂದ ಮೇಲಿ ಬಂದಿದೆ. ಈ ಕವನದ ಮಾಧುರ್ಯವು

ಇದರಿಂದ ಹೆಚ್ಚಾಗುವದು. ಇದರಂತೆ 'ಕ' ಕಾರವು ಬಂದ ಸಾಲುಗಳನ್ನು ಗುರುತಿಸಿರಿ.

ಶಬ್ದವಿಚಾರ :—

೧. ಚಿತ್ತರಿಸು, ಸಿಂಗರ, ಚೀರ, ಕಬ್ಬ, ಬಣ್ಣನೆ, ನೆಲೆಗಾರ್ತಿ, ಇವು ಯಾವ ಶಬ್ದಗಳಿಂದ ಉಂಟಾಗಿರುವವು ಎಂಬುದನ್ನು ಹೇಳಿರಿ.

೨. 'ಕಣ್ಣಿಗೆ ಆಸೆ ಬಲೆ,' 'ತನಿರಸದ ಕಾವ್ಯ' ಕಾವ್ಯದ ಕುಸುರು ಇವುಗಳ ಅರ್ಥ ಹೇಳಿರಿ.

ವಾಕ್-ಶಿಕ್ಷಣ :—

೧. ಶ್ರೀ ಗೋವಿಂದ ಪೈ ಅವರು ಬರೆದ 'ಕನ್ನಡ ತಾಯಿ' ಎಂಬ ಕವನವನ್ನೋದಿರಿ. ಬಿ. ಎಂ. ಶ್ರೀ ಅವರು ಬರೆದ 'ಬಿಂಕದ ಸಿಂಗಾರಿ' ಮತ್ತು ಈ ಕವನದ ಧಾಟಿಯಲ್ಲಿರುವ ಸಾಮ್ಯವನ್ನು ಕಂಡುಹಿಡಿಯಿರಿ.

೨. 'ಕನಸಿನೊಳಗೊಂದು ಕಣಸು'— ಅಂಬಿಕಾತನಯದತ್ತರ ಕವನವನ್ನು ಪಾಠ ಮಾಡಿ ಅಭಿನಯಿಸಿರಿ.

ಚರ್ಚೆ :—

ಪ್ರಾಂತೀಯ ಭಾಷೆಗಳು ತಿಳಿಯದೆ ಭಾರತದ ಏಳ್ಗೆಯಾಗದು.

ಬರೆಹ :—

ತನ್ನ ನಾಡಿನಿಂದ ದೂರ ಪ್ರದೇಶದಲ್ಲಿ ಹೋಗಿ ನಿಂತು ನಾಲ್ಕಾರು ತಿಂಗಳಾಯಿತು. ಅವನಿಗೆ ಪಕ್ಕನೆ ತಮ್ಮ ಪ್ರಾಂತದ ಒಬ್ಬ ಅಪರಿಚಿತ ಗೃಹಸ್ಥರೊಡನೆ ಮಾತನಾಡುವ ಪ್ರಸಂಗ ಬರುತ್ತದೆ. ಅವನಿಗಾದ ಸಂತಸವನ್ನು ಚಿತ್ರಿಸುವ ಒಂದು ಪ್ರಸಂಗವನ್ನು ವರ್ಣಿಸಿರಿ.

# ೨. ಸಾರಾಸಾರ ವಿಚಾರ

## (ಲಾವಣಿ ಧಾಟಿ)

[ಏಕಪಕ್ಷೀಯ ಅಭಿಮಾನ, ಪಕ್ಷಾಂಧತೆಯಿಂದ ಸತ್ಯಕ್ಕೆ ಎರವಾಗಬೇಕಾಗುತ್ತದೆ. ಸಾರಾಸಾರ ವಿಚಾರವು ವಿವೇಕಿಯ ಲಕ್ಷಣ. ವಿವೇಕಿಯು ಎಲ್ಲ ನಿಟ್ಟಿನಿಂದಲೂ ನಿಡಿದಾಗಿ ನೋಡಿ, ಯುಕ್ತವಾದುದನ್ನು ಎಲ್ಲಿದ್ದಲ್ಲಿಂದ ಸ್ವೀಕರಿಸುತ್ತಾನೆ. ಹಳೆಯದೆಲ್ಲವೂ ಹೊನ್ನು ಅಥವಾ ಹೊಸತೆಲ್ಲವೂ ಚೆನ್ನು ಎಂಬೀ ಬಗೆಯ ಹಟವಾದದಲ್ಲಿ ಹುರುಳಿಲ್ಲವೆಂದು ಹೇಳುವ ಲಾವಣೀ ಧಾಟಿಯ ಹೊಸ ಕವಿತೆ.]

## ಹೊಸತು

(೧)

ಸಾರಾಸಾರ ವಿಚಾರ ಮಾಡಿದರ
ಹೊಸದ ಎಲ್ಲವೀ ನೆಲದಾಗ !
ಹೂವು ಬಿದ್ದದೆಯೊ ವಿಶ್ವವೆಲ್ಲದಿದು
ಹಳೆಯವೆಂಬುದರ ಕಣ್ಣಾಗ !

(೨)

ಬೀಜ ಮಾಯವಾಗಿ ಸಸಿಯಾಗತsದ
ಹೂವು ಹುಟ್ಟತsದ ತಲಿಯಾಗ !
ಹೂವಿನ ಹೊಟ್ಯಾಗ ತೆನೀ ಹುಟ್ಟತsದ
ಹೊಸಾ ಕಾಳು ತೆನಿ ಹೊಟ್ಯಾಗ !

(೩)

ದಿನಾದಿನಾ ಹೊಸ-ಹೊಸದು ಹೂಬಿಸಿಲು
ಹುಣ್ಣಿಹುಣ್ಣಿವಿಗೆ ಹೊಸಾ ಪರಿ
ಸಂಜಿ-ಸಂಜಿಗೂ ಹೊಸಾ ಚಿಕ್ಕಿಗಳು
ಮೋಡ-ಮೋಡದೊಳು ಹೊಸಾ ಪರಿ !

(೪)

ವಸಂತಋತುವಿನ ಸಿರಿಯ ನೋಡಿರೋ
ಹೊಸಾ ಚಿಗುರು ಗಿಡ ಗಿಡದಾಗ !
ಶ್ರಾವಣ ಮಾಸದ ಸೊಗಸು ನೋಡಿರೋ
ಹೊಸಾ ಹಸರು ನೆಲ-ನೆಲದಾಗ !

(೫)

ಹೊಳೀಯೊಳಗ ಹೊಸ-ಹೊಸಾ ತೆರೀ ನಿಮಿ-
ನಿಮಿಷದೊಳಗ ಹೊಸದೊಂದು ಪರಿ !
ತೆರೀ ತೆರೀಯಾಗ ಹೊಸಾ ಸುಳಿ ಪ್ರತಿ-
ಯೊಂದು ತೆರಿಯ ಮ್ಯಾಲ್ ಹೊಸಾ ನೊರೀ !

(೬)

ಶಬ್ದ-ಶಬ್ದದೊಳು ಹೊಸದೆ ಅರ್ಥಗಳುರಿ
ಕಾವ್ಯ-ಕಾವ್ಯದೊಳು ಹೊಸಾ ರಸಾ !
ಹೊಸ-ಹೊಸಾ ಕಾವ್ಯದಿ ಬಂದ ಭಾವಗಳು
ಹೊತ್ತು-ಹೊತ್ತಿಗೂ ಹಸಾ-ಹಸಾ !

(೭)

ಹೊಸತನದಿಂದಲಿ ತುಂಬಿ ತುಳುಕತ್ತದ
ವಿಶ್ವರೂಪವಿದು ಬಲುಸೊಗಸಾ !
ಮಕ್ಕಳ ಮುಖದೊಳು ಹೊಳೆವ ನಗೀ ಹಾಂಗ
ನಿಮಿಷ-ನಿಮಿಷಕೂ ಹೊಸಾ-ಹೊಸಾ !

## ಹಳತು

(೧)

ಸಾರಾ ಸಾರಾ ವಿಚಾರ್ ಮಾಡಿದರ
ಧರಣಿಯೊಳಗ ಹೊಸತೇನಿಲ್ಲ !
ಹಳೇ ಮಾತಿಗೊಂದು ಹೊಸಾ ಹೆಸರು ಹಾಕಿ
ಹಿಗ್ಗಿ ಓದತದ ಜನವೆಲ್ಲಾ !

(೨)

ಹಳೆಯ ಜೋಳ ನೆಲದೊಳಗೆ ಬಿತ್ತಿದರ
ಹೊಸಾ ದಂಟು ಕಾಣುವದು ಖರೆ !
ಹೊಸಾ ದಂಟು ಹೊಸಾ ತೆನೀ, ಹೊಸಾ ಬೆಳೀ
ಹೊಸಾ ಕಾಳು ಅಂಬೋದು ಖರೆ !

(೩)

ಹಳೆಯ ಕುಸುಬಿ ಹಾಕಿ ಹಳೆಯ ಗಾಣದಾಗ
ಹಿಂಡಿಬಿಡಲು ಸಂಜಿಯ ತನಕಾ
ಹೊಸಾ ಎಣ್ಣಿಯೊಂದು ನೆಕ್ಕಿ ನೆಕ್ಕತಾರ
ಹೊಸಾ ಜನರು ಬದುಕಿರುವನಕಾ !

(೪)

ಹಳೆಯ ಹತ್ತಿಯನು ನೂತು ನೇಯ್ದು ಚೌ-
ಕಾಗಿ ಹರಿದು ಬಣ್ಣವ ಮಾಡಿ
ಹೊಸಾ ಸೀರಿ ಹೊಸ-ಹೊಸಾ ಕುಪ್ಪಸವ-
ನುಟ್ಟು ಲೋಕ ಮೆರೀತsದ ಹಾಡಿ !

(೫)

ಹಳೆಯ ಎಮ್ಮೆಯನು ಹಿಂಡಿ ಹಾಲಿನೊಳು
ಹಾಕಿ ಹಳೆಯ ಜಿಗಿಟಿನ ಬೆಲ್ಲಾ,
ಹೊಸಾ ಖೀರು ಪರಮಾನ್ನವೆಂದು ಬರೆ
ಸುರಿದೆ ಸುರಿಯುತsದ ಜನವೆಲ್ಲ !

(೬)

ಹಳೆಯ ಶಬ್ದಗಳ ಹಳೆಯ ಧಾಟಿಯೊಳು
ಹೆಣೆದು ಕಟ್ಟುತಾರ ಕೀಳ್ಗವನಾ !
ಹೊಸ ಶಬ್ದ, ಹೊಸ ರಸಾ, ಹೊಸಾ ಕವಿ-
ಯೆಂದು ಹಾಡತಾರ ಹಳೆ ಕವನಾ !

(೭)

ಎಲ್ಲಿ ನೋಡಿದರ ಹಳೆಯತನವು ತಾ
ತುಂಬಿ ತುಳುಕತsದ ಜಗದಾಗ
ಸೂರ್ಯ-ಚಂದ್ರ-ನಕ್ಷತ್ರ-ವೃಕ್ಷ-ಹೂ-
ಬಳ್ಳಿ ಹೊಸಾದೇನಿವರಾಗ ?

ಇರೋದು

(೧)

ಸಾರಾ ಸಾರಾ ವಿಚಾರ್ ಮಾಡಿದರ
ಹಳೆಯದೆಲ್ಲವಿದು ಹೊಸಾ ಹೊಸಾ !
ಹೊಸದು ಹಳೇದೆಂಬ ವಿಚಾರ ಸುಳ್ಳದು
ತತ್ತ್ವ ತಿಳಿಯಬೇಕು ತುಸಾ ತುಸಾ !

(೨)

ನಿರಾಕಾರ ಪರಮಾತ್ಮ ತುಂಬಿಹನು
ವಿಶ್ವಚಕ್ರದೊಳಗೂ ಹೊರಗೂ !
ನಿತ್ಯ ನಿಂತುಕೊಂಡು ವಿಶ್ವ ನಡಸತಾನ
ಬೆರಸಿ ಹಳೇದರ ಹೊಸದಾಗ !

(೩)

ಹುಲುಸು ಮಣ್ಣಿನ್ಯಾಗ ಬೀಜ ಬಿತ್ತಿದರ
ಮಳೀ ಹೊಡೆದರೂ ರಪಾರಪಾ–
ಬೆಳೀ ತುಂಬಿ ಹೊಲ ಹೊನ್ನು ಆಗತದ
ನೆಲಾ ತೊಯಿದರೂ ತಪಾತಪಾ !

(೪)

ನೆಲಾ ಮಣ್ಣು ಮಳಿ ನೇಮ ಒಟ್ಟುಗೂಡಿ
ಬೀಜ ಆಗತದ ಹೊಸಾ ಸಸಿ !
ನೇಮವೆಂದರೇ ಧರ್ಮರೂಪದಿಂದ
ದೇವ ಮಾಡತಾನ ಹೊಸಾ ಕಸಿ !

(೫)

ಸೂರ್ಯ-ಚಂದ್ರ-ನಕ್ಷತ್ರ-ಚಿಕ್ಕಿ-ಗ್ರಹ
ಎಲ್ಲ ದೇವರಿಗೆ ಆಧೀನಾ !
ಒಂದೆ ಶಕ್ತಿಯಿಂದ ನಡೆವ ಮಾತಿನ್ಯಾಗ
ಹೊಸದು ಹಳೇದೆಂದರೇನಣ್ಣಾ !

(೬)

ಮಾಡಿ ಮಾಡಿಸುವ ಶಕ್ತಿ ನೋಡಿರೋ
ಆದಿಶಕ್ತಿ ಬಲು ಪುರಾತನಾ !
ಅರಳಿಯೋಡತದ ತಗ್ಗಿ ಬಾಗುತದ
ಪುಡಿಪುಡಿಯಾಗ್ತದ ಪ್ರತಿಕ್ಷಣಾ!

(೭)

ಶ್ರೀಧರ ಕಾವ್ಯದ ಭಾವ-ರಸಗಳ್ಹಾಂಗ
ಹೊಸಾ ವಿಶ್ವವಿದು ತಿಳಿರಣ್ಣಾ !
ಪ್ರೇಮದ ಕಣ್ಣಿಂದೋದಿ ನೋಡಿದರ
ನಿತ್ಯ ಹೊಸದು ವಿಶ್ವದ ಬಣ್ಣಾ !

—ಶ್ರೀಧರ ಖಾನೋಳಕರ

## ಅಭ್ಯಸನಗಳು

**ಪ್ರಶ್ನೆಗಳು:-**

೧. ಬೆಳೆಯಲ್ಲಿ ಹೊಸತನವು ಹೇಗೆ ಕಂಗೊಳಿಸುವದು ?

೨. ಋತುಗಳಲ್ಲಿ ಯಾವ ಬಗೆಯ ಹೊಸತನವು ಕಾಣುವದು ?

೩. ಹಳೆಯದರ ಮೇಲೆಯೇ ಹೊಸದು ನಿಂತಿದೆ ಎಂಬುದನ್ನು ಕವಿಯು ಹೇಗೆ ತೋರಿಸಿದ್ದಾನೆ ?

೪. ಹಳೆಯದರಲ್ಲಿ ಹೊಸತನ, ಹೊಸದರಲ್ಲಿ ಹಳೆಯತನ ಹೊಂದಿಕೊಂಡ ಬಗೆ ಯಾವುದು ?

**ಭಾಷಾಭ್ಯಾಸ:-**

ಇದು ಲಾವಣಿಯ ಶೈಲಿ. ಲಾವಣಿಯಲ್ಲಿರುವ ಪದದ ಜೋಡಣೆಯ ರೀತಿ ಕವಿತೆ ಮತ್ತು ಭಾವಗೀತೆಗಳಿಂತ ಬೇರೆಯಾಗಿರುತ್ತದೆ. ಹಳ್ಳಿಗರ ಬಳಕೆಯ ಮಾತುಗಳು ಇದರಲ್ಲಿ ಹೆಚ್ಚು ಕಾಣಿಸಿಕೊಳ್ಳುತ್ತವೆ. ಇಂತಹ ಮಾತುಗಳನ್ನು ಈ ಕವನದಿಂದ ಎತ್ತಿತೋರಿಸಿರಿ.

**ಶಬ್ದವಿಚಾರ :—**

೧. ಕಣ್ಣು— ಪ್ರೇಮದ ಕಣ್ಣು, ಕರುಡುಗಣ್ಣು— ಹೀಗೆ ಕಣ್ಣಿಗೆ ಕೆಲವು ವಿಶೇಷಣಗಳನ್ನು ಹಚ್ಚಿ ಹೇಳಿರಿ.

೨. ಹೂ, ಬಿರು, ಉರಿ, ಎಳೆ ಮೊದಲಾದ ವಿಶೇಷಣಗಳನ್ನು ಹಚ್ಚಿ ಬಿಸಿಲಿನ ಇಳಿಕೆಯ ಕ್ರಮದಲ್ಲಿ ಬರೆಯಿರಿ.

೩. ಹೊಸ, ಹಳೆ, ಎಳೆ- ಇವುಗಳ ನೆರವಿನಿಂದ ಹೊಸ ಶಬ್ದಗಳನ್ನು ರಚಿಸಿರಿ.

**ವಾಕ್-ಶಿಕ್ಷಣ :—**

ನಿಮ್ಮ ವರ್ಗದಲ್ಲಿ ಮೂರು ವಿಭಾಗಗಳನ್ನು ಮಾಡಿ ಒಂದೊಂದು ವಿಭಾಗದವರು ಒಂದೊಂದು ಪಕ್ಷವನ್ನು ಎತ್ತಿ ಲಾವಣಿಯ ಧಾಟಿಯಲ್ಲಿ ಈ ಕವನವನ್ನು ಹೇಳಿರಿ.

**ಚರ್ಚೆ :—**

ಸೃಷ್ಟಿಯು ಋತುಋತುವಿಗೂ ಹೊಸತನವನ್ನು ತೋರುವಂತೆ ಮನುಷ್ಯನಲ್ಲಿ ಹಾಗೆ ನಾವೀನ್ಯವೇನೂ ವ್ಯಕ್ತವಾಗುವದಿಲ್ಲ. ಇದು ನಿಜವೇ ?

**ಬರೆಹ :—**

ಸಮುದ್ರದ ದರ್ಶನದಲ್ಲಿ ಪ್ರತಿಕ್ಷಣಕ್ಕೆ ಕಾಣುವ ಹೊಸತನ- ಇದನ್ನು ಕುರಿತು ಬರೆಯಿರಿ.

# ೩. ತ್ರೈರಾಶಿಕ

ವಿಚಾರ ಮಾಡುವ ಸರಿಯಾದ ಕ್ರಮವನ್ನು ಅರಿಯದವರಿಂದ ಆಗುವ ತಪ್ಪನು, ಬಹಳ ವಿನೋದಕರವಾಗಿ ಇಲ್ಲಿ ಚಿತ್ರಿಸಿದೆ. ]

ನಾಕಕ್ಕೆರಡಾದರೆ, ಎರಡಕ್ಕೆ
ಆಗುವದೋ ಒಂದು
ಅಣ್ಣಾ, ಗುರುಗಳು ಕಲಿಸಿದರೆಮಗೆ
ತ್ರೈರಾಶಿಕ ಇಂದು.
ದನಗಳಿಗೆಲ್ಲಾ ಕೋಡುಗಳೆರಡು
ಕಾಲುಗಳಿವೆ ನಾಕು
ಎರಡೇ ಕಾಲುಗಳಿರುವೀ ನಮಗೆ
ಕೋಡೊಂದಿರಬೇಕು !
ಆದರೆ ನಮಗೆ ಕೋಡೇ ಇಲ್ಲ
ಅಣ್ಣಾ, ಸಾಲೆಯ ಗುರುಗಳು ನಮಗೆ
ಕಲಿಸಿದರೋ ಸುಳ್ಳು.

ವ್ಹಿ. ಜಿ. ಭಟ್ಟ

## ಅಭ್ಯಸನಗಳು

ಪ್ರಶ್ನೆಗಳು :—

ಇದೊಂದು ಒಡಪಿನ ಪ್ರಕಾರ. ವಿಚಿತ್ರವಾದ ಅಸಂಗತವಾದ ಮಾತುಗಳಲ್ಲಿ ಹುದುಗಿರುವ ಮಾತನ್ನು ಅರಿತುಕೊಂಬ ಜಾಣ್ಮೆಯು ಇಲ್ಲದವರು ಬಾಳಿನಲ್ಲಿ ಅಡಿಗಡಿಗೆ ಮೋಸಹೋಗಬೇಕಾಗುತ್ತದೆ. ಒಡಪುಗಳನ್ನು ಬಿಡಿಸುವ ಪ್ರೀತಿ ಹುಡುಗರಲ್ಲಿ ಚಿಕ್ಕಂದಿನಿಂದಲೇ ಕಾಣಿಸಿಕೊಳ್ಳುತ್ತದೆ. ತಲೆಯಲ್ಲಿ ಜಡೆಯುಂಟು, ತಾಪಸಿಯಲ್ಲ ; ಮುಕ್ಕಣ್ಣುಗಳಿದ್ದರೂ ಶಿವನಲ್ಲ ; ಇಂತಹರು ಯಾರು ? ಎಂಬಲ್ಲಿ ತೆಂಗಿನ ಕಾಯನ್ನು ವರ್ಣಿಸಿದ ರೀತಿ ವಿನೋದಕರವೂ ಕುತೂಹಲಕಾರಿಯೂ ಆಗಿದೆ. ಇದರಂತೆ ಪ್ರಸ್ತುತ ಕವಿತೆಯೂ ಒಂದು ಒಡಪು. ಇದರಲ್ಲಿ ತೊಡಕು ಎಲ್ಲಿದೆ ನೋಡಿರಿ.

೧. ಕೋಡುಗಳಿರುವ ಪ್ರಾಣಿಗಳು ಯಾವವು ?
೨. ಕೋಡಿಲ್ಲದ ಪ್ರಾಣಿಗಳು ಯಾವವು ?
೩. ಕಾಲುಗಳಿರುವ ಪ್ರಾಣಿಗಳಿಗೆಲ್ಲ ಕೋಡುಗಳು ಇದ್ದೇ ಇವೆಯೋ ?
೪. ಕಾಲಿನ ಸಂಖ್ಯೆಯ ಮೇಲೆ ಕೋಡುಗಳ ಸಂಖ್ಯೆ ಅವಲಂಬಿಸಿದೆಯೋ ?

೫. ಹಾಗಾದರೆ ತ್ರೈರಾಶಿಕದಲ್ಲಿ (ರೂ : ರೂ : : ಹಣ್ಣು : ?) ಮೊದಲಿನ ಎರಡೂ ಸಮಾನಪಾದಗಳಿದ್ದರೆ ಇಷ್ಟವಾದ ಉತ್ತರವು ದೊರೆಯಬೇಕಲ್ಲವೆ ?

೬. ಇದರಿಂದ ಇಲ್ಲಿ ಹುದುಗಿರುವ ದೋಷವನ್ನು ಕಂಡು ಹಿಡಿಯಿರಿ.

ಭಾಷಾಭ್ಯಾಸ :—

ಇದೊಂದು ವಿನೋದಪೂರ್ಣ ಪದ್ಯ. ವಿನೋದದ ಮಡಲಿನಲ್ಲಿ, ನಾವು ಸಾಮಾನ್ಯವಾಗಿ ಮಾಡುವ ವಿಚಾರಸರಣಿಯ ದೋಷವನ್ನು ಕಾಣಬಹುದು.

ವಾಕ್-ಶಿಕ್ಷಣ :—

೧. ಕಲ್ಲರಳಿ ಹೂವಾಗಿ । ಎಲ್ಲರಿಗೆ ಬೇಕಾಗಿ
ಮಲ್ಲಿಕಾರ್ಜುನನ । ಶಿಖರಕ್ಕೆ ಬೆಳಕಾಗಿ
ಬಲ್ಲವರು ಹೇಳಿ । ಸರ್ವಜ್ಞ.
ಇಂತಹ ಒಗಟುಗಳ ಸ್ಪರ್ಧೆಯನ್ನು ಏರ್ಪಡಿಸಿರಿ.

ಚರ್ಚೆ :—

೧. ರಾಮಾಯಣ ಕಾಲದ ಮಂಗಗಳು ಮನುಷ್ಯರಂತೆ ಮಾತಾಡುತ್ತಿದ್ದವು.

ಬರೆಹ :—

ಪ್ರಮಾಣಿಸಿ ನೋಡದೆ ನಂಬಿದರೆ ಹಾನಿಗೆ ಒಳಗಾಗಬೇಕಾಗುತ್ತದೆ, ಎಂಬುದನ್ನು ಪುಷ್ಟೀಕರಿಸುವ ಒಂದು ಪ್ರಸಂಗವನ್ನು ವರ್ಣಿಸಿರಿ.

# ೪. ಕುಂಬಾರ ಗುಂಡಯ್ಯನ ಕುಣಿತ

[ ಭಕ್ತಿಯ ಭಾವಾವೇಶದ ಪರಿಣಾಮಕಾರಿಯಾದ ಶೈಲಿಗಿದು ಶ್ರೇಷ್ಠ ಮಾದರಿಯನ್ನಿಲ್ಲಿ ಕಾಣಬಹುದು. ]

ಮಂದಾನಿಲ॥ ಕೊರ್ಬಿದನುರ್ಬಿದನುಲಿದಾಳ್ದಿರ್ದಂ।
ಸರ್ಬ ಸುಖಂಗಳ್ ಸಲೆ ಬರುತಿರ್ದಂ ॥

ಕುಣಿದಾಡುತೆ ಮಡಕೆಗಳಂ ಬಾರಿಸಿ ।
ಕುಣಿದಾಡುತೆ ಕುಡಿಕೆಗಳಂ ಬಾರಿಸಿ ॥

ಶಿವನಂ ಸುತ್ತಿ ಬರುತ್ತುಂ ಬಾರಿಸಿ ।
ಭವನಂ ಬಲವಂದೊಲವಿಂ ಬಾರಿಸಿ ॥

ಕುಣಿಯುತ ಕೊರಲೆತ್ತುತೆ ನೆರೆ ತೂಗುತೆ ।
ತೊನೆಯುತೆ ತೂಗಾಡುತೆ ಸುಖಿಯಾಗುತೆ ॥

ಕೊಂಕುತೆ ಬಿಂಕುತೆ ಹಾರೈಸುತ್ತುಂ ।
ಬಿಂಕಂ ಬೆತ್ತುಬುಬೆಂದಾಡುತ್ತುಂ ॥

ಆಡುವ ಗುಂಡಯ್ಯನ ಹೊಸ ನೃತ್ಯಂ ।
ನೋಡುವ ಶಿವನಂ ಮುಟ್ಟಿತು ಸತ್ಯಂ ॥

ಒಳಗಾಡಿದೆನಿನಿತುಂ ದಿನವೆನಿತುಂ ।
ಇಳೆಯರಿಯಲ್ ಹೊರಗಾಡುವೆ ನೆನಿತುಂ ॥

ದಶಭುಜವುಂ ದಿಕ್ತಟಕಂ ಪಸರಿಸಿ ।
ಎಸೆವ ಕರಂಗಳನೆತ್ತಲ್ ನೇಮಿಸಿ ॥

ಒಂದು ಪದಂ ಪಾತಾಳವನೊತ್ತಲ್ ।
ಒಂದು ಪದಂ ಬ್ರಹ್ಮಾಂಡವನೆತ್ತಲ್ ॥

ಜಡೆಗಳ್ ಬೆಂಬಳಿವಿಡಿದಾಡುತ್ತಿರೆ ।
ಮುಡಿಯೊಳ್ ಸುರನದಿ ತುಳ್ಕಾಡುತ್ತಿರೆ ॥

ಕಡೆಯೋಳ್ ಶಶಿಕಳೆಯಲ್ಲಾಡುತ್ತಿರೆ ।
ಕಡು ಚೆಲ್ವಳಕಂ ಕುಣಿದಾಡುತ್ತಿರೆ ॥

ಮಿಸುಗುವ ಡಮರುಗ ಢಂ ಢಂ ಢಣರನೆ ।
ತಿಸುಳದಿ ಹರಿಯುವ ತಾರಂ ತಿರ್‍ರನೆ ॥

ತಿರುಗುತ್ತಿರೆಯಹಿಗಳ್ ಹೆಡೆಯೆತ್ತಲ್ ।
ಕರಿಯ ತೊದಲ್ ನಭವಂ ಜೋಹರಿಸಲ್ ॥

ಸರಸಿಜಭವನ ಶಿರಂ ಬೊಬ್ಬಿಡುತಿರೆ
ಸುರರ ಶಿರೋಮಾಲೆಗಳುಲಿಯುತ್ತಿರೆ ॥

ಪೊಂಗೆಜ್ಜೆಗಳ ರವಂ ಘುಲುಘುಲಕೆನೆ ।
ತೊಂಗಲ ಘಂಟೆ ಢಣಂ ಢಂ ಢಣಲೆನೆ ॥

ಆಡಿದನಾಡಿದನಾ ಹಾ ಶಂಕರ ।
ನಾಡಿದನಾ ದುಂಡನ ಮುಂದೀಶ್ವರ ॥

ಹರಿಹರಕವಿ

# ಅಭ್ಯಸನಗಳು

ಪ್ರಶ್ನೆಗಳು:-

೧. ಗುಂಡಯ್ಯನು ಕುಣಿಯುವದರಲ್ಲಿ ಹೇಗೆ ತನ್ಮಯನಾಗಿದ್ದನು ?
೨. ಗುಂಡಯ್ಯನೊಡನೆ ಶಿವನು ಕುಣಿಯಲು ಏಕೆ ಸಿದ್ಧನಾದನು ?
೩. ಕುಣಿಯುವಾಗಿನ ಸ್ಥಿತಿಯನ್ನು ಬಣ್ಣಿಸಿರಿ.

ಭಾಷಾಭ್ಯಾಸ:-

೧. ಕುಣಿತದ ಗತಿಗೆ ಅನುರೂಪವಾದ ಶೈಲಿಯು ಇಲ್ಲಿ ಇರುವದು.
೨. ಪ್ರಭುದೇವರ, ಅಕ್ಕಮಹಾದೇವಿಯರ ವಚನಗಳಲ್ಲಿಯ ಸೂತ್ರ ರೂಪದ ಶೈಲಿಯ ಸೊಗಸು ಒಂದು ಬಗೆ, ರಗಳೆಯೊಳಗಿನ ನಾದಮಾಧುರ್ಯದ ಸುಲಭ ಶೈಲಿಯ ಅಂದ ಇನ್ನೊಂದು ಬಗೆ.

ಶಬ್ದವಿಚಾರ :—

೧. ತುಳುಕಾಡು, ಅಲ್ಲಾಡು, ಎಂಬ ಸಹಾಯಕ ಕ್ರಿಯಾಪದದೊಡನೆ ಸಿದ್ಧವಾದ ಬೇರೆ ಐದು ಧಾತುಗಳನ್ನು ಹೇಳಿರಿ.
೨. ಸಬ್ಬ, ತಿಸುಳ, ಜಡೆ, ಬೊಮ್ಮ,ಇವುಗಳ ತತ್ಸಮ ರೂಪಗಳನ್ನು ಹೇಳಿರಿ.
೩. ತೊನೆ-ತೊನಸೆ, ಜಿಗಿ-ಜಿಟ್ಟಿ, ಚಿಗಿ (ಜಿಗಿ) ಚಿಗರೆ, ಹೋರು-ಹೋರಿ,ಇಂತಹ ಪ್ರಾಣಿವಾಚಕ ಶಬ್ದಗಳಲ್ಲಿಯ ಹೆಸರುಗಳಲ್ಲಿಯ ಸೊಬಗು ಮನನೀಯವಾಗಿದೆ.

ವಾಕ್-ಶಿಕ್ಷಣ :—

೧. ಹರಿಹರ ಕವಿಯು ಬರೆದ ಕುಂಬಾರ ಗುಂಡಯ್ಯನ ರಗಳೆ ಮತ್ತು ಬೇರೆ ಕೆಲವು ರಗಳೆಗಳನ್ನು ಓದಿರಿ.
೨. ಈ ರಗಳೆಯಲ್ಲಿ ನೀವು ಮೆಚ್ಚಿದ ಸಾಲುಗಳನ್ನು ಹೇಳಿರಿ.

ಚರ್ಚೆ :—

ಭಕ್ತಿಯಿಂದ ವಿಚಾರದ ಬೆಳವಣಿಗೆಯಾಗುವದಿಲ್ಲ. ನಿಜವೇ ?

ಬರೆಹ :—

೧. ನೀವು ನೋಡಿದ ಒಂದು ನೃತ್ಯವನ್ನು ಬಣ್ಣಿಸಿರಿ.
೨. ನೃತ್ಯಕಲೆಯ ಶಿಕ್ಷಣ ಪಡೆಯುವದರಿಂದ ಆಗುವ ಲಾಭವನ್ನು ಕುರಿತು ಬರೆಯಿರಿ.

# ೫. ಮೇಘದೂತ

[ಕಾಲಿದಾಸನ ಮೇಘದೂತವು ಸಂಸ್ಕೃತ ಸಾಹಿತ್ಯದೊಳಗಿನ ಒಂದು ಅಮರ ಕೃತಿ. ನಾಲ್ಕೈದು ಕವಿಗಳು ಇದನ್ನು ಕನ್ನಡಿಸಿದ್ದಾರೆ. ಇದರಿಂದ ಈ ಕಾವ್ಯವು ರಸಿಕ ಕವಿಗಳ ಮನಸ್ಸನ್ನು ಎಷ್ಟೊಂದು ಸೆಳೆದುಕೊಂಡಿದೆಯೆಂಬುದು ವ್ಯಕ್ತವಾಗುತ್ತದೆ. ಆ ಸರಸ ಕೃತಿಯ ಸ್ವಲ್ಪ ಪರಿಚಯವಾಗಬೇಕೆಂದು ಶ್ರೀ ಅಂಬಿಕಾತನಯದತ್ತರ ಕನ್ನಡ ಮೇಘದೂತದಿಂದ ಪ್ರಾರಂಭದ ಕೆಲವು ಪದ್ಯಗಳನ್ನಿಲ್ಲಿ ಕೊಡಲಾಗಿದೆ.]

(೧)

ನಮೋ ಎಂಬೆ ಕವಿಗುರುವೆ ತಣಿಸಿತೋ ಅಮರ-ದೂತ-ಮೇಘಾ
ನಿನ್ನ ಇನಿಯಳಂತೆಯೇ ನನ್ನನೂ ದಿವ್ಯ ಕಾವ್ಯದೋಘಾ ॥
ಇಂದ್ರಮಾಯೆಯನು ಭಾವಛಾಯೆಯನು ನೂರು ಕಡೆಗೆ ಚೆಲ್ಲಿ
ಅಮೃತಗರೆವುದಿದು ರಸಿಕ ಹೃದಯದಲಿ ದಿಗ್ದಿಗಂತದಲ್ಲಿ ॥

(೨)

ಒಬ್ಬ ಯಕ್ಷ ತನ್ನೊಡೆಯನಿಂದ ನಲ್ಲೆಯನು ಆಗಲಿ ಬೆಂದು
ಶಪಿತ ವರುಷವನು ಕಳೆಯಲಾಗದೇ ಮಹಿಮೆ ಕಳೆದುಕೊಂಡು ॥
ಜನಕತನಯೆ ಮಿಂದುದಕಗಳಲಿ ತಣ್ಣೆಳಲ ಅಂಗಳಲ್ಲಿ
ವಸತಿನಿಂದನೋ ರಾಮಗಿರಿಯ ಪುಣ್ಯಾಶ್ರಮಂಗಳಲ್ಲಿ ॥

(೩)

ಅಗಲಿ ಇದ್ದರೂ ಆಸೆಗೊಂಡಿರಲು ಗಿರಿಯೊಳಂತು ಇಂತು
ಕೆಲವೆ ತಿಂಗಳಲಿ ಚಿನ್ನಕಡಗ ಮೊಳಕೈಗೆ ಸರಿದು ಬಂತು ॥
ಕಾರಹುಣ್ಣಿವೆಯ ಮಾರನೆಯ ದಿನವೆ ಮೋಡಕೋಡನಪ್ಪಿ
ಕಂಡಿತೊಡ್ಡಿನೊಡ ಡಿಕ್ಕಿಯಾಡುವ ಆನೆ ಬೆಡಗನೊಪ್ಪಿ ॥

(೪)

ಮೋಡ ನೋಡಿ ಮನಸಾಗಿ ನಿಂತನೋ ಹೇಗೊ ಏನೋ ಕಂಡು
ರಾಜರಾಜನನುಚರನು ಇದ್ದ ಕಣ್ಣೀರ ನುಂಗಿಕೊಂಡು ॥
ಮೋಡ ಕಂಡೊಡನೆ ಬೇರೆ ಬಗೆಯಹುದು ಸುಖಿಗು ಎಂತೊ ಏಕೋ
ಕೊರಳ-ಗೆಳತಿ ದೂರುಳಿದ ಮೇಲೆ ಆ ಗತಿಯ ಹೇಳಲೇಕೋ ॥

(೫)

ಬಂತು ಶ್ರಾವಣಾ ಎಂತು ಬದುಕುವಳೊ ಮಡದಿ ಜೀವ ಉಳಿಸಿ
ಮೋಡದೊಡನೆ ತನ್ನೊಳಿತಿ ನೊಸಗೆಯನು ಅಂತೆ ಕಳಿಸತಿಳಿಸಿ ॥
ಬೆಟ್ಟ-ಮಲ್ಲಿಗೆಯ ಹೊಚ್ಚ ಹೂವಿನೊಡ ಕಾಲನೀರ ನೀಡಿ
ಇದಿರುಗೊಂಡು ಬರಮಾಡಿಕೊಂಡ ಒಲದೊಲಿವ ಮಾತನಾಡಿ ॥

(೬)

ಗಾಳಿ-ನೀರು-ಉಗೆ-ಬೆಂಕಿಗೂಡಿ ಆಗಿರುವ ಮೇಘವೆತ್ತ
ಎತ್ತ ಮಾತುಗಳು ? ಮೋಡ ಜೀವವೇ ? ಏನೊ ಎತ್ತೊ ಚಿತ್ತ ॥
ಭೇದವೆಣಿಸದೆಯೆ ಕಂಡ ಮೋಡವನೆ ಬೇಡಿಕೊಂಡ ತಾನು
ಜಡವೊ ಚೇತನವೊ ಬಯಕೆಮರುಳರಿಗೆ ಯಾವ ವಸ್ತುವೇನು ? ॥

(೭)

ಪುಷ್ಕರಾದಿ ಜಗಬಲ್ಲ ವಂಶದವನಲ್ಲಿ, ಬಲ್ಲೆ ನಾನು
ಕಾಮರೂಪಿಯೇ ಪ್ರಕೃತಿ-ಪುರುಷನೋ ಇಂದ್ರನಲ್ಲಿ ನೀನು ॥
ದೈವ-ಬಂಧು ನೀ ಬೇಡೆ ಕೆಡುಕರಲಿ ಬಯಕೆಗೂಡಿಯೇನಃ ?
ಲೇಸು ಒಳ್ಳೆವರ ಬೇಡಿಕೊಂಬುದೇ ವ್ಯರ್ಥವಾದರೂನು ॥

(೮)

ನೀರೆ ಕಾದವಗೆ ಶರಣು ಅಲ್ಲವೇ ? ಇನಿಯಳೆಡೆಗೆ ಓತು
ಒಯ್ಯೊ ಧನಪತಿಯ ಮುನಿಸಿಗೀಡಾಗಿ ಅಗಲಿದವನ ಮಾತು ॥
ಯಕ್ಷರಾಜನಾ ರಾಜಧಾನಿ ಅಲಕೆಗೆಯೆ ಹೋಗು ನೀನು
ಅಲ್ಲಿ ಶಿವನ ಮುಡಿಚಂದ್ರ ತೊಳೆವ ಮಹಮನೆಯ ಮಾಟವೇನು ?

(೯)

ಎಷ್ಟು ದಿವಸ ಇನ್ನುಳಿದವೆಂದು ದಿನದಿನವು ಲೆಕ್ಕವಾಗಿ
ಜೀವ ಹಿಡಿದುಕೊಂಡಿರುವ ನಿನ್ನ ಅತ್ತಿಗೆಯ ನೋಡು ಹೋಗಿ ||
ನಾರಿ ಹೃದಯದಲಿ ನಾರಿನೆಳೆಯವೊಲು ಇಹುದು ಆಸೆಯೊಂದು
ಅಗಲಿದಾಗಲೇ ಕಳಚಿ ಬೀಳುವೆದೆ-ಹೂವ ಬಿಗಿದುಕೊಂಡು ॥

(೧೦)

ಹಾದಿ ಹೇಳುವೆನು ಕೇಳು ನಿನಗೆ ಅನುಕೂಲ ಪಯಣಕಾಗಿ
ಬಳಿಕ ನನ್ನ ಸಂದೇಶ ಕಿವಿಗೆ ಪರಿಣಮಿಸಲಮೃತವಾಗಿ ॥
ತೊಳಲಿ ಬಳಲಿ ಗಿರಿಶಿಖರಗಳಲಿ ಕಾಲಿಟ್ಟು ಸಾಗುವಾಗ
ದಣಿವ ತವಿಸು, ನೀರಿನಿಸೆ ಸವಿಸಿ ಆ ಹೊಳ್ಳ-ಕೊಳ್ಳದಾಗ ॥

(೧೧)

ಏಳು ರತುನಗಳ ಮೇಳಕೂಡಿ ಕಂಗೊಳಿಸುವಂತೆ ಮುಂದು
ಹುತ್ತದಿಂದ ಎದ್ದಿರುವದಲ್ಲಿ ಅಗೊ ಇಂದ್ರಧನುವದೊಂದು ॥
ನಿನ್ನ ಕಪ್ಪು ಮೈಗಪರ ಒಪ್ಪ ಖರಲೀಸು ಕಾಂತಿ ಬಂತು
ಗೋಪವೇಷದಾ ವಿಷ್ಣು ಗರಿಯು ಧರಿಸಿರಲು ಕಾಣುವಂತು ॥

(೧೨)

ಕುಡಿದು ಬಿಡುವರೋ ಕಣ್ಣಕುಡಿಗಳಲಿ ಬೆಳೆಗೆ ಬಂಧು ಎಂದು
ಹುಬ್ಬ ಹಾರಿಸುವ ಬಿಂಕವಿಲ್ಲದಾ ಹಳ್ಳಿ ಹೆಂಗಳೆಂದು ॥
ಆದೇ ಹಠಗಿ ನೆಲಗಂಪ ಹರಹುವಾ ಹೊಲದ ಮಾಳವೇರಿ
ನೀರ ತಳಿಸಿ ಹಗುರಾಗಿ ಉತ್ತರಕೆ ಮತ್ತೆ ಹೋಗು ಸಾರಿ ॥

—ಅಂಬಿಕಾತನಯದತ್ತ

## ಅಭ್ಯಾಸಗಳು

ಪ್ರಶ್ನೆಗಳು :—

೧. ಯಕ್ಷನು ರಾಮಗಿರಿಯ ಪುಣ್ಯಾಶ್ರಮಕ್ಕೆ ಏಕೆ ಬಂದನು ?
೨. ವಿರಹಿಯಾದ ಯಕ್ಷನ ಅವಸ್ಥೆಯನ್ನು ವರ್ಣಿಸಿರಿ.
೩. ಮೇಘದರ್ಶನದಿಂದ ಯಕ್ಷನ ಚಿತ್ತವು ವಿಕಾರವಾದುದೇಕೆ ?
೪. ಮೇಘನಿಂದ ಯಾವ ಸಂದೇಶವನ್ನು ಕಳುಹಿಸಲು ಆಲೋಚಿಸಿದನು ?
೫. ಮೇಘನನ್ನು ಒಲಿಯಿಸಿಕೊಳ್ಳಲು ಯಕ್ಷನು ಆಡಿದ ಮಾತುಗಳಾವವು ?
೬. ಮೇಘನ ಪ್ರವಾಸವು ಆಯಾಸವಿಲ್ಲದೆ ಹೇಗೆ ಸಾಗುವುದು ?

ಭಾಷಾಭ್ಯಾಸ :—

೧. ಬಯಕೆ-ಮರುಳರಿಗೆ ಯಾವ ವಸ್ತುವೇನು ?
೨. ಕೀಸು ಒಳ್ಳೆಯವರ ಬೇಡಿಕೊಂಬುದೇ ವ್ಯರ್ಥವಾದರೂನು. ಈ ಸಾಲುಗಳಲ್ಲಿಯ ವಿಚಾರವನ್ನು ಸ್ಪಷ್ಟೀಕರಿಸಿರಿ.
೩. ಯಕ್ಷನ ವಿರಹದುಃಖವನ್ನು ಬಿಂಬಿಸುವ ಸಾಲುಗಳನ್ನು ಗುರುತಿಸಿರಿ.

ಶಬ್ದವಿಚಾರ :—

೧. ಅಮೃತಗರೆ, ಕಣ್ಣೀರನುಂಗು, ಕಾಮರೂಪಿ, ಕಣ್ಣಕುಡಿ ಇವುಗಳ ಔಚಿತ್ಯವನ್ನು ಹೇಳಿರಿ.
೨. ಮಲ್ಲಿಗೆ- ಬೆಟ್ಟಮಲ್ಲಿಗೆ, ಹೀಗೆ ಮಲ್ಲಿಗೆಯ ಪ್ರಕಾರವನ್ನು ಹೇಳುವ ಕೆಲವು ವಿಶೇಷಣಗಳನ್ನು ಹೇಳಿರಿ.

ವಾಕ್-ಶಿಕ್ಷಣ :—

ನಿಮ್ಮ ತಾಯಿ ನಿಮ್ಮಿಂದ ಕೆಲಸ ಮಾಡಿಸಿ ಕೊಳ್ಳುವಾಗ ನಿಮ್ಮನ್ನು ಮೆಚ್ಚಿಸುವಂತೆ ಮಾತನಾಡುವ ಪ್ರಸಂಗವನ್ನು ಅಭಿನಯಿಸಿರಿ.

**ಚರ್ಚೆ :—**

ಮೇಘದ ಮೂಲಕ ಸಂದೇಶವನ್ನು ಕಳಿಸುವದು ಅಸಾಧ್ಯ. ಆದರೆ ಇದನ್ನೋದುವಾಗ ಈ ಮಾತು ಅಸಂಭವವೆಂದು ಎನಿಸುವದಿಲ್ಲ. ಏಕೆ ?

**ಬರೆಹ :—**

ಕವಿತೆಯಿಂದ ದೊರೆಯುವ ಆನಂದ ಏತರಲ್ಲಿ ? ವಿಚಾರದಲ್ಲಿಯೋ ? ಭಾವದಲ್ಲಿಯೋ ? ನಾದದಲ್ಲಿಯೋ ?

# ೬. ಮುದಿಯ ರಾಮಗೌಡ.

[ ಒಂದು ಪ್ರಾಮಾಣಿಕ ಜೀವದ ಧರ್ಮಸಂಕಟವನ್ನು ಅರುಹುವ ಸರಸವಾದ ಭಾವಗೀತ. ]

ಕುರಿಗಳೆಲ್ಲ ರೊಪ್ಪದಲ್ಲಿ, ದನಗಳೆಲ್ಲ ತೊಟ್ಟಿಯಲ್ಲಿ,
ಜನಗಳೆಲ್ಲ ಹಟ್ಟಿಯಲ್ಲಿ ಬಳಲಿ ಕೆಡೆದರು ತೆಪ್ಪಗೆ;
ಗಂಡ ಗೊರಕೆ ಹೊಯ್ಯುತಿಹನು ನಿದ್ದೆಕವಿದು ಮಗ್ಗುಲಲ್ಲಿ-
ನನಗೂ ಹೊಟ್ಟೆಯ ದುಃಖವೆಲ್ಲಾ ಕಣ್ಣಹನಿಯಲಿ ಸುರಿವುದು.

ಚಿಕ್ಕ ಹರೆಯದ ಚಾಮನೊಲಿದು ಮದುವೆಗೆನ್ನ ಬಯಸುತಿದ್ದ
ಮಾತನೆತ್ತಲು ರೊಕ್ಕವಿಲ್ಲದೆ ನಾಚಿ ಸುಮ್ಮನೆ ಇರುವನು.
ದುಡ್ಡು ಕಾಸನು ಕೂಡಿಹಾಕಲು ಹೋಗಿ ಹಡಗ ಸೇರಿಕೊಂಡ-
ದುಡ್ಡು ಕಾಸನು ನನ್ನ ಸಲುವೇ ಕೂಡಿಹಾಕಲು ಹೋದನು.

ಅವನು ಹೋಗಿ ನೆಟ್ಟಗೆಲ್ಲಾ ಎರಡು ವಾರ ಕಳೆಯಲಿಲ್ಲ.
ಅಪ್ಪ ಕೈಯ ಮುರಿದುಕೊಂಡ; ಕಳ್ಳರೊಯ್ದರು ದನವನು.
ಅವ್ವ ನರಳುತ ಬಿದ್ದುಕೊಂಡಳು; ಚಾಮ ಎತ್ತಲೋ ಕಡಲಲಿದ್ದನು.
ಇತ್ತ ಮುದಿಯ ರಾಮಗೌಡ ನನ್ನ ಬಯಸಿ ಬಂದನು.

ಅಪ್ಪ ಹೊರಗೆ ಗೆಯ್ಯಲಾರ, ಅವ್ವ ಒಳಗೆ ನೆಯ್ಯಲಾರಳು ;
ಹಗಲು ಇರುಳು ನಾನು ದುಡಿದೂ ನಮಗೆ ಹಿಟ್ಟು ಹುಟ್ಟದು.
ರಾಮಗೌಡ ಕಷ್ಟಕಾದ ! ಕೈ ಹಿಡಿದು ಕಣ್ಣ ನೆನಸಿ,
ಅವರ ಸಲುವಾಗೆನ್ನ, ಚೆನ್ನಿ, ಮದುವೆಯಾಗು, ಎಂದನು.

ನನ್ನ ಮನಸೋ ಒಲ್ಲೆನೆನುವದು; ಚಾಮು ಬರುವ ನಚ್ಚು ಹೋಗದು;
ಎಲ್ಲಿ ಬರುವನು ? ಗಾಳಿ ಬಡಿದು ಹಡಗು ಪುಡಿಪುಡಿಯಾಯಿತು.
ಹಡಗು ಪುಡಿಪುಡಿಯಾಯಿತಯ್ಯೊ ! ಸಾಯದೇತಕೆ ಚಾಮು ಉಳಿದ!
ಕೊರಗಿ ನಾನೀ ಬೇಗೆಯಲ್ಲಿ ಏಕೆ ಬದುಕುತ್ತಿರುವೆನು !

ಅಪ್ಪ ಹೇಳಿದ, ಗದರಿಕೊಂಡ; ಅವ್ವ ಬಾಯಲ್ಲಿ ಆಡಬಲ್ಲಳು ;
ಅವಳು ನೋಡಿದ ನೋಟವೇ ನನ್ನೆದೆಯನಿರಿಯಿತು, ಮುರಿಯಿತು.
ಅವನ ಕೈಯಲಿ ಕೈಯನಿಟ್ಟರು; ಮನಸು ಕಡಲಲಿ ನಿಂತು ಹೋಯಿತು.
ಅಂತು ಮುದಿಯ ರಾಮಗೌಡ ನನಗೆ ಗಂಡನಾದನು.

ಮದುವೆಯಾಗಿ ನೆಟ್ಟಗೆಲ್ಲ ನಾಲ್ಕು ವಾರ ಕಳೆಯಲಿಲ್ಲ,
ಬಾಗಿಲಲ್ಲಿ ಕಲ್ಲಮೇಲೆ ಕುಳಿತು ಕೊರಗುತ- ಕಂಡೆನು !
ಗಾಳಿಯಾಗಿ ಬಂದ ಚಾಮು ಎಂದುಕೊಂಡೆನು- ಚಾಮು ನಕ್ಕು,
ತೆರವ ತಂದೆ ಮದುವೆಯಾಗಲು ಬಂದೆ, ಚೆನ್ನಿ, ಎಂದನು.

ಬಿಕ್ಕಿ ಬಿಕ್ಕಿ ನುಡಿಸಿ ನುಡಿಸಿ, ದುಃಖವೆಲ್ಲ ಹೇಳಿಕೊಂಡೆವು,
ಒಂದು ಮುತ್ತ ಸೆಳೆದುಕೊಂಡೆವು- ಅಟ್ಟಿಬಿಟ್ಟೆ, ಆಗಲೆ !
ಸಾಯ ಒಲ್ಲೆನೆ ನಾನು ಪಾಪಿ ! ಅಯ್ಯೊ ! ಪಾಪಿಗೆ ಸಾವು ಬಹುದೆ ?
ಹುಟ್ಟದೇ ಇರಬಾರದೇ ! ಈ ಬೇಗೆ ಬಾಳನು ತಾಳೆನೇ ?

ಗಾಳಿಯಾಗಿ ಸುಳಿಯುತಿರುವೆ- ಮನೆಯ ಕೆಲಸ ಆಕ್ಕರಿಲ್ಲ,
ಚಾಮನನು ನೆನೆಯುವದು ಪಾಪ; ಎಷ್ಟೋ ತಡೆಯುವೆ ಮನಸನು.
ಒಳ್ಳೆ ಗರತಿಯಾಗಿ ಬದುಕಲು ಎದೆಯನೆಷ್ಟೊ ಗಟ್ಟಿ ಮಾಡುವೆ,
ರಾಮಗೌಡನ ಪ್ರೀತಿ ನಂಬಿಕೆಗೆಂತು ದ್ರೋಹವ ಬಗೆವೆನು !

ಶ್ರೀ
("ಇಂಗ್ಲೀಷ್ ಗೀತಗಳು" ಇದರಿಂದ)

## ಅಭ್ಯಸನಗಳು

ಪ್ರಶ್ನೆಗಳು :—

೧. ರಾಮಗೌಡನನ್ನು ಮದುವೆಯಾಗುವ ಪ್ರಸಂಗವು ಏಕೆ ಬಂದಿತು ?

೨. ಚಾಮನು ಹಡಗದಲ್ಲಿ ಕೆಲಸಕ್ಕೆ ಹೋಗಲು ಕಾರಣವೇನು ?

೩. ಮಗಳ ಮದುವೆಯ ಬಗೆಗೆ ತಂದೆ-ತಾಯಿ ಇವರಿಬ್ಬರ ಯಾವ ಸ್ವಭಾವವು ವ್ಯಕ್ತವಾಗುವುದು ?

೪. ಮಗಳಿಗೆ ಒದಗಿದ ಧರ್ಮಸಂಕಟವಾವುದು ?

ಭಾಷಾಭ್ಯಾಸ:-

೧. ಈ ಕವನದಲ್ಲಿ ಬಂದ ಶಬ್ದಚಿತ್ರಗಳನ್ನು ಲಕ್ಷಿಸಬೇಕು.
(೧) ರಾಮುಗೌಡನು ತನ್ನನ್ನು ಮದುವೆಯಾಗೆಂದು ಬೇಡಿಕೊಳ್ಳುವದು.
(೨) ಬಾಗಿಲಲ್ಲಿ ಕುಳಿತು ಕೊರಗುವ ಮಗಳ ಚಿತ್ರ.
(೩) ತಾಯಿಯು ಎದೆಯುರಿಯುವ ಮೌನ ನೋಟ.
ಇದರಂತೆ ಮನವಿಲ್ಲದೆ ಒತ್ತಾಯದಿಂದ ಶಾಲೆಗೆ ಹೋಗುವ ಒಬ್ಬ ಬಾಲಕನ ಚಿತ್ರವನ್ನು ಚಿತ್ರಿಸಿರಿ.

೨. ಬಿಕ್ಕಿ, ಬಿಕ್ಕಿ; ನುಡಿಸಿ ನುಡಿಸಿ; ಈ ದ್ವಿರುಕ್ತಿಗಳಿಂದ ಆಗುವ ಪರಿಣಾಮವನ್ನು ಲಕ್ಷಿಸಿರಿ.

೩. ಈ ಕವನದಲ್ಲಿ ಬಳಸಿದ ಭಾಷೆ ಮತ್ತು ಶೈಲಿಯನ್ನು ನಿರೀಕ್ಷಿಸಬೇಕು.; ಅಚ್ಚ ಕನ್ನಡ ಶಬ್ದಗಳಿಂದ ಭಾವವನ್ನು ವ್ಯಕ್ತಗೊಳಿಸುವ ರೀತಿಯು ಅನುಕರಣೀಯ ವಾಗಿದೆ.

ಶಬ್ದವಿಚಾರ :—

೧. ಹಿಟ್ಟು ಹುಟ್ಟು, ಕೈಯಲ್ಲಿ ಕೈಯಿಡು, ಕೈಮೇಲಿ ಕೈಹಾಕು, ಇವುಗಳನ್ನು ಒಂದೊಂದು ವಾಕ್ಯದಲ್ಲಿ ಉಪಯೋಗಿಸಿರಿ.

೨. ಮುದಿ, ಬೆಳಕು, ಹಗಲು, ಜನ, ಉಳಿ, ಪಾಪಿ, ಇವುಗಳ ಮಾರುನುಡಿಗಳನ್ನು ಹೇಳಿರಿ.

೩. ನುಡಿ, ಹೇಳು; ಕೂಗು, ಗದರು, ಇವುಗಳಲ್ಲಿಯ ಭೇದವನ್ನು ಹೇಳಿರಿ.

ವಾಕ್-ಶಿಕ್ಷಣ :—

ಮುದಿ ರಾಮುಗೌಡನೊಡನೆ ಮದುವೆಗೆ ಒಪ್ಪಿಗೆಯನ್ನೀಯುವಾಗ ಅವಳು ತನ್ನ ಮನಸ್ಸಿಗೆ ಹೇಳಿಕೊಂಡ ಉಪದೇಶವನ್ನು ಹೇಳಿರಿ.

ಚರ್ಚೆ :—

ಭೀಷ್ಮಾಚಾರ್ಯರು ಕೌರವರ ಪಕ್ಷದಲ್ಲಿದ್ದು ಪಾಂಡವರನ್ನು ಮೆಚ್ಚಿದ್ದು ಸರಿಯೋ ?

ಬರೆಹ :—

ತಾಯಿತಂದೆಗಳ ಸಲುವಾಗಿ ಮಗಳು ಮಾಡಿದ ತ್ಯಾಗದ ಹಿರಿಮೆಯನ್ನು ಬಣ್ಣಿಸಿರಿ.

# ೭. ಪಸಲೆ

[ಇದು ಸೃಷ್ಟಿ ಸೌಂದರ್ಯವನ್ನು ಬಣ್ಣಿಸುವ ಕವಿತೆ. ಭಾವ ಮತ್ತು ನಾದ ಇವುಗಳ ಹೊಂದಿಕೆ ಮನೋಹರವಾಗಿದೆ. ಸೃಷ್ಟಿಯಲ್ಲಿ ತೋರುವ ಚಿರನೂತನ ಸೊಗಸು, ಪರಮಾತ್ಮನು ಸೌಂದರ್ಯರೂಪನೆಂಬ ಅರಿವನ್ನುಂಟುಮಾಡುವದು.]

ಅರಿವಿರಿದ ನರುಗುಂಪಿನಲರ ಪಸದನದಿಂದೆ
ಕರಮೆಸೆವ ಬಳ್ಳಿಗಳ ತಳ್ಕೆಯಿಂ ನಲ್ವಾಂತ
ತರುರಾಜಿ ಸುತ್ತಲುಂ ಕಂಗೊಳಿಸೆ ಬಿತ್ತರದ ನುಣ್ಬಸಲೆ ಚೆಲ್ವೆಸೆವುದು !
ಮರಕತದಿ ನಾದುದೆನೆ ಪಸಿರೇರಿ ತಳತಳಿಪ
ತಿರೆಯ ಮೇಲಿದೆ ನೋಡ ಕಡೆಸಾಲ್ಗಳೆಂಬಿನಂ
ಕಿರುವುಲ್ಗಳೊಳ್ ಜೇಡ ಬುಳುವ ಜಾಲಂ ಮಂಜುವನಿಗೂಡಿ
ಬಗೆಗೊಳಿಪುವು ! ॥೧॥

ನಲಿನಲಿದು ಪಕ್ಷಿಗಳ್ ಪೊಳ್ತರೆಯ ಚೆಲ್ವಿನಿಂ-
ದುಲಿದಪುವು ನಿಡುಸರದೆ ಕಿರುಸರದೆ, ನಲ್ಸರದೆ ;
ಕಲರವಂ ಕಂಪುವೆರೆದೆಳಗಾಳಿಯೊಳ್ ಬೆರತು ಮನಕದೇಂ
ಮುದವೀವುದೋ ॥

ಲಲಿತತೆಯ ನಿಲಯವೋ ಶಾಂತಿಯಾವಾಸವೋ
ಒಲವಿನಾಗಾರವೋ ನೈರ್ಮಲ್ಯದೆಡೆಯೊ ಮಂ-
ಗಲದ ಕೇತನವೊ ನಲ್ಸೊಗದ ತಾಯ್ಮನೆಯೊ ಈ ಪಸತಿ !
ಬಹುರೂಪಿ ಚೆಲ್ವು ! ॥೨॥

ಎನಿತೊಂದಲಂಪು ಗಡ, ಪೆಂಪು ಗಡ, ಮಂಗಲಾ-
ತ್ಮನೆ, ಸುತ್ತಲುಂ ನೋಡಲೆಲ್ಲೆಡೆಯೊಳಂ ನಿನ್ನ
ಘನತೆಯೇಂ ಸೊಂಪೇರಿ, ಸಿರಿನಲ್ಲ, ನಲ್ಸೊಗಮನೊದವಿ
ಸುತೆ ನೆಲಸಿರ್ಪುದೋ ॥
ಮನದಳವೆ ಈ ಸಿಂಗರದ ನೆಲೆಯನರಿಯಲ್ಕೆ ?
ಕೊನೆಯಿಲ್ಲ, ಮೊದಲಿಲ್ಲ ನಿನ್ನ ಸೃಷ್ಟಿಯ ಸಿರಿಗೆ !
ದಿನದೊಳೋರೊಂದು ಬಗೆ, ರಾತ್ರಿಯಲ್ಲೊಂದು ಬಗೆ ! ಸಿರಿಯ
ವೈವಿಧ್ಯವೆನಿತೋ ! ॥೩॥

ಸಾಲಿ ರಾಮಚಂದ್ರರಾಯರು
(ಚಿತ್ರಸೃಷ್ಟಿಯಿಂದ)

## ಅಭ್ಯಾಸಗಳು

ಪ್ರಶ್ನೆಗಳು:-

೧. ಪಸಲೆ 'ಬಹುರೂಪಿ ಚೆಲ್ವು' ಹೇಗೆ ?
೨. ಪರಮಾತ್ಮನ ಘನತೆಯನ್ನು ಕವಿಯು ಏತರಲ್ಲಿ ಕಾಣುವನು ?
೩. ಸೃಷ್ಟಿಯ ಸೊಬಗಿನಲ್ಲಿರುವ ವೈವಿಧ್ಯವನ್ನು ಹೇಳಿರಿ.
೪. ಕವಿಯು ಪರಮಾತ್ಮನನ್ನು ಏನೆಂದು ಸಂಬೋಧಿಸಿದ್ದಾನೆ ? ಮತ್ತು ಅದರ ಔಚಿತ್ಯವೇನು ?

ಭಾಷಾಭ್ಯಾಸ :—

'ಪಸಲೆ'ಯನ್ನು ಕವಿಯು 'ಲಲಿತತೆಯ ನಿಲಯವೋ......ಬಹುರೂಪಿ ಚೆಲ್ವು' ಎಂದು ಉತ್ಪ್ರೇಕ್ಷೆಯಿಂದ ಬಣ್ಣಿಸಿದುದನ್ನು ನೋಡಬೇಕು.

ಇದೇ ಬಗೆಯಾಗಿ ಸೂರ್ಯೋದಯವನ್ನು ಬಣ್ಣಿಸಿರಿ.

ಶಬ್ದವಿಚಾರ :—

೧. ಪಸದನ, ಸಿಂಗರ, ಸಿರಿ, ಸೊಗ, ಸರ, ಇವುಗಳ ತತ್ಸಮ ರೂಪಗಳನ್ನು ಹೇಳಿರಿ.
೨. ನಿಡುಸರ, ಕಿರುಸರ, ನಲ್ಸರ-ಇವುಗಳಲ್ಲಿಯ ವ್ಯತ್ಯಾಸವನ್ನು ಹೇಳಿರಿ.
೩. ವಾಸಸ್ಥಾನ ಎಂಬ ಅರ್ಥವನ್ನು ಸೂಚಿಸುವ ಶಬ್ದಗಳನ್ನು ಎತ್ತಿ ಹೇಳಿರಿ.
೪. ಇಂಪು, ಅಲಂಪು, ಪೆಂಪು, ಸೊಂಪು, ಕಂಪು, ನರುಗಂಪು-ಇವುಗಳ ಅರ್ಥವನ್ನು ಹೇಳಿರಿ.

ವಾಕ್-ಶಿಕ್ಷಣ :—

೧. ಈ ಪದ್ಯವನ್ನು ಗಮಕಪದ್ಧತಿಯಲ್ಲಿ ಹಾಡಿರಿ.
೨. ನಮ್ಮ ವಾಚನ ಮಾಲೆಯ ಒಂಬತ್ತನೆಯ ಪುಸ್ತಕದಲ್ಲಿ ಪ. ಜವಾಹರಲಾಲರು ಬಣ್ಣಿಸಿದ ಹಿಮಾಲಯದ ಸೌಂದರ್ಯವನ್ನು ಓದಿರಿ.

ಚರ್ಚೆ :—

'ದೇವ ಪೂಜೆಗಿಂತ ಸೌಂದರ್ಯೋಪಾಸನೆಯೇ ಮೇಲು.'

ಬರೆಹ :—

ನೀವು ನೋಡಿದ ಸೂರ್ಯಾಸ್ತವನ್ನು ಬಣ್ಣಿಸಿರಿ.

# ೮. ಯಾಕೆ ಮನವೆ ಕೊರಗುವೆ ?

[ಏನೊಂದು ಕಾರಣದಿಂದ ಆವರಿಸಿದ ಮರುಕದ ದುಗುಡವನ್ನು ತೊರೆದು ಉತ್ಸಾಹಗೊಳ್ಳಲು ಮನಸ್ಸಿಗೆ ಮಾಡಿಕೊಳ್ಳಬಹುದಾದ ಉಪದೇಶವಿಲ್ಲಿದೆ.]

ಚಿಗಿವ ಬೇವಿನೆಸಳ ನೋಡು
ಚಿಂತೆಯಿದೆಯೆ ಎದೆಯಲಿ
ನೂರು ಬಗೆಯ ಕಾಡು ಸುಮಗ-
ಳೆಲ್ಲೊ ಅರಳಿ ಪೊದೆಯಲಿ
ನಾಳೆಯೆಂಬ ಹಾಳ ಬಾಳ-
ನೊಂದು ಸಲವು ನೆನೆಯದೆ
ಮಧುರ ಲಾಸ್ಯವನ್ನು ಮರೆದು
ಇಹವೆ ಗಾಳಿಗಲಿಯದೆ ?
ಯಾಕೆ ಮನವೆ ಕೊರಗುವೆ ?
ಚಿಂತೆಯಲ್ಲಿ ಬೇಯುವೆ ? ೧

ಹರೆಯ ತುಂಬಿ ಸೂಸುತಿಹುದು
ವಿಹಾರಿ ಎದೆಯ ಎಲ್ಲೆಯ !
ಜಗವ ಮೆಟ್ಟಿ ನಿಲುವೆನೆಂಬ
ಶಕ್ತಿಯಿಹುದು ಬಲ್ಲೆಯ !
ಏನನೆಲ್ಲ ಮರೆತು ನೀನು
ಸಾವನಪ್ಪಲೋಡುವೆ !
ಕಾಮಧೇನು ಎದೆಯಲಿಹುದು
ಅರಿಯದದನು ಬಾಡುವೆ !
ಯಾಕೆ ಮನವೆ ಕೊರಗುವೆ ?
ಚಿಂತೆಯಲ್ಲಿ ಬೇಯುವೆ ? ೨

ನಿನ್ನ ವಿಭವಕೇನು ಕಡಿಮೆ
ನೀನು ದೇವಕನ್ಯೆಯು !
ಅದನು ಮರೆದು ನಡೆಯಬೇಡ
ಇರುವೆ ಸರ್ವಮಾನ್ಯೆಯು !
ಬಗೆದು ನೋಡು ಎದೆಯ ಆಳ
ಬೆಳಗುತಿಹರು ರವಿ-ಶಶಿ,
ಅಲ್ಲಿ ನೀನು ಶಪಿತಳಂತೆ
ಪತಿತೆಯಾದ ಊರ್ವಶಿ.
ಯಾಕೆ ಮನವೆ ಕೊರಗುವೆ ?
ಚಿಂತೆಯಲ್ಲಿ ಬೇಯುವೆ ? ೩

ಬೆಳೆವ ಒಯಕೆ ತೊರೆದ ನಿನ್ನ
ಬಾಳು ಕಾಡದಾಗಿದೆ
ಕುಡಿಯುನಿಟ್ಟು ಕೊನರಿನೆಂಬ
ಕುರುಡುಭಾವ ಮೂಡಿದೆ
ಹರಿದು ಮನದ ಭ್ರಾಂತಿಯೊಮ್ಮೆ
ಮಿಂಚು ಬೆಳಗದಾಗಿದೆ
ನಿಬಿಡ ತಮದ ಗರ್ಭದಲ್ಲಿ
ಬಾಳು ಸೆರೆಯದಾಗಿದೆ
ಅದಕೆ ಮನವೆ ಕೊರಗುವೆ
ಚಿಂತೆಯಲ್ಲಿ ಬೇಯುವೆ. ೪

ರಾಮಚಂದ್ರ ಕೊಟ್ಟಲಗಿ
(ಪಿಪಾಸೆ ಎಂಬ ಕವನ ಸಂಗ್ರಹದಿಂದ)

## ಅಭ್ಯಸನಗಳು

ಪ್ರಶ್ನೆಗಳು :—

೧. ನಿಸರ್ಗದಿಂದ ಮಾನವನು ಯಾವ ಪಾಠವನ್ನು ಕಲಿಯಬೇಕು ?
೨. ಮನಸಿನ ಶಕ್ತಿ ಎಂತಹದಿರುವದು ?
೩. ಎದೆಯ ಆಳ ಬೆಳಗುವ ರವಿಶಶಿಗಳಾರು ?
೪. ಮನವು ಚಿಂತೆಯಲ್ಲಿ ಬೇಯುವ ಕಾರಣವೇನು ?
೫. ಮನದ ಕೊರಗನ್ನು ತೆಗೆದು ಹಾಕಲು ಮಾನವನು ಹೇಗೆ ಪ್ರಯತ್ನಿಸಬೇಕು ?

ಭಾಷಾಭ್ಯಾಸ :—

೧. 'ಕಾಮಧೇನು ಎದೆಯಲಿಹುದು'
ಅರಿಯದದನು ಬಾಡುವೆ !
ನಿಬಿಡತಮದ ಗರ್ಭದಲ್ಲಿ
ಬಾಳು ಸೆರೆಯದಾಗಿದೆ
ಇವುಗಳಲ್ಲಿಯ ವಿಚಾರಗಳನ್ನು ಸ್ಪಷ್ಟೀಕರಿಸಿರಿ.

ಶಬ್ದವಿಚಾರ :—

೧. ಚಿಗಿ, ಬಾಡು, ಕೊರಗು, ಇವುಗಳ ಮೋಳನುಡಿಗಳನ್ನು ಹೇಳಿರಿ.
೨. ಎಲೆ, ಎಸಳು, ಚಿಗುರು, ತಳಿರು ಮುಗುಳು, ಇವುಗಳನ್ನು ಎಲೆಯ ಬೆಳಿಗೆಯ ಮತ್ತು ಹೂವು, ಹಣ್ಣು, ಮೊಗ್ಗೆ, ಕಾಯಿ, ಹೀಚು, ಮಿಡಿ, ಇವುಗಳನ್ನೂ ಬೆಳಿಗೆಯ ಅನುಕ್ರಮದಲ್ಲಿ ಬರೆಯಿರಿ.

ವಾಕ್-ಶಿಕ್ಷಣ :—

ಉತ್ಸಾಹದಿಂದ ಮುನ್ನುಗ್ಗಲು ಪ್ರಚೋದಿಸುವ ನೀವು ಓದಿದ ಕೆಲವು ಕವನಗಳನ್ನು ಹೇಳಿರಿ.

ಚರ್ಚೆ :—

ನಾಳಿನ ಲಕ್ಷ್ಯವಿಲ್ಲದ ಇಂದಿನ ಬಾಳು ಪಶ್ಚಾತ್ತಾಪಕ್ಕೆ ಕಾರಣ.

ಬರೆಹ :—

ಮನಸ್ಸಿನ ಅದ್ಭುತ ಶಕ್ತಿಯನ್ನು ಕೆಳಗಿನವರು ಹೇಗೆ ತೋರಿಸಿರುವರು ಎಂಬುದನ್ನು ಹೇಳಿರಿ.

(೧) ಗಾಂಧೀಜಿ.
(೨) ನೆಪೋಲಿಯನ್.
(೩) ಸ್ಟಾಲಿನ್.
(೪) ಸುಭಾಸಚಂದ್ರಬೋಸ.
(೫) ಭಗತಸಿಂಗ.

# ೬. ಗೋಮಟ ಶಿಲ್ಪಿಗೆ

[ಹಿಂದೂ ದೇಶದಲ್ಲಿಯೆ ಭವ್ಯವೆನಿಸಿ ಶಿಲ್ಪಕಲೆಯ ಅಚ್ಚರಿಯ ಮಾದರಿಯೊಂದು ವಿಖ್ಯಾತವಾದ ಶ್ರವಣಬೆಳಗೊಳದ ಗೊಮ್ಮಟ ಮೂರ್ತಿಯನ್ನು ಕುರಿತ ಭಾವಗೀತವಿದು. ಇದರಲ್ಲಿ ಆ ಶಿಲ್ಪಸೌಂದರ್ಯದ ರಸಾಸ್ವಾದದ ಆನಂದವು ಎದೆದುಂಬಿ ಹೊರಹೊಮ್ಮುತ್ತಿರುವುದನ್ನು ಮನಗಾಣಬಹುದು.]

(೧)

ನೀನಾವ ಅಮೃತಾವಕಾಶದಲಿ ಓ ಶಿಲ್ಪಿ
ಕಲ್ಪಿಸಿದೆ ಚಿತ್ತದಲಿ ಈ ಭವ್ಯವ
ಕಣಸು ಕಡೆದಿಹ ರೂಪು ಕಣ್ಮುಂದೆ ನಿಂದವೊಲು
ನಿರ್ಮಿಸಿದೆ ಶೈಲದಲಿ ಈ ದಿವ್ಯವ.

(೨)

ಸಹಜ ಬಂಧುರ ಲಲಿತ ಕಲೆಯ ಛಂದೋಗತಿಗೆ
ತಾನೆ ಚಲಿಸಿತು ಚಾಣ ನಿನ್ನ ಕರದಿ
ರವಿರೂಪ ತಳೆದನೆನೆ ಬೆಳ್ಗೊಳದ ಗಿರಿಯೇರಿ
ಮೂರ್ತಿ ನೆಗೆದಿತ್ತು ಮುಗಿಲತ್ತ ಭರದಿ

(೩)

ನಯ ನುಣ್ಪು ಬಿಣ್ಪು ಬೆರೆದಿವೆ ನಿನ್ನ ಈ ಮಹಾ
ಮೂರ್ತಿಶಿಲ್ಪದಿ ತಪ್ಪದೊಪ್ಪವಡೆದು
ಎಂಥ ಸಾಧನೆ ಕಾಂತಿಯುತ ಮತಿಗೆ ಗತಿಯಿತ್ತು
ನಡೆಸಿತ್ತು ಮಂಗಲಕೆ ಕೈಯ ಹಿಡಿದು

(೪)

ಏನು ಹಣೆ ಏನು ಹುಬ್ಬೇನು ಗಾಂಭೀರ್ಯವಿದು
ಗಾಂಭೀರ್ಯದಲಿ ಪ್ರಸನ್ನತೆಯದೇನು !
ಕಣ್ಣಲಿ ಕಪೋಲದಲಿ ನೀಳ ನಾಸಿಕದಲ್ಲಿ
ಸುಳಿದು ತುಟಿಗಿಳಿದೀ ವಿಲಾಸವೇನು !

(೫)

ಕೆತ್ತನೆಗೆ ಮೈಯಿತ್ತು ಮೈವೆತ್ತ ಜಡದಲ್ಲಿ
ನೀನೆಂತು ತುಂಬಿದ್ಯೆ ಜೀವಕಳೆಯ
ತುಂಬು ಮೈ ಬಿಂಬದಲಿ ಭಕ್ತಿ ಭಾವವ ತೀವಿ
ಹರಿಸಿದೆಯ ಹಿಗ್ಗು ಹೊಳೆಯ

(೬)

ಅಂತರಂಗದ ಕಾಂತಿ ಕರಗಿ ಹೊರಸೂಸಿತೆನೆ
ಅಡಿಯಿಂದ ಮುಡಿಯ ಮುಂಗುರುಳವರೆಗೆ
ಪ್ರತಿಭೆ ಪಡಿನುಡಿದಿಹುದು ಐವತ್ತು ಏಳಡಿಯ
ಎತ್ತರದ ಕೃತಿಯಲ್ಲಿ ನಿನ್ನ ಕರೆಗೆ

(೭)

ಉಳಿಯ ಕಂಠವ ಶಿಲಾಪತ್ರದಲಿ ನಾಂಟಿಸುತ
ನೀನಿಂತು ಬರೆದು ಶಿಲ್ಪದ ಕಾವ್ಯವ
ನಿಲ್ಲಿಸಿಹೆ ಶಿಲ್ಪಕವಿ ಈ ಮೇರುಕೃತಿಯಲ್ಲಿ
ಕನ್ನಡದ ಶಿಲ್ಪದೊಂದೌನ್ನತ್ಯವ

(೮)

ಸತ್ತ್ವಮಿದು ಚಿತ್ತ್ವವಿದು ಇದುವೆ ನಿತ್ಯಾನಂದ
ಶಿಲೆಗೆ ಸಂದಿವೆ ಕಲಾಯೋಗದಿಂದ
ಇಳಿಯುವದು ಆನಂದ ಸಂದರ್ಶನಕೆ ಬಂದ
ಭಾವಜೀವಿಗೆ ದೇವಲೋಕದಿಂದ.

ಡಿ. ಎಸ್. ಕರ್ಕಿ
(ಭಾವತೀರ್ಥದಿಂದ)

# ಅಭ್ಯಾಸಗಳು

**ಪ್ರಶ್ನೆಗಳು :—**

೧. ಶಿಲ್ಪಿಯು ಮೂರ್ತಿಯಲ್ಲಿ ಜೀವಕಳೆಯನ್ನು ಹೇಗೆ ತುಂಬಿದ್ದಾನೆ ?
೨. ಕನ್ನಡಿಗರಿಗೆ ಶಿಲ್ಪಿಯು ಕೊಟ್ಟ ಕಾಣಿಕೆಯೇನು ?
೩. ಗೋಮಟೇಶ್ವರನ ಮೂರ್ತಿಯು ರಸಿಕ ಸಂದರ್ಶಕರಲ್ಲಿ ಯಾವ ಭಾವನೆಯನ್ನು ಬಿತ್ತುವದು ?
೪. ಶಿಲ್ಪವನ್ನು ಕಡೆಯುವಾಗ ಶಿಲ್ಪಿಯಲ್ಲಿ ಎಂತೆಂತಹ ಉದಾತ್ತ ಭಾವನೆಗಳು ಉದಯವಾಗಿರಬೇಕು ?

**ಭಾಷಾಭ್ಯಾಸ:-**

೧. ಗೋಮಟೇಶ್ವರನನ್ನು ಕವಿಯು ಯಾರಿಗೆ ಹೋಲಿಸಿದ್ದಾನೆಂಬದನ್ನು ಹೇಳಿರಿ.
೨. 'ಕೆತ್ತನೆಗೆ ಮೈಯಿತ್ತು- ಮೈವೆತ್ತ ಜಡದಲ್ಲಿ ನೀನೆಂತು ತುಂಬಿದೈ ಜೀವಕಳೆಯು, ಪ್ರತಿಭೆ ಪಡಿನುಡಿದಿಹುದು ಐವತ್ತು ಏಳಡಿಯ ಎತ್ತರದ ಕೃತಿಯಲ್ಲಿ ನಿನ್ನ ಕರೆಗೆ,
ಈ ಸಾಲುಗಳಲ್ಲಿ ಹುದುಗಿದ ಭಾವವನ್ನು ಸ್ಪಷ್ಟಗೊಳಿಸಿರಿ.
೩. ಕೂಡಿಸಿ ಬರೆಯಿರಿ.
ತಪ್ಪದೆ+ಒಪ್ಪ+ಪಡೆದು; ತಳೆದನು+ಎನೆ; ಹೊರಸೂಸಿತು+ಎನೆ;

**ಶಬ್ದವಿಚಾರ :—**

೧. ಮೈಯಿಕ್ಕು, ಮೈವೆರು, ಮೈಮರೆ, ಜೀವಕಳೆತುಂಬು, ಇವುಗಳನ್ನು ನಿಮ್ಮ ವಾಕ್ಯಗಳಲ್ಲಿ ಉಪಯೋಗಿಸಿರಿ.
೨. ಭಾವಜೀವಿ, ಕಲಾಯೋಗ, ಶಿಲ್ಪಕಾವ್ಯ, ಅಮೃತಾವತಾರ, ಇವುಗಳ ಅರ್ಥವನ್ನು ಹೇಳಿರಿ.
೩. ನುಣ್ಪು, ಬಿಣ್ಪು, ತಣ್ಪು, ಈ ಶಬ್ದಗಳ ರೂಪಸಿದ್ಧಿಯನ್ನು ಹೇಳಿರಿ.

**ವಾಕ್-ಶಿಕ್ಷಣ :—**

'ಗೋಮಟೇಶ್ವರನ' ಬಗೆಗೆ ಬರೆದ ಶ್ರೀ ಕುವೆಂಪು, ಶ್ರೀ. ಡಿ. ವ್ಹಿ. ಜಿ. ಮತ್ತು ಶ್ರೀ. ಗೋವಿಂದ ಪೈ, ಇವರ ಕವನಗಳನ್ನು ಓದಿರಿ.

**ಚರ್ಚೆ :—**

ಕವಿಗಿಂತ ಶಿಲ್ಪಿಯೇ ಮೇಲು.

**ಬರೆಹ :—**

೧. ಗೋಮಟೇಶ್ವರನ ಸೌಂದರ್ಯವನ್ನು ಬಣ್ಣಿಸಿರಿ.
೨. ಶಿಲ್ಪಕಲಾಕೃತಿಯ ಸೊಬಗನ್ನು ಅರಿಯುವ ರೀತಿಯನ್ನು ಅಭ್ಯಸಿಸಿರಿ. ಆಧುನಿಕ ಮೂರ್ತಿಕಾರರ ಕೃತಿಗಳನ್ನು ಪ್ರಾಚೀನ ಮೂರ್ತಿಗಳೊಡನೆ ಹೋಲಿಸಿ ನೋಡಿರಿ.

# ೧೦. ಮಹಾತ್ಮಾ

[ನೆಲವು ನಂದನವನವಾಗಲು ಹಲವು ಪುಣ್ಯಾತ್ಮರಿಗೆ ತಮ್ಮ ಬಲಿದಾನ ಮಾಡಬೇಕಾಗುತ್ತದೆಂದು ಇತಿಹಾಸವು ಕೂಗಿ ಹೇಳುತ್ತದೆ. ಸತ್ಯವು ಒರೆಗೆ ಹತ್ತಬೇಕಾದರೆ ಇಂತಹ ಕ್ರೂರ ಪ್ರಕಾರದ ಆವಶ್ಯಕತೆ ಏಕೆ ಉಂಟಾಗಿದೆ? ನರರು ಹುಂಬತನವನ್ನು ತೊಲಗುವವರೆಗೆ ಇದು ಹೀಗೆ ಸಾಗಬೇಕಾದುದು ಅನಿವಾರ್ಯವೆಂದೇ ಹೇಳಬೇಕೋ ?]

(೧)

ನಿನ್ನ ನೆತ್ತರು ನೆಲಕೆ ಚಲ್ಲಿದಂದು
ಮಣ್ಣು ನಡುಗಿತು, ಹಗಲ ಹೂ ಬಾಡಿತು.
"ನರನು ಕೆರಳುವ ಹುಂಬ, ಬಾಳು ಯೂಪಸ್ತಂಭ
ಉತ್ತಮರ ಬಲಿ ಇಲ್ಲಿ," ಬಾನ್ ಆಡಿತು.

(೨)

ಮನುಕುಲದ ರಕ್ತಮಯ ಇತಿಹಾಸ ಕೂಗಿತ್ತು :
"ನೆಲವು ನಂದನವನವಾಗಲೇನು ಬೇಕು ?
ತಿಳಿವು ತುಂಬಿದ ಕಣ್ಣು, ಒಲವು ತುಂಬಿದ ಎದೆಯು
ಕಲಹಕೆಳಸದ ಬದುಕು- ಇಷ್ಟೆ ಸಾಕು."

(೩)

ಅಂತೆ ತವಕದಿ ಬಂದೆ, ಮನದ ಮಮತೆಯ ತಂದೆ
ಹಗೆಯ ಕಾಳೋರಗವ ತವಿಪೆನೆಂದೆ.
ಇತ್ತ ಹಾಲಾಹಲವು, ಅತ್ತ ಕೋಲಾಹಲವು
ಅಮೃತಹಾಸವ ಬೀರಿ ನಡೆದೆ ಮುಂದೆ.

(೪)

ಬತ್ತಿದೆದೆಗಳಲಿ ಒಲವಿನ ತೇವು ಒಡೆದಿತ್ತು-
ಶಾಂತಿಸಮರಕೆ ಇದು ಮೊದಲೆನಿಸಿತು
ಕಲ್ಲೆದೆಯು ಸೀಮೆಯಲು ಹೂ ಕುಸುರು ! ಅಹ, ಇದು
ಬರುವ ಭಾಗ್ಯದ ಯುಗದ ತೊದಲೆನಿಸಿತು.

(೫)

ನರನ ಕಾಡಿನ ನಡತೆ ಇನ್ನು ಮುಗಿದಿರಲಿಲ್ಲ
ನಿನ್ನ ಬೇಟಿಗೆ ತಾಯಿ ಮಣ್ ನಡುಗಿತು.
"ನರನು ಕೆರಳುವ ಹುಂಬ-ಬಾಳು ಯೂಪಸ್ತಂಭ
ಇಂಥ ಬಲಿ ಇನ್ನೇಸೊ ?" ಬಾನ್ ಗುಡುಗಿತು.

ಗಂಗಾಧರ ಚಿತ್ತಾಲ

## ಅಭ್ಯಸನಗಳು

**ಪ್ರಶ್ನೆಗಳು :—**

೧. ಜಗತ್ತು ಸುಖದಲ್ಲಿರಬೇಕಾದರೆ ಜನಜೀವನವು ಎಂತಹದಿರಬೇಕು ?
೨. ರಕ್ತಮಯ ಇತಿಹಾಸವೆಂದರೇನು ?
೩. ಗಾಂಧೀಜಿಯವರು ಭಾಗ್ಯಯುಗವನ್ನು ತರಲು ಹೇಗೆ ಪ್ರಯತ್ನಿಸಿದರು ?
೪. ಗಾಂಧೀಜಿಯವರ 'ಬೇಟಿಗೆ' ಮಾನವನ ಯಾವ ಸ್ವಭಾವವು ಕಾರಣವಾಯಿತು ?
೫. ಭಾಗ್ಯಯುಗವು ತಾನು ಜಗತ್ತಿನಲ್ಲಿ ನೆಲೆಗೊಳ್ಳಲು ಏನನ್ನು ಆಪೇಕ್ಷಿಸುತ್ತದೆ ?

**ಭಾಷಾಭ್ಯಾಸ:-**

೧. ಮಣ್ಣುನಡಗು, ಹಗಲಹೂಬಾಡು, ಇವುಗಳಲ್ಲಿ ಮಣ್ಣು, ಹಗಲಹೂ, ಇವುಗಳನ್ನು ಯಾವ ವಿಶಿಷ್ಟ ಅರ್ಥದಲ್ಲಿ ಉಪಯೋಗಿಸಲಾಗಿದೆ?
೨. ನಾಡಿನ ಉದ್ಧಾರಕ್ಕಾಗಿ ಬಲಿದಾನಗೈದ ಮಹಾ ವಿಭೂತಿಗಳ ಚರಿತ್ರೆಯನ್ನು ಹೇಳಿರಿ.
೩. 'ರಕ್ತಮಯ ಇತಿಹಾಸ' ಇದೊಂದು ಶಬ್ದದಿಂದ ಇತಿಹಾಸದ ಯಾವ ಚಿತ್ರವು ಕಣ್ಣಮುಂದೆ ನಿಲ್ಲುವದು ?
೪. ಕೆಳಗಿನ ಸಾಲುಗಳಲ್ಲಿರುವ ವಿಚಾರಗಳನ್ನು ಸ್ಪಷ್ಟಗೊಳಿಸಿರಿ.
(೧) ಕಲ್ಲಿದೆಯ ಸೇವೆಯಲಿ ಹೂ ಕುಸರು.
(೨) ಬರುವ ಭಾಗ್ಯದ ಯುಗದ ತೊದಲೆನಿಸಿತು.
(೩) ಇಂಥ ಬಲಿ ಇನ್ನೇಸೋ.?

**ಶಬ್ದವಿಚಾರ :—**

೧) ತಿಳಿವು ತುಂಬಿದ ಕಣ್ಣು, ಅಮೃತ ಹಾಸ, ಶಾಂತಿಸಮರ, ಭಾಗ್ಯದ ಯುಗದ ತೊದಲು, ಇವುಗಳ ಅರ್ಥವನ್ನು ಹೇಳಿರಿ.
೭. ಮಣ್ಣು—ಕೂಡು, ಕೊಡು, ಎರಚು, ಮುಕ್ಕು ; ಇವುಗಳನ್ನು ಒಂದೊಂದು ವಾಕ್ಯದಲ್ಲಿ ಉಪಯೋಗಿಸಿರಿ.
೩. ಒಲವು, ಹಗೆ. ಬಾನ್, ಇವುಗಳ ಮೇಳನುಡಿಗಳನ್ನು ಬರೆಯಿರಿ.

**ವಾಕ್-ಶಿಕ್ಷಣ :—**

ಶ್ರೀ ಕುವೆಂಪು ಅವರು ಬರೆದ 'ಸ್ವಾತಂತ್ರ್ಯಶಿಲ್ಪಿ' ಎಂಬ ಕವನವನು ಓದಿರಿ.

**ಚರ್ಚೆ :—**

'ನರನ ಕಾಡಿನ ನಡತೆಯು ಎಂದಿಗೂ ಹೋಗಲಾರದು.'

**ಬರೆಹ :—**

ಮಹಾತ್ಮರ ಶಾಂತಿಸಮರದ ಬಗೆಯನ್ನು ಕುರಿತು ಬರೆಯಿರಿ.

# ೧೧. ಲಲಿತಾಂಗನ ಕಥೆ

[ಸಕಾಲದಲ್ಲಿ ಶಿಕ್ಷೆಗೆ ಒಳಗಾಗದ ಮಕ್ಕಳು ಅನಾಚಾರಿಗಳಾಗಿ ಲೋಕಾಪವಾದಕ್ಕೆ ಈಡಾಗುವರು ಎಂಬುದನ್ನು ವಿವರಿಸುವ ಪ್ರಾಚೀನ ಕಥೆ.]

ಈ ಜಂಬೂದ್ವೀಪದ ಭರತಕ್ಷೇತ್ರದೊಳ್ ಕಾಶ್ಮೀರಮೆಂಬುದು ವಿಷಯಮಾ ವಿಷಯದೊಳ್

ಸುರಪತಿಸಮಾನವಿಭವಂ
ಸ್ಮರರೂಪಂ ರಿಪುಕುಲಾಂತಕಂ ಜಿನಪದಪಂ-॥
ಕರುಹಮಧುಪಂ ಗುಣಾಂಬುಧಿ
ಪರಹಿತನರಿಮಥನನೆಂಬನದನಾಳ್ವರಸಂ ॥೧॥

ಆ ನೆಗಳ್ದಿರ್ದರಿಮಥನಮ-
ಹಾನರಪಂಗಂ ಸಮಸ್ತಗುಣನಿಳಯೆ ಸರೋ:॥
ಜಾನನಿ ಸೌಂದರಿಗಂ ಭುವ-
ನಾನಂದಂ ಪುಟ್ಟಿದಂ ಮಗಂ ಲಲಿತಾಂಗಂ ॥೨॥

ಲಲಿತಾಂಗಂ ಶುಕ್ಲಪಕ್ಷದ ಚಂದ್ರನಂತೆ ಬಳೆಯುತ್ತುಮಿರ್ಪುದುಂ. ತಾಯ್ಗಂ ತಂದೆಗಮಾತನೊಳ್ ಮೋಹಂ ತಿಣ್ಣಮಾಗೆ,

ಕೈಯೆತ್ತಿ ದುರ್ಜನಿಕ್ಕೆಗೆ
ಪೊಯ್ಯದೆ ದುರ್ಜನರೊಳಮ್ಮ ಕೂಡಿರವೇದೆಂ-॥
ದೊಯ್ಯನೆ ಶಿಕ್ಷಿಸಿ ಮುಸಿಸಿಂ
ಬಯ್ಯದೆ ಪೊಲ್ಲಮೆಗೆ ಜರಿಯಲಾರದೆ ಪದಪಿಂ ॥೩॥

ಮಗನ ವಿನೋದಮುಂ ಮಗನ ಮುದ್ದುಗಳಂ ಮಗನಾಡುವಾಟಮುಂ ।
ಮಗನ ದುರುಕ್ತಿಯುಂ ಮಗನ ದೂರ್ತುಗಳಂ ಮಗನೊಂದು ಕಯ್ತುಮುಂ ॥
ಮಗನ ವಿಳಾಸಮುಂ ಮಗನ ವೀರಮನೋಜೆಯನಾಗಳುಂ ಮುಗು- ।
ಳ್ನಗೆವೆರಸಳ್ಕರಿಂ ನಗುತೆ ನೋಡುತುಮಿಂತಿರುತಿರ್ದರೀರ್ವರುಂ ॥೪॥

ಪುರಜನಮುಂ ಪರಿಜನಮುಂ
ಕರಮುಕ್ಕಿಂ ಪಿಡಿದು ತನ್ನ ಗೆಣೆಗಳ್ಗಾನುಂ ॥
ಪರಿಭವಿಸಿ ಬಡಿಯಲರಸನು-
ಮರಸಿಯುಮುಳ್ಕರ್ತು ನೋಡುತಿರ್ಪರ್ನಗುತುಂ ॥೫॥

ಅಂತು ಬೇವಂ ಪೊರ್ದಿದ ನೀರೆಂತು ಕಯ್ಪೆಯಕ್ಕುಮಾತೆರದಿಂದುರ್ಜನ ಸಂಗದಿಂದತಿಚಪಳನಾಗಿ ಸೊಕ್ಕಿಂದಂ ಅಂಕುಶಮಿಲ್ಲದ ಮದದಾನೆಯಂತೆ ಮೆಯ್ಯರಿಯದೆ

ತಿರಿದುಂಬ ತಿರಿಕರಂ ನಿ-
ಷ್ಕರುಣದಿನರೆಯಟ್ಟಿ ಪಿಡಿದು ಸುಂಕಮನಿಕ್ಕಂ- ॥
ದರವರಿಸದೆ ಕಾಡುವನು-
ರ್ವರೆಯುರಿವಿಸಮಾರೊ ಬಗೆವೊಡವನವೊಲಿಳೆ
ಯೊಳ್ ॥೬॥

ಮತ್ತಂ ತೆಲ್ಲಿಗಗೇರಿಯುಂ ಪೊಕ್ಕು

ಕೊಡದೆಣ್ಣೆಯೆಲ್ಲಮುಂ ಕೂ-
ಗಿಡೆ ದೂರ್ತಿಂ ಸೂರೆಗೊಂಡು ಬಂದು ನಿತಾಂತಂ ॥
ಸೊಡರಂ ಯಕ್ಷಿಯ ಮನೆಯೊಳ್
ತಡೆಯದೆ ಪೊತ್ತಿಸುವನೆಯ್ದೆ ಬೆಳಗಪ್ಪಿನೆಗಂ ॥೭॥

ಮತ್ತಂ ಸಿಂಹಮುಂ ಕಂಡ ಕರಿಘಟೆಯಂತೆ ಕಂಡಬೆಗಡುಗೊಂಡು ನಿಂದ ನೆಲೆಯುಂ ಬಿಟ್ಟೋಡೆ ನಿಷ್ಕರುಣದಿಂ ಬೆಂಕೊಂಡು,

ಕಳ್ಳಸಿಗಗೇರಿಯೊಳಗಣ
ಕಳ್ಳೆಲ್ಲಮನಳೆದು ತರಿಸಿ ಪೊರಗಣ ಬನದೊಳ್ ॥
ಕಳ್ಳರ್ಗಂ ಧೂರ್ತರ್ಗಂ
ಭಿಲ್ಲರ್ಗಂ ಸೂರೆಗೊಡುವನಿದುವೆ ವಿನೋದಂ ॥೮॥

ಅಂತುರಿಯುತ್ತುಮಿರ್ಪ ಲಲಿತಾಂಗನ ಪೊಲ್ಲಮೆಯುಂ ಕಂಡು ಬುದ್ಧಿವಂತರಿಂತೆಂದರ್ —

ಅರಸನ ಮಗನುರ್ಕಿಂದು-
ರ್ವರೆಯುರಿವೊಡಮಾನೆ ಸೊರ್ಕಿ ಕೊಲ್ವೊಡೆ ಕಿಚ್ಚ- ॥
ಚ್ಚರಿಯಾಗಿ ತಾನೆ ಸುಡುವೊಡೆ
ಕರಮವನಡ್ಡೈಸಿ ತಾಗಿ ಮಾರ್ಕೊಳ್ವವರಾರ್ ॥೯॥

ಮತ್ತಂ ಕುಮಾರನ ಭಯಮಂ ಪೇಳ್ವೊಡೆ ಪಾರ್ವರಾರುಮೊಡೆಯರಿಲ್ಲದಂತೆ ನಡುನಡುಗೆ, ಪರದರ್ದರಿಯಮರದಂತಲ್ಲಾಡೆ, ದೂಸಿಗರ್ದೇಸಿಗರಂತೆ ಭಯಂಗೊಳೆ, ಬಳೆಗಾರರಳವುಗೆಟ್ಟ ಕುದುರೆಯಂತೆ ನಿಲೆ, ಕಂಚುಗಾರರ್ಮಿಂಚುಗಂಡ ಶಿಶುವಿನಂತಂಜೆ, ರಾಜಕುಮಾರರ್ ಭೋಜನಂಬಡೆಯದರಂತೆ ಬಡವಾಗೆ, ಒಕ್ಕಲಿಗರ್ ಸಾಕ್ಷಿಯಿಲ್ಲದೆ ಸಾಲಂಗೊಟ್ಟರಂತೆ ಬೆಕ್ಕಸಂ ಬೆರಗಾಗೆ, ಬಂಟರ್ ನಂಟರಂ ಕಂಡ ಬಡವನಂತೊಳಸಾರೆ, ಬೀರರ್ ದಾರಿಗೆಟ್ಟರಂತೆ ಬೆದರೆ, ಮಿಂಡರ್ ದಂಡಂದೆತ್ತೊಕ್ಕಲಿಗನಂತೆರ್ದೆಗಿಡೆ, ತೆಲ್ಲಿಗರ್ಬಿಲ್ಲಂ ಕಂಡ ಕಾಗೆಯಂತೆ ಚೆಲ್ಲವರಿಯೆ, ಮಣಿಗಾರರ್ ಗುಣಂಗೆಟ್ಟ ಋಷಿಯಂತೆ ಚಿಂತಿಸೆ, ಕುಂಬಾರರ್ ಸಂಬಳಮಿಲ್ಲದ ದಂಡಿನಾಳಂತೆ ಬೆರ್ಚೆ, ಅಸಗರ್ ದೆಸೆಗೆಟ್ಟರಂತೆ ಬಾಯ್ವಿಡೆ, ಬೇಡರ್ ಬೀಡಂ ಬಿಟ್ಟೋಡೆ, ದೂರ್ತರ್ ಮಾರ್ತಾಂಡನಂ ಕಂಡ ಮಂಜಿನಂತೆ ಪರಿಯೆ,........... ಪೊಳಲೊಳಗಣ ಪ್ರಜೆಯೆಲ್ಲಮುಂ ಮಹಾಭಯಜ್ವರಂಗೊಂಡು, "ಕುಮಾರನಾಡುವಾಟಕ್ಕಂ, ಮಾಡುವ ಮಾಟಕ್ಕಂ, ನಿಲಲುಂ ನಿತ್ತರಿಸಲುಮಾರೆವೆಮಗೆ ಬೆಸನಾವುದು ಧರಣೀಶ್ವರ ಬೆಸಸೆ"ನೆ........ಅರಿಮಥನ ಮಹಾರಾಜಂ......ಪ್ರಧಾನರ್ಗಂ ಸೌಂದರಿ ಮಹಾದೇವಿಗಮಿಂತೆಂದಂ—

ಕಡುತಣ್ಪು ಕೆಟ್ಟು ಕಿಚ್ಚಿನೊ-
ಳೊಡಗೂಡಿದ ನೀರ್ ಬಳಿಕ್ಕೆ ತೀವ್ರತೆಯಿಂ ಕೈ- ॥
ಸುಡುವಂತೆ ನೋಡೆ ದುರ್ಜನ
ರೊಡಗೂಡಿದ ಮಾನಿಸರ್ಗೆ ಸದ್ಗುಣಮುಂಟೆ ? ॥೧೦॥

ಅದು ಕಾರಣದಿಂ ಕುಮಾರನೊಳಾದ ದೂರ್ತೆಲ್ಲಮೆಮ್ಮಿಂದಾದುದಾತನೊಳ್ ದೋಷಮಿಲ್ಲೆಂತೆನೆ—

ಇನಿತುಂ ಮೋಹಂ ಕೇಳೀ-
ತನ ಮೇಲಿಂ ಪಿರಿದುಮೆನ್ನೊಳುಂಟಪ್ಪುದರಿಂ- ॥
ದನಿಯಿತಿಕೆಯಿಂದೆ ನಡೆಸ-
ಲ್ಕಿನಿತಾದುದು ಶಿಕ್ಷೆಗೆಟ್ಟ ಕಾರಣದಿಂದಂ ॥೧೧॥

ಕಸದೊಡನೆ ಕೂಡಿ ಪೆರ್ಚಿದ
ಸಸಿಯುಂ ಶಿಕ್ಷಿಸದ ಮಕ್ಕಳುಂ ಮಾಣದೆ ಚಿಂ- ॥
ತಿಸದೋದುಂ ಪಲವಂ ಭಾ-
ವಿಸುತಿರ್ಪನ ತಪಮುಮೊಪ್ಪಲಾರ್ಕುಮೆ
ಕಡೆಯೊಳ್ ॥೧೨॥

ಮತ್ತಂ, ಮಗನಂ ಕಿರಿಯಂದಿಂ ತೊಡಗಿ ಶಿಕ್ಷಿಸದಿರ್ದುದರಿನಿಂತಾಯ್ತೆಂದ-ರಸಂ ಲಲಿತಾಂಗನಂ ಬರಿಸಿ ಮುಂತೆ ಕುಳ್ಳಿರಿಸಿ ಬಳಿಕ್ಕಮಿಂತೆಂದಂ—"ಲೋಯಿ ಸರದ ಮೇಲೆ ಬಂಡಿ ಪರಿದಂತೆ ಪೊಳಲೆಲ್ಲಮುಂ ಮಾಡಿದೆಯಾದೊಡೇನಾಯ್ತು; ಪೋದುದಿಂ ಪೋಗಲಿ, ಪೆರಗನೆಣಿಸಲಾಗದು

ಇಂದು ಮೊದಲಾಗೆ ನೀಂ ಸೊ-
ರ್ಕಿಂದಂ ಪೊಳಲೊಳಗೆ ಕೇಳ ಬಾಧೆಗಳಂ ದೂ- ॥
ರ್ತಿಂದಂ ಮಾಡಿದೆಯಪ್ಪೊಡೆ
ಕಂದಾ ಕಡುಮುನಿವೆನೆನಗೆ ನೀಂ ಮಗನಲ್ಲಯ್ ॥೧೩॥

ಮತ್ತಂ ಪಾಪಾನುರಾಗಮುಂ ಪತ್ತುವಿಟ್ಟು ದುರ್ಜನರೊಡನಾಟಮುಂ ಮಾಣ್ಬು ದೆನ್ನಾಣೆಯೆಂದು ತನ್ನಂ ಮುಟ್ಟಿಸಿಕೊಂಡು ಮಗನಕದಪಂ ಕರ್ಚಿ ಪಸಾಯನಮುಂ ಕೊಟ್ಟರಿಮಥನಮಹಾರಾಜಂ ಸಂತಸದಿನಿರ್ಪುದುಂ,

ಮನ್ನಿಸದೆ ತಂದೆಯುಂ ಪೊಳ-
ಲಂ ನೆರೆ ಕಾಡುತ್ತುಮೆಳಲಿಸುತ್ತುಂ ದೂರ್ತಿಂ- ॥
ದಂ ನೃಪಸುತನಿರೆ ಮತ್ತಂ
ತನ್ನಾಣೆಯನುಳಿದುದರ್ಕೆ ಮುಳಿದು ನರೇಂದ್ರಂ ॥೧೪॥

ಲಲಿತಾಂಗನಂ ಬರಿಸಿಕೊಂಡು "ಮಗನೆ, ಮೋಹದಿಂ ನೀಂ ಮಾಡಿದ ಪಲವು ಪೊಲ್ಲಮೆಗಳಂ ಸೈರಿಸಿರ್ದೊಡಂ ನೀಂ ಕೊರ್ವಿ ಗಾಳಿಯೊಳ್ಕೂಡಿದ ಕಿರ್ಚಿನಂತೆ ದಳ್ಳುರಿದು ಪೊಳಲೊಳಗೆ ಮುನ್ನಿನೆಡೆಗೀಗಳುಂ ಪಿರಿದಬ್ಬರಮುಂ ಮಾಡಿದೆ, ಮತ್ತಿನ ಮಕ್ಕಳಮುದಾಸೀನಂಗೆಯ್ದು ನಿನಗೆ ರಾಜ್ಯಮುಂ ಕುಡಲೆಂದಿರ್ದೆನ್ನ ಚಿತ್ತಕ್ಕೆ ಸಂತಾಪಮುಂ ಮಾಡಿದೆಯಿನ್ನೆನ್ನಮೇಲೆ ಪಳಿಯುಂ ಪಾಪಮುಮಿಲ್ಲ. ಅದು ಕಾರಣದಿಂ ನಿನ್ನೆನ್ನಾಳ್ವದೇಶದೊಳಿರದೆ ಪೊರಮಟ್ಟು ಪೋಗೆ"ಂದು ಜಡಿದು ನುಡಿದಂ.

ನಯಸೇನ
(ಧರ್ಮಾಮೃತದಿಂದ)

## ಅಭ್ಯಸನಗಳು

**ಪ್ರಶ್ನೆಗಳು:-**

೧. ಲಲಿತಾಂಗನ ತಂದೆ ತಾಯಿಗಳು ಮಗನ ಅವಿವೇಕಕ್ಕೆ ಏಕೆ ಆಸ್ಪದ ಕೊಟ್ಟರು ?

೨. ಲಲಿತಾಂಗನ ಹಾವಳಿಯು ಎಲ್ಲಿ ಎಲ್ಲಿ ತಲೆದೋರಿತು ?

೩. ಪುರಜನರು ಲಲಿತಾಂಗನ ಉಪಟಳಕ್ಕೆ ಹೇಗೆ ಬೆದರಿದ್ದರು ?

೪. ಲಲಿತಾಂಗನ ಅವಿವೇಕಕ್ಕಾಗಿ ಅರಿಮಥನ ಮಹಾರಾಜನು ತಾನೇ ಅಪರಾಧಿಯೆಂದು ಏಕೆ ಬಗೆದನು ?

೫. ಮಗನಿಗೆ ತಿಳಿಹೇಳಿದ ಮೇಲೆ, ಮಹಾರಾಜನು ಮಗನೊಡನೆ ರಾಜನಂತೆ ವರ್ತಿಸಿದನೋ ? ತಂದೆಯಂತೆ ವರ್ತಿಸಿದನೋ ?

**ಭಾಷಾಭ್ಯಾಸ :—**

೧. ಮತ್ತಂ ಕುಮಾರನ ಭಯಮಂ......ಬೆಸಗೆಗೆ.
ಈ ಭಾಗದಲ್ಲಿ ಬಂದ, ಜನರು ಹೌಹಾರಿದ ವರ್ಣನೆಯನ್ನು ನಿರೀಕ್ಷಿಸಬೇಕು. ಶಿಕ್ಷಿಸದೆ ಮಕ್ಕಳು ಹೇಗೆ ಒಪ್ಪುವದಿಲ್ಲವೆಂಬುದನ್ನು ಎಷ್ಟು ಬಗೆಯಾಗಿ ಕವಿಯು ಹೇಳಿದ್ದಾನೆ ?

೨. ಈ ಕವಿತೆಯನ್ನೋದುವಾಗ ಆಗಿನ ಕಾಲದ ಸಾಮಾಜಿಕ ಸ್ಥಿತಿಯ ಪರಿಚಯವೂ ಆಗುವದು.
ಅಲ್ಲಿ ಗಾಣಿಗರ ಕೇರಿಗಳಿದ್ದವು. ಇದರಂತೆ ಮತ್ತೆ ಯಾವ ಯಾವ ಸಂಗತಿಗಳು ತಿಳಿದು ಬರುತ್ತವೆ ಎಂಬುದನ್ನು ಹೇಳಿರಿ.

೩. ದುರ್ಜನರೊಡಗೂಡಿದ ಮಾನಿಸರ್ಗೆ ಸದ್ಗುಣಮುಂಟೇ ? ಈ ವಾಕ್ಯದಲ್ಲಿಯ ವಿಚಾರವನ್ನು ವಿಸ್ತರಿಸಿ ಬರೆಯಿರಿ.

**ಶಬ್ದ ವಿಚಾರ :—**

೧. ಸೊರ್ಕು, ಪುರ್ಬು, ಕೊರ್ಬು, ಪೊರ್ದು, ಉರ್ಬು, ಈ ಶಬ್ದಗಳು ಇಂದು ಸೊಕ್ಕು, ಪುಬ್ಬು (ಹುಬ್ಬು), ಕೊಬ್ಬು, ಪೊದ್ದು (ಹೊದ್ದು), ಉಬ್ಬು, ಈ ರೂಪಗಳಾಗಿವೆ.

೨. ಕುಗ್ಗು, ನುಗ್ಗು, ತಿದ್ದು, ಈ ಶಬ್ದಗಳ ಹಳಗನ್ನಡ ರೂಪಗಳನ್ನು ಹೇಳಿರಿ.

**ವಾಕ್-ಶಿಕ್ಷಣ :—**

ಪುರದ ಜನರು ರಾಜನ ಆಸ್ಥಾನಕ್ಕೆ ಬಂದು ಲಲಿತಾಂಗನ ವಿರುದ್ಧ ದೂರನ್ನು ಹೇಳುವರು. ಮಹಾರಾಜನು ಮಗನನ್ನು ಹೊರಗೆ ಹಾಕಲು ಅಪ್ಪಣೆ ವಿಧಿಸುತ್ತಾನೆ. ಜನರು ಹೋದಮೇಲೆ ಮಹಾರಾಣಿಯು ರಾಜನನ್ನು ಮಗನಿಗೆ ಕ್ಷಮಿಸಲು ಕೇಳಿಕೊಳ್ಳುತ್ತಾಳೆ. ಈ ಸಂದರ್ಭದ ಒಂದು ದೃಶ್ಯವನ್ನು ರಚಿಸಿ ಅಭಿನಯಿಸಿರಿ.

ಮಕ್ಕಳನ್ನು ಮಮತೆಯಿಂದಲೇ ದಾರಿಗೆ ತರುವದು ಶಕ್ಯವೇ ?

**ಬರೆಹ :—**

ಸಹವಾಸದಿಂದ ಉಡಾಳನಾದ ಓರ್ವ ವಿದ್ಯಾರ್ಥಿಯ ಚಿತ್ರ.

# ೧೨. ಸಂಕಲ್ಪ

[ಬೀಜದಂತಹ ವೃಕ್ಷ; ಸಂಕಲ್ಪದಂತಹ ಫಲ. ಮೊದಲು ಸಂಕಲ್ಪ ಮಾಡುವಾಗ ತಪ್ಪುವುದು. ಬಂದ ಫಲ ಕಹಿಯಾಗಿರುವುದೆಂದು ಆಗ ಬಿಡುಕಾಡುವುದರಲ್ಲಿ ಫಲವಿಲ್ಲ. ಆದುದರಿಂದ ಸಂಕಲ್ಪಶುದ್ಧಿಯ ಬಗೆಗೆ ಎಚ್ಚರಾಗಿರುವದು ಅತ್ಯಗತ್ಯ. ಸರಿಯಾಗಿ ಉತ್ತಿ, ಒಳ್ಳೆಯ ಬೀಜ ಬಿತ್ತಿ ಫಲಕ್ಕಾಗಿ ಪರಮಾತ್ಮನಿಗೆ ಶರಣು ಹೋಗುವ ಪ್ರಾಮಾಣಿಕ ರೈತನು ಬಾಳಿನಲ್ಲಿ ಅನುಕರಣೀಯನಾಗಿದ್ದಾನೆ.]

ಬಯಸಿ ಬೇಡಿದ ಹಣ್ಣು
ಬಾಯಿಯಲಿ ಬಿದ್ದಿರಲು
ನುಂಗು ನುಂಗದನು ನೀನುಗುಳಬೇಡ
ಸಿಹಿ ಇರಲಿ ಕಹಿ ಇರಲಿ
ಹೇಗಾದರೂ ಇರಲಿ
ನುಂಗು ನುಂಗದನು ನೀ ಹೆದರಬೇಡ ॥೧॥
ಸಿಹಿ ಅದುವೆ ರುಚಿಕರವು
ಕಹಿ ಅದುವೆ ಹಿತಕರವು
ಯಾವುದೇನಿದ್ದರೂ ಪಥ್ಯಕರವು
ನಮ್ಮ ಪಾಲಿಗೆ ಬಂದು
ದೆಲ್ಲ ಪಂಚಾಮೃತವು
ಒಲ್ಲೆನೆವಬೇಡ ಸ್ವೀಕರಿಸು ಹಿತವು ॥೨॥
ಮೌನವಾಗಿರು ಮನವೆ
ಏನಾದರೂ ಒಳಿತು
ಹಾನಿಯೆಂಬುದು ಜಗಕೆ ಗೊತ್ತೆ ಇಲ್ಲಿ
ಏನಿರುವುದೆಲ್ಲವೂ
ಜೀವನದ ರಕ್ಷಣೆಗೆ
ದೀನ ರಕ್ಷಕನರಿತೆ ಹುಟ್ಟಿಸಿಹನು ॥೩॥
ಮನವೆ, ಮಾನಸ ಸರವೆ
ಬಂದ ಬೆಂಕಿಯನೆಲ್ಲ
ನುಂಗು ನಂದಿಸು ಮತ್ತೆ ಕುದಿಯಬೇಡ
ಶಾಂತವಾಗಿರು ಸತತ
ಚಿಂತಿಸುವದೇತಕೇ
ಶಾಂತದಲಿ ನಿನ್ನ ಗುಣವರಿತು ಸುಖಿಸು ॥೪॥

ಗೀತಾಪ್ರಿಯ

# ಅಭ್ಯಸನಗಳು

ಪ್ರಶ್ನೆಗಳು:—

೧. ಬಾಳಿನಲ್ಲಿ ಸಿಹಿ ಮತ್ತು ಕಹಿ ಹಣ್ಣು ಎಂದರೇನು ?
೨. ಜಗತ್ತಿನಲ್ಲಿರುವದೆಲ್ಲವೂ ಒಳಿತೆಂದು ಏಕೆ ಭಾವಿಸಬೇಕು ?
೩. ಸುಖವಾಗಿ ಬಾಳುವ ರೀತಿಯಾವುದು ?

ಭಾಷಾಭ್ಯಾಸ :—

೧. 'ಸುಖದ ಮಾರ್ಗ' 'ಬಾಳಹಣ್ಣು' 'ಹೆದರಬೇಡ'; ಈ ಮೂರರಲ್ಲಿ ಯಾವ ಶಿರೋನಾಮ ಈ ಕವನಕ್ಕೆ ಒಪ್ಪುವದು? 'ಸಂಕಲ್ಪ' ಎಂಬ ಶಿರೋನಾಮದ ಔಚಿತ್ಯವೇನು ?
೨. ಕೆಳಗಿನ ಸಾಲುಗಳಲ್ಲಿ ಅಡಕವಾಗಿರುವ ವಿಚಾರವನ್ನು ವಿಸ್ತರಿಸಿ ಬರೆಯಿರಿ.
(೧) ಪಾಲಿಗೆ ಬಂದುದೆಲ್ಲ ಪಂಚಾಮೃತವು.
(೨) ಕಹಿ ಅದುವೆ ಹಿತಕರವು.

ಶಬ್ದವಿಚಾರ:—

೧. ಕಹಿ, ನುಂಗು, ಮೌನ, ಪಥ್ಯಕರ, ಒಳಿತು, ನಂದಿಸು, ಇವುಗಳ ಮಾರುನುಡಿಗಳನ್ನು ಹೇಳಿರಿ.
೨. ಪಥ್ಯಕರ, ಹಿತಕರ; ಹೀಗೆ 'ಕರ' ಪ್ರತ್ಯಯ ಹಚ್ಚಿದ ಐದು ಶಬ್ದಗಳನ್ನು ಹೇಳಿರಿ.
೩. ಹಾನಿಯೆಂಬುದು, ನೀನುಗಳಬೇಡ, ಚಿಂತಿಸುವದೇಕೆ ಈ ಶಬ್ದಗಳನ್ನು ಸಂಧಿ ಬಿಡಿಸಿ ಬರೆಯಿರಿ.
೪. ಸಂಕಲ್ಪ, ಆಶೆ, ಮಹತ್ವಾಕಾಂಕ್ಷೆ, ಬಯಕೆ, ಇವುಗಳಲ್ಲಿರುವ ಅರ್ಥಭೇದವನ್ನು ಹೇಳಿರಿ.
೫. ಸಂಕಲ್ಪ ಮಾಡು, ನಿಶ್ಚಯ ಮಾಡು, ಪ್ರತಿಜ್ಞೆ ಮಾಡು, ಇವುಗಳಲ್ಲಿಯ ವ್ಯತ್ಯಾಸವನ್ನು ಹೇಳಿರಿ.

ವಾಕ್-ಶಿಕ್ಷಣ :—

ಬಾಳು ತಿಳಿಯಾಗಲು ಸಂಕಲ್ಪಶುದ್ಧಿಯೇ ಮೂಲಾಧರ. ಆದುದರಿಂದ ಮನಸ್ಸಿನ ಶುಚಿತ್ವ ಮತ್ತು ಪಾವಿತ್ರ್ಯವನ್ನು ಬೋಧಿಸುವ ಹಾಡುಗಳನ್ನು ಕೆಲವು ಪಾಠ ಮಾಡಲು ತಪ್ಪಲಾಗದು. 'ಬಿಡುಬಾಹ್ಯದೊಳು ದಂಭವ...' ಇಂತಹ ಹಾಡುಗಳನ್ನು ಸಂಗ್ರಹಿಸಬೇಕು.

ಚರ್ಚೆ :—

'ಪಾಲಿಗೆ ಬಂದುದು ಪಂಚಾಮೃತ' ಎಂಬುದು ಕೈಲಾಗದವರ ಲಕ್ಷಣ.

ಬರೆಹ :—

(೧) ನಿಮ್ಮ ಹುಟ್ಟು ಹಬ್ಬದ ದಿನ.
(೨) ಈ ಬಗೆಯ ಮಹನೀಯರಲ್ಲಿ ನೀವು ಯಾರನ್ನು ಆದರ್ಶವಾಗಿಟ್ಟುಕೊಳ್ಳುವ ಸಂಕಲ್ಪ ಮಾಡುವಿರಿ. ಏಕೆ ?

ಮದನನ ದಾಳಿ

೧. ರವೀಂದ್ರ
೨. ಮಹಾತ್ಮಾಜಿ
೩. ಜವಾಹರ
೪. ಸುಭಾಸ
೫. ಜನರಲ್ ತಿಮ್ಮಯ್ಯ
೬. ಸಿ. ವಿ. ರಾಮನ್.

# ೧೩. ಮದನನ ದಾಳಿ

[ವಿರಕ್ತರಲ್ಲೂ ಆಸಕ್ತಿಯುಂಟಾಗುವಂತೆ ಮಾಡಬಲ್ಲ ವಸಂತಕಾಲದ ಆಕರ್ಷಕ ವರ್ಣನೆಯು ಇಲ್ಲಿ ಉಂಟು.]

ಶಿವನೇ ತನಗೆ ಪತಿಯಾಗಬೇಕೆಂದು ಕಠಿಣ ತಪಸ್ಸನ್ನು ಗಿರಿಜೆಯು ಮಾಡುತ್ತಿದ್ದಾಗಲೇ, ಶಿವನು ವಿರಕ್ತನಾಗಿ ಯೋಗಧ್ಯಾನದಲ್ಲಿ ನಿರತನಾಗಿದ್ದನು. ಅವನ ಮನಸ್ಸನ್ನು ಗಿರಿಜೆಯ ಕಡೆಗೆ ತಿರುಗಿಸುವದಕ್ಕೆ ದೇವತೆಗಳು ಮದನನನ್ನು ಪ್ರೇರೇಪಿಸಲು,

ಮಾವುಗಳ್ಮದವೇರೆ ಮಲ್ಲಿಗೆ ಮನಂಗೊಳಿಸ
ಲಾ ವಿಮಲಚಂಪಕಂ ಸೊಂಪಡರೆ, ಬಕುಳವಿರ
ದಾವರಿಗೆ ಮುಕುಳಮಂ, ಪಾದರಿಗೆ ಪದವಿ ಪೆರ್ಚಲು
ಮದರ್ಗಂತಿಯಲರಂ ॥
ತೀವೆ, ಪೊಸ ತಳಿರುಗಳಶೋಕಗಳ್ತಳೆಯ ಚಂ
ದಾವರೆ ಗಳಲರೆ, ಚೆಲ್ವಾಗಿ ಬನಬನದೊಳಾಗ
ವೇಪೆಳ್ವೆ ! ಅಲರಂಬ ರಾಯನೆಡೆಗಾ ವಸಂತಂ
ಬಂದನುತ್ಸವದೊಳು ॥೧॥

ಬಂದು ಕಾಣ್ಕೆಯನಿಕ್ಕಿ; ಭಯ ಭರಿತ ಭಕ್ತಿಯಿಂ
'ಕಂದರ್ಪರಾಯ ! ಚಿತ್ತವಿಸೀಗಲೆನ್ನೊಡನೆ
ಬಂದ ಸೇನಾ ಸಮುದ್ರವನೆಂದು ಬಿನ್ನವಿಸುತಿರೆ ಕೇಳಿ,
ಚೈತ್ರನೊಡನೆ ॥

'ಇಂದುಧರನಿರ್ಪನಾ ಹೇಮ ಕೂಟಾಚಲದೊ
ಳಿಂದು ನಾವಾತನೆಲ್ಲಿಗೆಬೇಗ ಪೋಗ ಬೇ
ಕೆಂದು ಕರಿಸಿದೆವೆಂ'ದು ಪೇಳ್ದು ಸಂಭ್ರಮದಿಂದ
ಪೊರಮಡಲ್ಕನುವಾದನು ॥೨॥

ನವ ಪರಾಗದ ತಿಲಕಮಂ ರಚಿಸಿ, ಮಲ್ಲಿಗೆಯ
ವಿವಿಧ ಮುಕುಲದ ಕಂಠಮಾಲೆಯಂ ತಳೆದು, ಸೊಗ
ಸುವ ಕಂಜಗಣದ ವಸನದ ಮಲ್ಲಗಾಸೆಯಂ ಬಿಗಿದುಟ್ಟು
ಮಾಂದಳಿರೊಳು ॥

ಸವೆದ ಕೈಪೊಡೆಯ, ಚಂಗಣೆ ಗಿಳಿಯ ಗೊಂಡೆಯದ
ತವೆ ಮೆರೆವ ಕುಂದಕಿಂಕಿಣಿಯ ಪೂವಿನ ಬಿಲ್ಗೆ
ಸವಡಿಸಿದ ತುಂಬಿ, ಮುಡಿವಾಳಗಳ ಸಿಂಜಿನಿಯ
ಮಂಜುಳಾಂಗನು ಮೆರೆದನು ॥೩॥

ಎಸೆವ ಕಬ್ಬಿನ ಬಿಲನುರೆ ಪಿಡಿದು, ತುಂಬಿಗಳ
ಪೊಸತಿರುವನಳವಡಿಸಿ, ನನೆಯಂಬುಗಳನು ಸೇ
ರಿಸಿನೋಡಿ, ಹೆದೆಗಳೊಳ್ತೀವಿ, ಪೂವಿನ ರಸದ
ಜಲ್ಲಿಗಳ ನಾಂತು, ಬಳಿಕ ॥

ಮಿಸುಪ ಕೇದಗೆಯೆಸಳ ಕಿಗ್ಗಟ್ಟ ಕಟ್ಟಿ ರಂ-
ಜಿಸುವ ಪೂದೇರನಾ ರತಿಯ ಕೈವಿಡಿದಡರಿ
ಬಿಸಜಾತ ಪತ್ರಂಗಳಿಂದೆ, ಪೊಂಬಾಳೆಗಳ ಚಮರದಿಂ
ರಂಜಿಸಿದನು ॥೪॥

ಒಸೆದು ಕೂಜಿಸುವ ಕೋಕಿಲರವಂ ಬೃಹಿಂತಂ
ಮಿಸುಪ ಕೆಂದಳಿರೆ ಪಣೆಗಮರ್ದ ಸಿಂಧೂರಂ, ವಿ-
ಲಸಿತ ಷಟ್ಪದಿಗಳೆರಗಿನಿಗಂಪು ಮದಗಂಧಮಲದು
ಗೊನೆಗಳೆ ಕೋಡ್ಗಳು ॥

ನಸುಗಾಳಿಗೊಲೆದಾಡುವೆಳೆಗೊಂಬೆ ಸುಂಡಿಲಾ
ಗಸಕೆದ್ದನೆಟ್ಟಗೊಂಬೆಸೆವ ಟೆಕ್ಕೆಯುವಾಗ
ಲಸಮಶರನೆಡಬಲದೊಳಿಟ್ಟಣಸಿ ನಡೆವ ಮಾಮರ
ದಾನೆಗಳು ಮೆರೆದುವು ॥೫॥

ಗಳದ ಕಪ್ಪಿನ ಗೆರೆಯ ವಾಘೆ, ರೆಕ್ಕೆಗಳೆ ಮೈ
ಗಳವಟ್ಟ ಮರಕತದ ಪೊಸ ಪಕ್ಕರಕ್ಕೆ, ಮೇ
ಲುಲಿಯೆ ಹೇಷಾರವಂ ಗತಿಯ ಗಮಕವೆ
ಪಂಚಧಾರಾ ವಿಶೇಷವಾಗೆ ॥
ನಳಿನ ಸಾಯಕ ಚಕ್ರವರ್ತಿಯಿಕ್ಕೆಲದೊಳಗೆ
ಪೊಳೆವ ಖೇಚರ ಭೂಚರಂಗಳೊಳು ನಡೆಗೊಳ್ವ
ಗಳ ಗುದುರೆಗಳ ಹಿಂಡು ರಂಜಿಸದವಂದು; ಅದನೇನೆಂದು
ಬಣ್ಣಿಸುವೆನು ॥೬॥

ಚೂಳಿಯೊಳು ಮೈದೋರಿದಂ ಮಂದ ಮಾರುತಂ,
ಪಾಳಿಯಿನ್ನಡಸಿದಂ ಸೇನೆಯಂ ಸೇನಾನಿ,
ಪೇಳಲೇಂ ಸಕಲ ಭರ ಭಾರಮುಂ ಧರಿಸಿದಂ
ಚಂದ್ರಮಂ, ಮದನಬಲದ ॥
ಘೋಳಿಟ್ಟುದಖಿಳ ಖಗರವ ವಾದ್ಯ ನಿಸ್ವನಂ,
ಧೂಳಿ ಮುಸುರಿದುದು ಬೊಮ್ಮಾಂಡಮಂ ರತಿಯ ಸಂ
ಮೇಳದಿಂದೈದುವಂಗಜನ ಚಾತುರ್ಬಲಂ ನಡೆದುದೀ
ಶ್ವರನ ಮೇಲೆ ॥೭॥

ಮುನಿನಿಕರ ವಾರಾಶಿ ವಡಬಾನಲಂ, ಯೋಗಿ
ಜನ ಮದದ್ವಿಪ ಕುಂಭವಿದಳನ ಮೃಗೇಂದ್ರ, ಪಾ
ವನ ನೈಷ್ಠಿಕವ್ರಜ ಮನೋಹರಿಣ ಶಾರ್ದೂಲ,
ಯತಿಮೇಘ ಚಂಡ ಪವನ, ॥
ಘನಜಿತೇಂದ್ರಿಯ ಕುಧರಕುಲಿಶ, ವೈರಾಗಿಜನ
ವನದವಾನಲನೆಂದು ಪಾಠಕಾವಳಿಯಂದು
ಮನಸಿಜನ ಬಿರುದ ಕೊಂಡಾಡುತಿರೆ ಬೇಗ
ಪಂಪಾಕ್ಷೇತ್ರಕೈತಂದನು ॥೮॥

'ವಿರೂಪಾಕ್ಷ ಪಂಡಿತ'
(ಚೆನ್ನಬಸವ ಪುರಾಣದಿಂದ)

## ಅಭ್ಯಸನಗಳು

ಪ್ರಶ್ನೆಗಳು:—

೧. ಮದನನ ಬಿಲ್ಲಿನ ವರ್ಣನೆ ಹೇಳಿರಿ.
೨. ಮದನನ ಸೈನ್ಯದಲ್ಲಿ ಆನೆ ಮತ್ತು ಕುದುರೆಗಳ ವರ್ಣನೆಯನ್ನು ಹೇಳಿರಿ.
೩. ಪಾಠಕರು ಮದನನನ್ನು ಕೊಂಡಾಡುವ ಬಿರುದುಗಳನ್ನು ಹೇಳಿರಿ.

ಭಾಷಾಭ್ಯಾಸ:—

೧. ಇಲ್ಲಿ ಬಂದ ಮಾವುರಗಳ, ಗಿಳಿಗಳ ವರ್ಣನೆಯನ್ನು ಲಕ್ಷಿಸಬೇಕು.

೨. ಕವಿ ಸಂಕೇತಗಳನ್ನು ತಿಳಿದುಕೊಳ್ಳದಿದ್ದರೆ, ಪುರಾತನ ಕಥೆಗಳ ಇಂಗಿತಾರ್ಥವು ತಿಳಿಯದೆ, ಗೊಂದಲದಲ್ಲಿ ಬೀಳುವುದುಂಟು. ಪ್ರಸ್ತುತ ಮದನ ಅಥವಾ ಕಾಮನು ಎಂಬುದು ಒಂದು ವ್ಯಕ್ತಿಯಲ್ಲ; ಶಕ್ತಿ. ವ್ಯಕ್ತಿಯಂತೆ ವರ್ಣಿಸುವದು ಕವಿಗಳ ವಾಡಿಕೆ.

ವಿಶ್ವದಲ್ಲಿ ಸೃಷ್ಟಿನಿರ್ಮಾಣಕ್ರಿಯೆಗೆ ಪ್ರಚೋದಿಸುವ ಹಂಬಲ, ಇಚ್ಛೆಯನ್ನು 'ಕಾಮ' ಎಂದು ಕಲ್ಪಿಸಿದ್ದುಂಟು. ನವನಿರ್ಮಿತಿಗೆ ಪ್ರೋತ್ಸಾಹಕವಾದ ಅನುಕೂಲ ಸಂಗತಿಗಳೆಂದರೆ ಕಾಮನ ಸಹಕಾರಿಗಳು. ವಸಂತಕಾಲ, ಚಿಗುರು, ಹೊಗರು, ಹಕ್ಕಿಪಕ್ಕಿಗಳು, ಸಂಗೀತ ಇಂತಿವೆಲ್ಲವುಗಳೂ ಮನುಷ್ಯನನ್ನೇ ಆವರಿಸಿದ್ದ ನಿರಾಶೆ ನಿರುತ್ಸಾಹಗಳನ್ನು ಓಡಿಸಿ ಕೆಲಸಕ್ಕೆ ತೊಡಗಲು ಹುರಿದುಂಬಿಸುತ್ತವೆ. ಸೃಷ್ಟಿಯಲ್ಲಿ ಕಾಣಿಸಿಕೊಳ್ಳುವ ಈ ಸ್ವಾಭಾವಿಕ ಸ್ಥಿತಿಯನ್ನು ಕವಿಗಳು ಸಂಕೇತ ರೂಪಕಗಳಿಂದ ವರ್ಣಿಸಿ ಹೇಳುವದು ವಾಡಿಕೆಯಾಗಿದೆ.

ಮಹಾಭಾರತದ ಯಕ್ಷ ಪ್ರಶ್ನೆಯಲ್ಲಿ ಅಡಕವಾಗಿರುವ ಸಂಕೇತಗಳ ಅರ್ಥ ವಿವರಿಸಿರಿ.

ಶಬ್ದ ವಿಚಾರ:—

೧. 'ಮದನ' ಎಂಬ ಅರ್ಥದ ಇಲ್ಲಿ ಬಂದ ಪರ್ಯಾಯ ಶಬ್ದಗಳನ್ನು ಹುಡುಕಿ ಹೇಳಿರಿ.

೨. ಬ್ರಹ್ಮಾಂಡ, ಕಾವ್ಯ, ಕೇದಗೆ ಈಶ್ವರ, ವೃಷಭ, ಸಂತೆ, ಇವುಗಳ ತತ್ಸಮ ತದ್ಭವಗಳನ್ನು ಹೇಳಿರಿ.

೩. ಮೈದೋರು, ಮೈದಗೆ, ಮೈವೆರು, ಇವುಗಳನ್ನು ಒಂದೊಂದು ವಾಕ್ಯದಲ್ಲಿ ಉಪಯೋಗಿಸಿರಿ.

೪. ವಡವಾನಲ, ಕುಧರಕುಲಿಶ, ಅಸಮಶರ, ಬೃಂಹಿತ,ಮಲ್ಲಗಾಸೆ ಇವುಗಳ ಅರ್ಥವನ್ನು ಹೇಳಿರಿ.
ಅಸಮಶರ ಇದಕ್ಕೆ ಇರುವ ಎರಡರ್ಥವನ್ನು ಲಕ್ಷಿಸಿರಿ.

ವಾಕ್-ಶಿಕ್ಷಣ:—

ಬೇರೆ ಬೇರೆ ಋತುಗಳ ವರ್ಣನೆ ಮಾಡುವ ಪ್ರಾಚೀನ ಮತ್ತು ಆಧುನಿಕ ಕವಿಗಳ ಕೆಲವು ಪದ್ಯಗಳನ್ನು ಸಂಗ್ರಹಿಸಿ ಹೇಳಿರಿ.

ಚರ್ಚೆ:—

ತೃಪ್ತಿಯಿಂದ ಮನುಷ್ಯನ ಏಳಿಗೆ ಆಗಲಾರದು.

ಬರೆಹ:—

ನಿಮ್ಮ ಮೆಚ್ಚಿಗೆಯ ಒಂದು ಋತುವನ್ನು ಬಣ್ಣಿಸಿರಿ.

# ೧೪. ದ್ರೌಪದಿಯ ಮೊರೆ

[ಕೇಳುವವರ ಹೃದಯುವನ್ನು ಕಲುಕುವ ಕರುಣಾಪೂರ್ಣ ವರ್ಣನೆಯನ್ನಿಲ್ಲಿ ಕಾಣ ಬಹುದು. ಅನುಗುಣವಾದ ರಾಗದಲ್ಲಿ ಹಾಡಿದಲ್ಲಿ ಕಣ್ಣೀರು ಮಿಡಿಸುವ ಸಾಮರ್ಥ್ಯವು ಇದರಲ್ಲಿದೆ. ಇದನ್ನು ನಾಟ್ಯರೂಪವಾಗಿಯೂ ಆಡಬಹುದಾಗಿದೆ.

ದ್ರೌಪದಿಗೆ ಆದ ಅವಮಾನವನ್ನು ಕಂಡು ಭೀಮನಲ್ಲಿ ಉಂಟಾದ ಕೋಪೋದ್ರೇಕದ ವರ್ಣನೆಯು, ಕೇಳುವವರಲ್ಲಿಯೂ ಆವೇಶವನ್ನುಂಟು ಮಾಡುವಂತಿದೆ.

ಸ್ತ್ರೀಯರ ಅಳಲು ಮನೆತನದ ವಿನಾಶಕ್ಕೆ ಕಾರಣವಾಗುತ್ತದೆ. 'ಎಲ್ಲಿ ಹೆಣ್ಣುಮಕ್ಕಳಿಗೆ ಮನ್ನಣೆಯಿದೆಯೋ ಅಲ್ಲಿ ದೇವತೆಗಳು ನಲಿಯುತ್ತಿರುತ್ತಾರೆ.' ಎಂದು ಮನುವು ಹೇಳಿದ್ದಾನೆ. ಕೌರವ ಕುಲದ ಸಂಹಾರಕ್ಕೆ ದ್ರೌಪದಿಯ ಈ ಶಾಪದಿಂದಲೇ ಪ್ರಾರಂಭವಾಯಿತೆಂಬುದು ಸುಪ್ರಸಿದ್ಧವಿದೆ.]

ವ॥ ಜೂಜಿನಲ್ಲಿ ಸೋತ ಪಾಂಡವರ ಪತ್ನಿ ದ್ರೌಪದಿಯ ಸೀರೆ ಸೆಳೆದು ಅವ ಮಾನಗೊಳಿಸಲು ದುಃಶಾಸನನು ಮುನ್ನುಗ್ಗಿದನು. ಆಗ ಸಭೆಯಲ್ಲಿದ್ದವರನ್ನು ಬಿಡಿಸಿ ರೆಂದು ದ್ರೌಪದಿಯು ಕೇಳಿದುದು.

ಮುರಿದುದನಿಬರ ಮೋರೆ ಮಹಿಪನ
ಕೊರಳ ಕೊಂಕಿನಲಿರ್ದರಾಸೋ
ದರರು ಸಾರವನಲ್ಲಿ ಕಾಣದೆ ಭೀಷ್ಮ ಗುರು ಕೃಪರ।
ತರಳೆ ನೋಡಿದಳಕಟ ಗಂಗಾ
ವರ ಕುಮಾರ ದ್ರೋಣ ಕೃಪರಿರ
ಸೆರಗ ಬಿಡಿಸಿರೆ ತಂದೆಗಳಿರೆಂದೊರಲಿದಳು ತರಳೆ ॥೧॥

ಕ್ರೂರನೀ ದುಃಶಾಸನನು ಗಾಂ
ಧಾರಿ ಬಿಡಿಸೌ ತಾಯೆ ಸೊಸೆಯ
ಲ್ಲಾರು ಹೇಳೌ ತಂಗಿಯಲ್ಲವೆ ಭಾನುಮತಿ ನಿನಗೆ।
ಧೀರ ಸೈಂಧವನರಸಿ ರಾಜಕು
ಮಾರಿ ನೀ ನಾದಿನಿಯಲಾ ಖಳ
ಕೌರವದೊಳದ್ದಿವದ ತೆಗಿಸೆಂದೊರಲಿದಳು ತರಳೆ ॥೨॥

ಎಲೆ ವಿಳಾಸಿನಿಯರಿರ ಭೂಪನ
ತಿಳುಹಿರೌ ತಾಯ್ಗಳಿರಾ ನೀವೆಂ
ದೆಲೆ ಪಸಾಯತೆಯರಿರ ಸೋದರಿಯೆಂದು ಕೌರವನ।

ತಿಳುಹಿ ತಾ ಶರಣಾಗತರ ತಾ
ನೊಲಿದು ಕಾವುದು ಧರ್ಮಕಕಟಾ
ಕಲು ಹೃದಯರ್ಕ್ಕೆ ನೀವೆನುತ ಹಲುಬಿದಳು ತರಳಾಕ್ಷಿ ॥೩॥
ಧಾರುಣೀಪತಿಗಳಿರ ರಾಜಕು
ಮಾರರಿರ ಮಂತ್ರಿಗಳಿರಾ ಪರಿ
ವಾರಕಿದು ಪಂಥವ ವಿಚಾರಿಸಿ ನಿರಪರಾಧಿಯನು ।
ನಾರಿಯೊಬ್ಬಳನಕಟ ಸಭೆಯಲಿ
ಸೀರೆಯುಡಿಯುರ್ಚುವರೆ ಕೆಟ್ಟೆನು
ಕಾರುಣಿಕರಿಲ್ಲಾ ಶಿವಾ ಎಂದೊರಲಿದಳು ತರಳೆ ॥೪॥
ಪತಿಗಳೆನ್ನನು ಮಾರಿ ಧರ್ಮ
ಸ್ಥಿತಿಯ ಕೊಂಡರು ಭೀಷ್ಮ ಮೊದಲಾ
ದತಿರಥರು ಪರಹಿತವ ಬಿಸಟಿಹರರ್ಥಭೀತಿಯಲಿ ।
ಸುತನ ಕಡುಸಿರಿ ಸೊಗಸಲಾ ಭೂ
ಪತಿಗೆ ಗಾಂಧಾರಿಗೆಯನಾಥೆಗೆ
ಗತಿಯ ಕಾಣೆನು ಶಿವಶಿವಾ ಎಂದೊರಲಿದಳು ತರಳೆ ॥೫॥

ಆಗ ಶ್ರೀ ಕೃಷ್ಣನನ್ನು ಮೊರೆ ಹೊಕ್ಕು

ಮೈದೆಗೆದುವೀ ಪ್ರಾಣವಾಯುಗ
ಳೈದುಃಬಳಿಕಿದಕಾರು ಮೊರಗುವ
ರೈದೆ ತನುವೊಂದುಳಿಯಲುಳಿವುವು ಮಿಕ್ಕ ಮಹಿಮೆಗಳು ।
ಬೈದು ಫಲವೇನಿನ್ನು ನಿನ್ನಯ
ಮೈದುನರ ಮರಳಾಟಕೆನ್ನನು
ಕಾಯ್ದುಕೊಳ್ಳೈ ಕೃಷ್ಣಯೆಂದೊರಲಿದಳು ತರಳಾಕ್ಷಿ ॥೬॥

ಕೋಪದಿಂದ ಭೀಮ ಎದ್ದುದು-

ಕಡಲ ತೆರೆಗಳ ತರುಬಿ ತುರುಕುವ
ವಡಬನಂತಿರೆ ಮೇಘಪಟಲವ
ನೊಡೆದು ಸೂಸುವ ಸಿಡಿಲಿನಂತಿರೆ ಸಭೆಯೊಳಡ ಹಾಯ್ದು ।
ಕುಡಿ ಕುಠಾರನ ರಕುತವನು ತಡೆ
ಗಡಿ ಸುಯೋಧನನೂರುಗಳನಿ
ಮ್ಮಡಿಸಿ ಮುನಿಯಲಿ ಧರ್ಮಸುತನೆಂದೆದ್ದನಾ ಭೀಮ ॥೭॥
ಹೆದರು ಹೊಕ್ಕುದು ಸಭೆಗೆ ಕೌರವ
ನೆದೆ ಬಿರಿದುದಾಸ್ಥಾನ ಜಲನಿಧಿ
ಕದಡಿತುಕ್ಕಿದ ಬೆರಗಿನಲಿ ಬೆಳ್ಕಾದನವನೀಶ ।

ಹದನಹುದು ಹಾಯೆನುತಲಿರ್ದುದು
ವಿದುರ ಭೀಷ್ಮ ದ್ರೋಣ ಕೃಪರೀ
ಕೆದರುಗೇಶದ ಕಾಂತೆ ಹುದಿದಳು ಹೆರುಷಭಾರದಲಿ ॥೮॥

ಭೀಮನು ಕೋಪದಿಂದ ಬಿರುನುಡಿಗಳನ್ನಾಡಿ ಪಾಂಚಾಲಿಯನ್ನು ಸಮಾಧಾನ ಪಡಿಸುವದು.

ಉರಿವ ಕೋಪಾಗ್ನಿಯಲಿ ಕರ್ಣನ
ಶಿರದ ಭಾಂಡದಲಿವನ ನೊರೆನೆ
ತ್ತರಿನಲವನಗ್ರಜನ ಕೊಬ್ಬಿದ ನೆಣನ ಕೊಯ್ಕೊಯ್ದು ।
ದುರುಳ ಶಕುನಿಯ ಕಾಳಿಜದೊಳೊಡೆ
ವೆರಸಿ ಕುದಿಸಿ ಮಹೋಗ್ರಭೂತದ
ನೆರವಿಗುಣಲಿಕ್ಕುವೆನು ಸತಿ ಕೇಳೆಂದನಾ ಭೀಮ ॥೯॥

ಕೊಂಬೆನೇ ಧರ್ಮಜನ ಧರ್ಮದ
ಡೊಂಬಿಯನು ಮುದಿಗುರುಡನಿಕ್ಕಿದ
ನಂಬುಗೆಯ ವಿಷವ್ಯೆ ಸಲೆತಲೆಗೇರಿತಗ್ರಜನ ।
ಡೊಂಬಿಗರಡಾವರಿಗರಿವದರ
ತಿಂಬೆನೀಗಳೆ ತರಳೆ ಕೇಳೆನು
ತಂಬುಜಾಕ್ಷಿಯ ಸಂತವಿಟ್ಟನು ಕುರಳನೇವರಿಸಿ ॥೧೦॥

ಮುಡಿಯ ನೀ ಕಟ್ಟೆಲಗೆ ಸತಿಯೆನೆ
ನುಡಿದಳಾ ಕಾಂತಂಗೆ ವಚನವ
ಮುಡಿಯ ಕಟ್ಟುವ ಕಾಲವೀ ದುಶ್ಯಾಸನನ ಶಿರವ ।
ಕೆಡಹಿ ಶಾಕಿನಿಯರಿಗೆ ರಕುತವ
ಕುಡಿಸಿ ತಣಿಯಲು ಕರಳುದಂಡೆಯ
ಮುಡಿವ ವ್ರತವೆನಗಿಹುದು ನೀ ಹೇಳಿದಕೆ ನಿರ್ವಾಹ ॥೧೧॥

ಐಸಲೇಯೀ ವ್ರತದ ನಿನ್ನಯ
ಭಾಷೆ ನಮ್ಮದು ಸತಿಯೆಯೀದು-
ಶ್ಯಾಸನನ ತೊಡೆಗಡಿದು ಶಾಕಿನಿಯರಿಗೆ ರಕುತವನು ।
ಸೂಸುತೆರೆವೆನು ತರುಣಿ ಸೊಕ್ಕಿದ
ದೂಷಕನ ನೆರೆಸೀಳಿ ನಿನ್ನಯ
ಕೇಶವನು ಕಟ್ಟಿಸಿಯೆ ಮುಡಿಸುವೆ ಕರುಳದಂಡೆಗಳ ॥೧೨॥

ಕುಮಾರವ್ಯಾಸ

## ಅಭ್ಯಸನಗಳು

**ಪ್ರಶ್ನೆಗಳು:—**

೧. ದ್ರೌಪದಿಯು ಭೀಷ್ಮ, ದ್ರೋಣ ಮೊದಲಾದವರಿಗೆ ಏಕೆ ಮೊರೆ ಹೋಗಬೇಕಾಯಿತು.

೨. ಸಭೆಯಲ್ಲಿ ನೆರೆದ ಸ್ತ್ರೀಯರಿಗೆ ದ್ರೌಪದಿಯು ಬೇಡಿಕೊಂಡುದುದೇನು ?

೩. ಪಾಂಡವರು ಮತ್ತು ಭೀಷ್ಮ ಮೊದಲಾದವರು ದ್ರೌಪದಿಯ ನೆರವಿಗೆ ಏಕೆ ಬರಲಿಲ್ಲ?

೪. ಭೀಮನ ಯಾವ ಮಾತುಗಳಿಂದ ದ್ರೌಪದಿಗೆ ಸಮಾಧಾನವಾಯಿತು ?

೫. ದ್ರೌಪದಿಯು ಕೈಕೊಂಡ ಪಣವಾವುದು ?

೬. ಸಿಟ್ಟಿಗೆದ್ದ ಮನುಷ್ಯನು ವಿವೇಕಶೂನ್ಯನಾಗುವನು, ಎಂಬ ಸಂಗತಿ ಭೀಮನ ಯಾವಯಾವ ಮಾತುಗಳಿಂದ ವ್ಯಕ್ತವಾಗುವದು ?

**ಭಾಷಾಭ್ಯಾಸ:—**

೧. ಕರುಣೆ ಮತ್ತು ಕೋಪ ಇವೆರಡು ಭಾವಗಳನ್ನು ವ್ಯಕ್ತಪಡಿಸುವ ಭಾಷೆಯಲ್ಲಿರುವ ವ್ಯತ್ಯಾಸವನ್ನು ಗಮನಿಸಿರಿ.
ಕರುಣೆಯಲ್ಲಿ ಮೃದುವರ್ಣಗಳಿಂದಾದ ಶಬ್ದ,
ಸಿಟ್ಟಿನಲ್ಲಿ ಕರ್ಕಶವರ್ಣ ಮಹಾಪ್ರಾಣಾದಿಗಳಿಂದ ಕೂಡಿದ ಶಬ್ದಗಳು ಬಂದಿರುವದನ್ನು ಎತ್ತಿ ತೋರಿಸಿರಿ.

೨. ಸಿಟ್ಟಿನ ಅವಸ್ಥೆಯನ್ನು ವರ್ಣಿಸಲು ಉಪಯುಕ್ತವಾದ ಶಬ್ದಗಳನ್ನು ಆಯ್ದು ಹೇಳಿರಿ.

**ಶಬ್ದ ವಿಚಾರ:—**

೧. ಮುಡಿ, ಕುಡಿ, ಹೊರು, ಕುಣಿ, ಇವುಗಳನ್ನು ಧಾತುವಾಗಿಯೂ ನಾಮವಾಗಿಯೂ ಉಪಯೋಗಿರಿ.

೨. ಪಣತೊಡು, ಗೆರೆದಾಟು, ಇವುಗಳಿಗೆ ಸಮಾನವಾದ ಬೇರೆ ಪಡಿನುಡಿಗಳನ್ನು ಹೇಳಿರಿ.

**ಛಂದಸ್ಸು:—**

೨ ನೆಯ ನುಡಿಯ ಪ್ರಸ್ತಾರ ಹಾಕಿರಿ.
ಇದು ಮಾತ್ರಾವೃತ್ತ. ಇಲ್ಲಿ ಅಕ್ಷರ ವೃತ್ತದಂತೆ ಮೂರು ಮೂರು ಅಕ್ಷರಗಳಿಗೇ ಒಂದೊದು ಗಣವಲ್ಲ. ೨, ೩, ೪, ೫ ಹೀಗೆ ಅನುಕೂಲತೆಯಂತೆ ಹೆಚ್ಚುಕಡಿಮೆ ಮಾತ್ರೆಗಳ ಗಣಗಳಿರಬಹುದು.

**ವಾಕ್-ಶಿಕ್ಷಣ:—**

೧. ಈ ಭಾಗವನ್ನು ನಾಟಕ ರೂಪವಾಗಿ ಅಭಿನಯಿಸಿರಿ.

೨. ಶ್ರೀ. ಕೃಷ್ಣಮೂರ್ತಿ ಪುರಾಣಿಕರು ಬರೆದ 'ಸೈರಂಧ್ರಿ' ಎಂಬ ಸರಳರಗಳೆಯಲ್ಲಿರುವ ನಾಟಕವನ್ನು ಓದಿರಿ.

ಚರ್ಚೆ:—

ಧರ್ಮನು ದ್ರೌಪದಿಯ ಮಾನಕಾಯದೆ ಕುಳಿತುದು ಧರ್ಮವೇ ?

ಬರೆಹ:—

'ಇಮ್ಮಡಿಸಿ ಮುನಿಯಲಿ ಧರ್ಮಸುತ' ಎಂದು ಭೀಮನು ನುಡಿದಾಗ ಧರ್ಮರಾಜನ ಮನದಲ್ಲಿ ಉಂಟಾಗಬಹುದಾದ ಭಾವನೆಗಳನ್ನು ಕುರಿತು ಬರೆಯಿರಿ.

# ೧೫. ಚೆನ್ನ !

[ನಮ್ಮ ಧರ್ಮ, ಮತ, ರೀತಿ, ನಡೆವಳಿಗಳಿಂದಲೇ ದೇವರು ಮೆಚ್ಚುವನು, ಎಂಬ ಗ್ರಹಿಕೆಯು ತಿಳಿಗೇಡಿತನದ್ದು. ಎಂಬುದನ್ನು ಸುಲಭ ಭಾಷೆಯಲ್ಲಿ ವಿವರಿಸುವ ಒಂದು ಹಾಡು.]

ಭಿನ್ನ ಮತಗಳ ಜಗಳವೇತಕೆ
ಚೆನ್ನ ನೀನೊಬ್ಬನಿರಲು ॥ಪಲ್ಲ॥

ತೋಡಿಯಾದರು ಮೇಣುಮಾಕಾಂಬೋದಿಯಾದರು ನಾಟಿಯಾದರು
ಭೇದವಿಲ್ಲದೆ ನಿನ್ನ ನಾಮನ ಪಾಡಲಿಲ್ಲವೆ ಎಲ್ಲವು ॥೧॥

ಕಾವಿಯುಟ್ಟರು, ಸೀರೆ ತೊಟ್ಟರು, ಽವಿಯುಡುಪನು ತೊಟ್ಟು ನಲಿದರು
ಯಾವ ವೇಷದಿ ಬಂದು ನಿಂತರು ತಾಯಿ ಕಂದನ ತಿಳಿಯಳೇ? ॥೨॥

ಕಲ್ಲು ಸಕ್ಕರೆ ತರುವಳೊಬ್ಬಳು ಬೆಲ್ಲಬಾಳೆಯ ಹಣ್ಣನೊಬ್ಬಳು
ಇಲ್ಲದಳು ತಾ ಕೈಯ ಮುಗಿವಳು ಎಲ್ಲ ನಿನ್ನಡಿಗಾಗಿರೆ ॥೩॥

—ಜಯಮ್ಮ

## ಅಭ್ಯಸನಗಳು

ಪ್ರಶ್ನೆಗಳು:-

೧. ವಿವಿಧ ರಾಗಗಳಿಗೂ ಭಿನ್ನ ಮತಗಳಿಗೂ ಇರುವ ವತ್ಯಾಸವೇನು ?
೨. ದೇವನನ್ನು ತಾಯಿಗೆ ಹೋಲಿಸಿದ ಔಚಿತ್ಯವನ್ನು ಹೇಳಿರಿ.
೩. 'ಕಲ್ಲು ಸಕ್ಕರೆ' 'ಬೆಲ್ಲಬಾಳೆಯ ಹಣ್ಣು' ಇವು ಯಾವುದರ ಸಂಕೇತಗಳಾಗಿವೆ ?

**ಭಾಷಾಭ್ಯಾಸ :—**

ಈ ಕವನದಲ್ಲಿರುವ ಉಪಮಾನ ಉಪಮೇಯಗಳನ್ನು ನೋಡಿರಿ.

**ಶಬ್ದ ವಿಚಾರ :—**

ಉಡುಪು, ತೊಡಪು, ಹೀಗೆ 'ಪು' ಪ್ರತ್ಯಯವನ್ನು ಹಚ್ಚಿದ ಕೃನ್ನಾಮಗಳನ್ನು ಹೇಳಿರಿ.

**ವಾಕ್-ಶಿಕ್ಷಣ :—**

ಎಲ್ಲ ಧರ್ಮದ ತತ್ವಗಳು ಒಂದೇ ಆಗಿವೆ ಎಂಬದನ್ನು ಉದಾಹರಣೆಗಳಿಂದ ಹೇಳಿರಿ.

**ಚರ್ಚೆ :—**

ಭಿನ್ನ ಮತಗಳು ನಿರ್ಮೂಲವಾಗದೆ ಮತಗಳ ಜಗಳ ಕೊನೆಗೊಳ್ಳಲಾರದು.

**ಬರೆಹ :—**

ವಿವಿಧ ರುಚಿಗಳಿಂದಲೇ ಊಟಕ್ಕೆ ಸವಿ ಹೆಚ್ಚುತ್ತದೆ.

# ಲೇಖಕರ ಪರಿಚಯ.

## ೧. ಶ್ರೀ. ವೆಂಕಣ್ಣಾಚಾರ್ಯ ಹೋಳೀಕಟ್ಟಿ.

ಇವರು ಆಳವಾದ ವಿಚಾರ ವ್ಯಾಸಂಗಗಳ ಹಂಬಲವುಳ್ಳವರು. ಮಹಾತ್ಮಾಜಿಯವರ ' ಪ್ರಾರ್ಥನೆಗಳನ್ನು ಪರಿವರ್ತಿಸುವಲ್ಲಿ ಇವರ ಲೇಖನಶಕ್ತಿಯು ಚೆನ್ನಾಗಿ ವ್ಯಕ್ತವಾಗಿದೆ. ಪ್ರಾರ್ಥನೆಯ ಬಗೆಗೆ ಸ್ವತಂತ್ರ ಕೃತಿಯೊಂದು ಬೇಗನೆ ಪ್ರಕಟವಾಗಲಿದೆ.

## ೨. ಶ್ರೀ. ಸ. ಸ. ಮಾಳವಾಡ.

ಸಾಹಿತಿಗಳೂ ವಿಮರ್ಶಕರೂ ಆದ, ಪ್ರೊ. ಸ. ಸ. ಮಾಳವಾಡರು ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದು ಕನ್ನಡ ಸಂಶೋಧನ ಸಂಸ್ಥೆಯ ಸಂಚಾಲಕರೂ ಆಗಿದ್ದಾರೆ. " ಕರ್ನಾಟಕ ಸಾಹಿತ್ಯ ಸಂಸ್ಕೃತಿ ದರ್ಶನ " ಎಂಬ ಅವರ ಗ್ರಂಥ ಅವರ ವಿಮರ್ಶನ ಸಾಮರ್ಥ್ಯವನ್ನೂ ಪಾಂಡಿತ್ಯವನ್ನೂ ಎತ್ತಿ ತೋರಿಸುತ್ತದೆ.

## ೩. ಶ್ರೀ. ಬಸವರಾಜ ಕಟ್ಟೀಮನಿ.

ಆರೇಳು ಕಾದಂಬರಿಗಳನ್ನು, ಅನೇಕ ಕತೆಗಳನ್ನು ಬರೆದ ಶ್ರೀ. ಬಸವರಾಜ ಕಟ್ಟೀಮನಿಯವರು ಇಂದಿನ ತರುಣ ಲೇಖಕರಲ್ಲಿ ಗಣ್ಯರಾದವರೊಬ್ಬರು. ಸಮಾಜದಲ್ಲಿಯ ಢಾಂಬಿಕತನವನ್ನು ಕಂಡು ರೊಚ್ಚಿಗೆದ್ದು ನಿಸ್ಪೃಹವಾಗಿ ಬರೆಯುತ್ತಾರೆ. ನೊನೆಯಾದ ಇವರ ಬರವಣಿಗೆಯ ಶೈಲಿ ಅವರ ಉದ್ದೇಶಗಳಿಗೆ ಸರಿಯಾಗಿ ಬಾಗಿ ಕೆಲಸ ಮಾಡುತ್ತಿದೆ. ಇವರು ಬೆಳಗಾವಿ ಹತ್ತಿರದ ಕುಂದರ ನಾಡಿನಲ್ಲಿಯ ಮಲಾಮರಡಿಯವರು.

## ೪. ಶ್ರೀ. ತಲಚೇರಿ ರಂಗರಾಯ.

ಮಂಗಳೂರಿನ ಇವರು ಬೆಳಗಾಂವಿಯಲ್ಲಿ ವಕೀಲಿ ವೃತ್ತಿಯನ್ನು ನಡಸುತ್ತಿದ್ದರೂ ಸಾಹಿತ್ಯದಲ್ಲಿ ತುಂಬಾ ಆಸಕ್ತಿಯುಳ್ಳವರು. ಅನೇಕ ನಗೆ ಬರಹಗಳನ್ನೂ ಪತ್ತೆ ದಾರಿ ಕತೆಗಳನ್ನೂ ಬರೆದಿದ್ದಾರೆ. " ಹುಟ್ಟದವನ ಖೂನಿ ಮತ್ತು ಇತರ ಕತೆಗಳು " ಮತ್ತು " ಇಂದ್ರಚಾಪ " ಎಂಬ ಪುಸ್ತಕಗಳಲ್ಲಿ ಇವರ ಕತೆಗಳು ಬಂದಿವೆ. ಇದುವರೆಗೆ ಇಂಗ್ಲೀಷಿನಲ್ಲಿಯೇ ಸಿಕ್ಕುತ್ತಿದ್ದ ಕಾನೂನಿನ ಗ್ರಂಥಗಳನ್ನು ಕನ್ನಡಿಸಿ ಕಾನೂನಿನ ಜ್ಞಾನವನ್ನು ಕನ್ನಡಿಗರಿಗೆ ಮಾಡಿಕೊಡುತ್ತಿದ್ದಾರೆ.

## ೫. ಶ್ರೀ. ಬಿ. ಎಂ. ಶ್ರೀಕಂಠಯ್ಯನವರು.

ಕನ್ನಡಿಗರ ಜೀವನದಲ್ಲಿಯಾಗಲಿ, ವಿದ್ಯಾಭ್ಯಾಸಕ್ರಮದಲ್ಲಿಯಾಗಲಿ, ಕನ್ನಡಕ್ಕೆ ಯಾವ ಸ್ಥಾನವೂ ಇಲ್ಲದಾಗ, ಕನ್ನಡಕ್ಕಾಗಿ ಶ್ರಮಿಸಿ ಹೊಸಗನ್ನಡ ಗದ್ಯ ಪದ್ಯಗಳಿಗೆ ಸ್ಫೂರ್ತಿಯನ್ನು ಒದಗಿಸಿದ 'ಶ್ರೀ' ಯವರು ಮೈಸೂರ ವಿಶ್ವವಿದ್ಯಾನಿಲಯದಲ್ಲಿ ಆಂಗ್ಲ ಸಾಹಿತ್ಯದ ಪ್ರಾಧ್ಯಾಪಕರಾಗಿದ್ದರು. ತಮ್ಮ 'ಇಂಗ್ಲೀಷ್ ಗೀತಗಳು' ಎಂಬ ಕವನ ಸಂಗ್ರಹದಿಂದ ಕನ್ನಡ ಕಾವ್ಯಕ್ಕೆ ಹೊಸ ರೀತಿಯನ್ನು ತೋರಿಸಿಕೊಟ್ಟರು. ಅವರು ಬರೆದದ್ದು ಕೆಲವೇ ಪ್ರಬಂಧ, ಅನುವಾದಗಳು ಆಗಿದ್ದರೂ ಅವರು ಒದಗಿಸಿದ ಸ್ಫೂರ್ತಿ ಉತ್ತೇಜನಗಳು ಅವರ ಅನೇಕ ಶಿಷ್ಯರ ಕೃತಿಗಳ ಮೂಲಕ ಕನ್ನಡ ಸಾಹಿತ್ಯದ ಇಂದಿನ ವಿಕಾಸ, ವೈವಿಧ್ಯಕ್ಕೆ ಕಾರಣವಾಗಿವೆ.

## ೬. ಶ್ರೀ. ಜಿ. ಪಿ. ರಾಜರತ್ನಂ.

ಮೈಸೂರ ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಾಪಕರಾವ ಶ್ರೀ. ರಾಜರತ್ನಂ ಅವರು ಪ್ರಸಿದ್ಧ ಕವಿಗಳು. ಇವರ 'ಯೆಂಡ್ಕುಡ್ಕ ರತ್ನ' ಕನ್ನಡ ಕಾವ್ಯದಲ್ಲಿ ಒಂದು ಹೊಸ ದಾರಿಯನ್ನೇ ತೋರಿಸಿತು. ಒಳ್ಳೆಯ ರಸಾಭಿಜ್ಞರು, ನಗೆಗಾರರು. ಮಕ್ಕಳಿಗಾಗಿ ಅನೇಕ ಕತೆಗಳನ್ನು, ಹಾಡುಗಳನ್ನು ಬರಿದಿದ್ದಾರೆ. ಹಳಗನ್ನಡ ಸಾಹಿತ್ಯದ ಮತ್ತು ಪಾಲಿ ಸಾಹಿತ್ಯಕೃತಿಗಳ ಅನೇಕ ಪರಿಚಯಾತ್ಮಕ ಗ್ರಂಥಗಳನ್ನು ಬರೆದಿದ್ದಾರೆ.

## ೭. ಶ್ರೀ ದೇವುಡು ನರಸಿಂಹಶಾಸ್ತ್ರಿಗಳು.

ಬೆಂಗಳೂರಿನ ಹಿರಿಯ ಸಾಹಿತಿಗಳಲ್ಲೊಬ್ಬರು. 'ಮಯೂರ' 'ಮಹಾಬ್ರಾಹ್ಮಣ' ಮುಂತಾದ ಕಾದಂಬರಿಗಳನ್ನು, ಕತೆಗಳನ್ನು ಬರೆದಿದ್ದಾರೆ. ಹಳೆಯ ಕಾಲದ ಕತೆಗಳನ್ನು ಅವಕ್ಕೆ ತಕ್ಕುದಾದ ಪರಿಸರ ವಾತಾವರಣಗಳನ್ನು ನಿರ್ಮಿಸಿಕೊಂಡು ಮನಮುಟ್ಟುವಂತೆ ಹೇಳುವುದು ಇವರ ವಿಶೇಷ. ಬಲವಾದ ಊಹಾಶಕ್ತಿಯಿಂದ ಇದು ಸಾಧ್ಯ. ಆ ಊಹಾಸಾಮರ್ಥ್ಯವನ್ನು ಅವರ ಯಾವ ಕತೆಯಲ್ಲಿಯೂ ನಾವು ಕಾಣಬಹುದು. ಚೊಕ್ಕಟವಾದ ಕನ್ನಡ ಶೈಲಿ ಇವರ ಬರೆಹಗಳ ವೈಶಿಷ್ಟ್ಯವಾಗಿದೆ.

## ೮. ಶ್ರೀ. ಜಿ. ಆರ್. ರಂಗಸ್ವಾಮಿ.

ಇವರು ಮೈಸೂರ ವಿದ್ಯಾ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಬರವಣಿಗೆ ಬಹಳವಾಗಿರದಿದ್ದರೂ ಬರೆದದ್ದು ಚೊಕ್ಕಚಿನ್ನದ ಹಾಗಿರುತ್ತದೆ. ಅವರು ಬರೆದ ಕೆಲವು ಲೇಖನಗಳು "ಪ್ರಬುದ್ಧ ಕರ್ನಾಟಕ" ಪತ್ರಿಕೆಯಲ್ಲಿ ಪ್ರಕಟವಾಗಿದೆ.

## ೯. ಶ್ರೀ. ಎನ್. ಸೂರಪ್ಪ.

ಇವರು ಚಿತ್ರದುರ್ಗದವರು. ಪತ್ತೆದಾರಿ ಕತೆಕಾದಂಬರಿಗಳನ್ನು ಬರೆಯುವದರಲ್ಲಿ ಒಳ್ಳೆಯ ಆಸಕ್ತಿ, ಯೋಗ್ಯತೆಯನ್ನು ತೋರ್ಪಡಿಸಿದ ಉದಯೋನ್ಮುಖ ಬರೆಹಗಾರರು. ಇವರ ಅನೇಕ ಕತೆಗಳು 'ಜಯಂತಿ' ಮಾಸಪತ್ರಿಕೆಯಲ್ಲಿ ಪ್ರಕಟವಾಗಿವೆ.

## ೧೦. ಶ್ರೀ. ಬೆಟಗೇರಿ ಕೃಷ್ಣಶರ್ಮರು.

"ಆನಂದ ಕಂದ" ಇದು ಶ್ರೀ. ಬೆಟಗೇರಿ ಕೃಷ್ಣಶರ್ಮರ ಕಾವ್ಯನಾಮ. ಅವರು ಕವಿಗಳು, ಕತೆಗಾರರು, ಕಾದಂಬರಿಕಾರರು. 'ಜಯಂತಿ' ಮಾಸಪತ್ರಿಕೆಯ ಸಂಪಾದಕರು. ಹಳ್ಳಿಗಾಡಿನ ಜೀವನದ ಹಿನ್ನೆಲೆಯಲ್ಲಿ ಕತೆಗಳನ್ನು ಕಟ್ಟುವುದು, ಅಲ್ಲಿಯ ಬಾಳಿನ ವೈಶಿಷ್ಟ್ಯಪೂರ್ಣವಾದ ಚಿತ್ರಗಳನ್ನು ಕೊಡುವದು ಶ್ರೀ. ಬೆಟಗೇರಿಯವರ ವಿಶೇಷ. 'ರಾಜಯೋಗಿ,' 'ಅಶಾಂತಿಪರ್ವ' ಎಂಬ ವಿಜಯನಗರದ ಇತಿಹಾಸಕ್ಕೆ, ಸಂಬಂಧಿಸಿದ ಕಾದಂಬರಿಗಳನ್ನಲ್ಲದೆ, ಇತ್ತೀಚೆ 'ಸುದರ್ಶನ' 'ಮಗಳ ಮದುವೆ' ಎಂಬ ಸಾಮಾಜಿಕ ಕಾದಂಬರಿಗಳನ್ನೂ ಬರೆದಿದ್ದಾರೆ. ಇವರ ಅನೇಕ ಭಾವಗೀತೆಗಳು ಹಾಡುವವರ ಬಾಯಲ್ಲಿ ನೆಲಸಿವೆ.

## ೧೧. ಶ್ರೀ ಮಾಧವ ಜೋಶಿ.

ಇವರು ಧಾರವಾಡದವರು. ಕರ್ನಾಟಕ ಕಾಲೇಜಿನಲ್ಲಿ ಪ್ರಾಣಿಶಾಸ್ತ್ರ ಅಭ್ಯಾಸ ಮಾಡಿ ಬಿ. ಎಸ್‌ಸಿ. ಡಿಗ್ರಿ ಪಡೆದು ಮುಂಬಯಿಯಲ್ಲಿ ಒಂದು ವಿಶಿಷ್ಟ ಬಗೆಯ ಮಿೂನಿನ ನರಮಂಡಲದ ಬಗೆಯಲ್ಲಿ ಬೃಹತ್ಪ್ರಬಂಧವನ್ನು ಬರೆದು ಎಂ. ಎಸ್‌ಸಿ. ಪದವಿಯನ್ನು ಪಡೆದರು. ಸದ್ಯಕ್ಕೆ ಜೋಗೇಶ್ವರಿಯ ಇಸ್ಮಾಯಿಲ್ ಕಾಲೇಜಿನಲ್ಲಿ ಕೆಲಸ ಮಾಡುತ್ತಿದ್ದಾರೆ. ಶಾಸ್ತ್ರೀಯ ವಿಷಯಗಳನ್ನು ಕುರಿತು ಕನ್ನಡದಲ್ಲಿ ಉತ್ತಮವಾಗಿ ಬರೆಯಬಲ್ಲರು.

## ೧೨. ಶ್ರೀ. ತೂರಮರಿ ಗಂಗಾಧರ ಮಡಿವಾಳೇಶ್ವರರು.

ಮೊದಲು ಕಲಿತದ್ದು ಮರಾಠಿಯಾದರೂ ಸ್ವಪರಿಶ್ರಮದಿಂದ ಕನ್ನಡ ಮತ್ತು ಸಂಸ್ಕೃತಗಳಲ್ಲಿ ಅಪಾರ ಪಾಂಡಿತ್ಯವನ್ನು ಗಳಿಸಿ ತಮ್ಮ ೫೦ ವರ್ಷಗಳ ಆಯುಷ್ಯದಲ್ಲಿ ಅನೇಕ ಗ್ರಂಥಗಳನ್ನು ಬರೆದ ತೂರಮರಿಯವರು ಬೈಲಹೊಂಗಲ ತಾಲ್ಲೂಕಿನಲ್ಲಿಯ ತೂರಮರಿಯವರು. ಉಪಾಧ್ಯಾಯ ವೃತ್ತಿಯಲ್ಲಿ ಮೇಲೇರಿ ಟ್ರೇನಿಂಗ ಕಾಲೇಜಿನಲ್ಲಿ ಕನ್ನಡ ಪಂಡಿತರಾಗಿದ್ದರು. ಕೊನೆಯಲ್ಲಿ ಸರಕಾರದ ಅಸಿಸ್ಟಂಟ ಟ್ರಾನಲೇಟರರಾಗಿದ್ದರು. (ನಾಗವರ್ಮನ ಕಾದಂಬರಿ ಚಂಪುವಿನನಂತರ) ಬಾಣ ಕಾದಂಬರಿಯನ್ನು ಸಂಸ್ಕೃತದಿಂದ ಕನ್ನಡಕ್ಕೆ ಇಳಿಸಿದವರೆಂದರೆ ತೂರಮರಿಯವರೊಬ್ಬರೆ. ಶಬ್ದಮಣಿ ದರ್ಪಣ ವ್ಯಾಕರಣದ ಮೇಲೆಯೂ ರಾಜಶೇಖರ ವಿಳಾಸವೆಂಬ ಕಾವ್ಯದ ಮೇಲೆಯೂ ಟೀಕೆಗಳನ್ನಲ್ಲದೆ ಅನೇಕ ಗ್ರಂಥಗಳನ್ನು ಬರೆದರು.

ಕನ್ನಡಭಾಷೆ ಸಾಹಿತ್ಯಗಳ ಬಗೆಯಲ್ಲಿ ಜಾಗೃತಿಯನ್ನುಂಟುಮಾಡಿದ ಮೊದಲ ಮಹನೀಯರಲ್ಲಿ ಇವರು ಒಬ್ಬರು. ಇವರ ಜನ್ಮ ೧೮೨೭. ಮರಣ ೧೮೭೬.

## ೧೩. ಶ್ರೀ. ಆರ್. ಬಿ. ಕುಲಕರ್ಣಿ.

ಶ್ರೀ. ಆರ್. ಬಿ. ಕುಲಕರ್ಣಿಯವರು "ಸಂಯುಕ್ತ ಕರ್ನಾಟಕ" ವೃತ್ತ ಪತ್ರಿಕೆ ಸುದ್ದಿ ವಿಭಾಗದ ಉಪಸಂಪಾದಕರಾಗಿ ಕೆಲಸಮಾಡುತ್ತಿದ್ದಾರೆ. ಅನೇಕ ಕತೆ, ನಗೆ ಬರೆಹಗಳನ್ನು ಬರೆದಿದ್ದಾರೆ. ಅವರು ಬಾಯಿಂದ ಹೇಳುವ ಕತೆಗಳನ್ನೆ ಬರೆದು ಬಿಟ್ಟಿದ್ದರೆ ಹತ್ತಿಪ್ಪತ್ತು ಸಂಕಲನಗಳಾದರೂ ಆಗಬಹುದಿತ್ತು. ಉತ್ತಮ ಹರಟೆಗಾರರು. ಕಣ್ಣಾರೆ ಕಂಡ ಒಂದು ಸನ್ನಿವೇಶವನ್ನು ಯಥಾವತ್ತಾಗಿ ಚಿತ್ರಿಸ ಬಲ್ಲರು. ಬಂಡೆಯಿಂದ ಬಂಡೆಗೆ ಧುಮುಕುವ ಕಾಡತೊರೆಯ ನಿಸರ್ಗರಮಣೀ ಯತೆ ಉತ್ಸಾಹಗಳನ್ನು ಇವರ ಮಾತಿನಲ್ಲೂ ಬರವಣಿಗೆಯಲ್ಲೂ ಕಾಣಬಹುದು.

## ೧೪ ಶ್ರೀ. ಎ. ಎನ್. ಮೂರ್ತಿರಾವ.

ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಇಂಗ್ಲಿಷ ಸಾಹಿತ್ಯದ ಪ್ರಾಧ್ಯಾಪಕ ರಾಗಿದ್ದು ಇದೀಗ ನಿವೃತ್ತರಾಗಿದ್ದಾರೆ. ಶ್ರೀ. ಎ. ಎನ್. ಮೂರ್ತಿರಾಯರು ಲಘು ಪ್ರಬಂಧಗಳಲ್ಲಿ ಎತ್ತಿದ ಕೈ. "ಹಗಲುಗನಸುಗಳು" ಎಂಬ ಅವರ ಪ್ರಬಂಧ ಸಂಗ್ರಹ ದಲ್ಲಿಯ ಯಾವ ಬರಹವನ್ನೋದಿದರೂ ಸಾಕು, ಅವರ ರಸಾಭಿಜ್ಞತೆ, ತಿಳಿಯಾದ ಹಾಸ್ಯ, ನಯವಾದ ಬರವಣಿಗೆಗಳ ಪರಿಚಯವಾಗುತ್ತದೆ. "ಸಾಕ್ರೇಟೀಸನ ಕೊನೆಯ ದಿನಗಳು", "ಆಷಾಢಭೂತಿ", "ಹವಳ ದ್ವೀಪ" ಇವು ಅವರ ಇತರ ಬರೆಹಗಳು. ಅವರೊಬ್ಬರು ಉತ್ತಮ ವಿಮರ್ಶಕರೂ ಹೌದು.

## ೧೫. ಮ.ಗಾಂಧೀಜಿಯವರು.

ಮ. ಗಾಂಧೀಜಿಯವರ ಪರಿಚಯ ಮಾಡಿಕೊಡಬೇಕೆ? ಆದರೆ ನಮ್ಮಲ್ಲಿ ಬಹು ಸಂಖ್ಯಾತರು ಅವರನ್ನು ನೆನೆಯುವುದು, ಭಾರತದ ಸ್ವಾತಂತ್ರ್ಯ ಸಮರವನ್ನು ಅಹಿಂಸೆಯಿಂದ ನಡೆಸಿ ನಾಡನ್ನು ಪರಕೀಯರ ಆಳಿಕೆಯಿಂದ ಬಿಡುಗಡೆ ಮಾಡಿದ ದೇಶ ಭಕ್ತಾಗ್ರೇಸರ, ಎಂದು. ಆದರೆ ಅವರು ಸಾಹಿತಿಗಳೂ ಹೌದು. 'ಸತ್ಯ ಶೋಧನೆ" ಎಂದು ಬರೆದ ಅವರ ಆತ್ಮಚರಿತ್ರೆ ಪ್ರಪಂಚದಲ್ಲೆಲ್ಲ ಪ್ರಖ್ಯಾತವಾಗಿದೆ. ಧರ್ಮ, ನೀತಿ ಮುಂತಾದ ವಿಚಾರಗಳ ಬಗೆಯಲ್ಲಿ ಅವರು ಅಸಂಖ್ಯಾತ ಲೇಖ ಗಳನ್ನು ಬರೆದಿದ್ದಾರೆ. ಒಂದು ಕಾಲಕ್ಕೆ ಅವರು ನಡೆಸುತ್ತಿದ್ದ "ಯಂಗ್ ಇಂಡಿಯಾ" ಮತ್ತು "ಹರಿಜನ" ಪತ್ರಿಕೆಗಳಲ್ಲಿ ಅವರ ವಿಚಾರಗಳು ಪ್ರಕಟವಾಗು ತ್ತಿದ್ದವು. ಆ ಲೇಖಗಳನ್ನೊಳಗೊಂಡ ಎಷ್ಟೋ ಪುಸ್ತಕಗಳು ಇತ್ತೀಚೆಗೆ ಪ್ರಕಟ ವಾಗಿವೆ. ಗಾಂಧೀಜಿಯವರು ಇಂಗ್ಲೀಷ ಭಾಷೆಯಲ್ಲಿ ಎಷ್ಟು ಸರಳ ಸುಂದರವಾದ ಶೈಲಿಯಲ್ಲಿ ಬರೆಯುತ್ತಿದ್ದರೊ ಅಷ್ಟೇ ಸರಳ ಸುಂದರವಾಗಿ ತಮ್ಮ ಮಾತೃಭಾಷೆ ಯಾದ ಗುಜರಾತಿಯಲ್ಲಿ ಬರೆಯುತ್ತಿದ್ದರೆಂಬ ವಿಷಯ ಗಮನಾರ್ಹವಾಗಿದೆ. ಶಕ್ಯ

ವಿದ್ದಷ್ಟು ಮೊತ್ತ ಮೊದಲು ಗುಜರಾತಿಯಲ್ಲಿ ಬರೆದು ಬಳಿಕ ಅದನ್ನೇ ಇಂಗ್ಲೀಷಿಗೆ ಭಾಷಾಂತರಿಸುವ ವಾಡಿಕೆ ಇವರದಾಗಿತ್ತು.

### ೧೬. ಶ್ರೀ. ಗೋವಿಂದ ಲಕ್ಷ್ಮಣ ಹಳ್ಳಿಪಪ್ಪನವರ.

ಕಲಘಟಗಿಯವರಾದ ಶ್ರೀ ಹಳ್ಳಿಪ್ಪನವರು ರವೀಂದ್ರರ ಶ್ರೀನಿಕೇತನದಲ್ಲಿ ವ್ಯಾಸಂಗಮಾಡಿದರು. ಅಲ್ಲಿ ಪಾಶ್ಚಾತ್ಯ ಕೃಷಿಪಂಡಿತರಾದ ಎಲ್‌ಮ್ಹರ್ಸ್ಟ್ ಅವರ ಕೈಯಲ್ಲಿ ತರಬೇತಿಹೊಂದಿ ಹಿಂದಿರುಗಿದರು. ಮೊದಲಿನಿಂದಲೂ ಸಾಹಿತ್ಯ-ಕಲೆಗಳ ಬಗೆಯಲ್ಲಿ ಆಸಕ್ತಿಯುಳ್ಳವರು. " ಜಲಧರ " ಎಂಬ ಕಾವ್ಯನಾಮದಿಂದ " ಕುರಿ ಹಿಂಡು " ( ವಿನೋದ ಲೇಖನ ) " ಮೇವಾಡ ಪತನ " (ನಾಟಕ) ಮತ್ತು ಅನೇಕ ಕತೆಗಳನ್ನು ಬರೆದಿದ್ದಾರೆ. ಇವರ ಅಕಾಲ ನಿಧನದಿಂದ ಆಧುನಿಕ ಕನ್ನಡ ಸಾಹಿತ್ಯವು ಒಬ್ಬ ಒಳ್ಳೆಯ ಬರೆಹಗಾರನನ್ನು ಕಳೆದುಕೊಂಡಿದೆ.

### ೧೭. ಶ್ರೀ. ಶಂ. ಬಾ. ಜೋಶಿ.

ಕನ್ನಡದಲ್ಲಿಯ ಶ್ರೇಷ್ಠ ಸಂಶೋಧಕರಲ್ಲೊಬ್ಬರಾದ ಶ್ರೀ. ಶಂ. ಬಾ. ಜೋಶಿ ಯವರು " ಕನ್ನಡ ನುಡಿಯ ಹುಟ್ಟಿ '' ನಿಂದ '' ಯಕ್ಷ ಪ್ರಶ್ನೆ " ಯ ವರೆಗೆ ಅನೇಕ ವಿದ್ವತ್‌ಪೂರ್ಣ ಗಂಥಗಳನ್ನು ಬರೆದಿದ್ದಾರೆ. ಸಾಹಿತ್ಯ ಸಂಶೋಧನೆಯ ಜೊತೆ ಯಲ್ಲಿ ಸಾಮಾಜಿಕ ಜೀವನದ ಸಮಸ್ಯೆಗಳಲ್ಲಿ ಅವರಿಗೆ ತುಂಬಾ ಆಸ್ಥೆ. ಕಣ್ದೆರೆದು ಯೋಚಿಸಿ, ನಿಸ್ಪೃಹವಾಗಿ ಅದನ್ನು ಮುಂದುವರಿಸಿ ತಿಳಿದದನ್ನು ತಿಳಿಯಾಗಿ ಖಂಡಿತವಾಗಿ ಹೇಳುವುದು ಶ್ರೀ. ಶಂ. ಬಾ. ಜೋಶಿಯವರ ರೀತಿ.

### ೧೮. ಶ್ರೀ. ಇನಾಂದಾರ ವೆಂಕಟರಾಯರು.

ಕಾದಂಬರಿಕಾರರು, ವಿಮರ್ಶಕರು ಎಂದು ಹೆಸರುಗಳಿಸಿದ ಇನಾಂದಾರ ವೆಂಕಟರಾಯರು ಕರ್ನಾಟಕ ಕಾಲೇಜಿನಲ್ಲಿ ಇಂಗ್ಲೀಷ್ ಸಾಹಿತ್ಯದ ಅಧ್ಯಾಪಕ ರಾಗಿದ್ದಾರೆ. ಇವರು ಬರೆದ ಅನೇಕ ಕಾದಂಬರಿಗಳಲ್ಲಿ " ಮೂರಾಬಟ್ಟೆ" " ಕನಸಿನ ಮನೆ '', '' ಶಾಪ ", '' ಸ್ವರ್ಗದ ಬಾಗಿಲು '' ಕಾದಂಬರಿಗಳು ತೀರ ಜನಪ್ರಿಯವಾಗಿವೆ. ಪಾಶ್ಚಾತ್ಯ ಮತ್ತು ಪೌರಸ್ತ್ಯಕಾವ್ಯ ಮೀಮಾಂಸೆಯ ವ್ಯಾಸಂಗ ಮಾಡಿದ ಇವರ ವಿಮರ್ಶೆಗಳು ಜನಾದರಣೀಯವಾಗಿರುತ್ತವೆ.

### ೧೯. ಶ್ರೀ. ನವರತ್ನ ರಾಮರಾಯರು.

ಒಬ್ಬ ಮನುಷ್ಯನ ಅನುಭವ, ಸಂಸಾರ, ಮನಸ್ಸಿನ ಹದ ಇವೇ ಆತ ನಿರ್ಮಿಸ ಬಹುದಾದ ಸಾಹಿತ್ಯಕ್ಕೆ ಗುಣವಿಶೇಷಗಳನ್ನು ಬದಗಿಸತಕ್ಕವು, ಎಂಬ ಮಾತನ್ನು ಮನಗಾಣಬೇಕಾಗಿದ್ದರೆ ಶ್ರೀ. ನವರತ್ನ ರಾಮರಾಯರು ' ಜೀವನ, ಮಾಸಪತ್ರಿಕೆ ಯಲ್ಲಿ ಇತ್ತೀಚೆ ಬರೆದ '' ಕೆಲವು ನೆನಹುಗಳು " ಎಂಬ ಲೇಖನ ಮಾಲೆಯನ್ನು ಓದಬೇಕು. ರಾಮರಾಯರು ಸಾಹಿತಿಗಳಾಗಬಯಸಿದವರಲ್ಲ. ಆದರೆ ಸಾಹಿತ್ಯದ

ಸಂಸ್ಕಾರ ಅವರಿಗೆ ರಕ್ತಗತವಾಗಿದೆ. ಶ್ರೇಷ್ಠವಾದ ಅಭಿರುಚಿ, ವಿಶಾಲವಾದ ಅನುಭವ, ತಿಳಿಯಾದ ತಿಳಿವು, ನಕ್ಕು ನಗಿಸುವ ಬಿಚ್ಚು ಮನಸ್ಸು, ಸಾಹಿತ್ಯ ಸಂಗೀತಗಳಲ್ಲಿ ಎಲ್ಲಿಲ್ಲದ ಪ್ರೀತಿ ಇವರವು. ಮೈಸೂರ ಸರಕಾರದಲ್ಲಿ ದೊಡ್ಡ ಕೆಲಸದಲ್ಲಿದ್ದು ನಿವೃತ್ತರಾಗಿದ್ದಾರೆ.

## ೨೦. ಶ್ರೀ. ಶಿವರಾಮ ಕಾರಂತರು.

ಶ್ರೀ ಶಿವರಾಮ ಕಾರಂತರು ಶ್ರೇಷ್ಠ ಕಾದಂಬರಿಕಾರರೆಂದು ಪ್ರಸಿದ್ಧರಾಗಿದ್ದರೂ ಅವರು ಕೈಮುಟ್ಟಿ ಸಿದ್ಧಿ ಪಡೆಯದ ಸಾಹಿತ್ಯ ಪ್ರಕಾರವೇ ಇಲ್ಲವೆಂದು ಹೇಳ ಬಹುದು. ಕಾದಂಬರಿಗಳಂತೆ ಅನೇಕ ಕತೆಗಳನ್ನು, ಗದ್ಯನಾಟಕಗಳಂತೆ ಗೀತ ನಾಟಕಗಳನ್ನು, ನಗೆಬರೆಹಗಳನ್ನು, ಪ್ರಬಂಧಗಳನ್ನು ಬರೆದಿದ್ದಾರೆ. ಸಂಗೀತ, ಶಿಲ್ಪ, ನೃತ್ಯ, ನಾಟಕ, ಚಿತ್ರ ಯಾವುದಾದರೂ ಸರಿ–ಅವುಗಳ ಬಗೆಯಲ್ಲಿ ಹೆಮ್ಮೆ ಪಡಬಹುದಾದ ಅಭ್ಯಾಸ ಪೂರ್ಣಆಸಕ್ತಿಅವರಿಗಿದೆ. ಇವರು ದಕ್ಷಿಣ ಕನ್ನಡ ಜಿಲ್ಲೆಯವರು. ನಿಸರ್ಗ ರಮಣೀಯವಾದ ಪುತ್ತೂರಿನಲ್ಲಿ ವಾಸಿಸುತ್ತಾರೆ. ನಿಸರ್ಗದ ಆ ರಮಣೀಯತೆಯನ್ನು ಅವರ ಯಾವ ಕೃತಿಯಲ್ಲಿಯೂ ನೀವು ಕಾಣಬಹುದು.

## ೨೧. ಕೌಜಲಗಿ ಹಣಮಂತರಾಯರು.

ಸಾಹಿತ್ಯ ನಿರ್ಮಿತಿಗೆ ನೋಡುವ ಕಣ್ಣು ಮುಖ್ಯ; ಅನುಭವಿಸುವ ಹೃದಯ ಮುಖ್ಯ ಸಾಹಿತಿ ರಾಜಕಾರಣಿಯಾಗಿರಬಹುದು; ಇನ್ನೇನೊ ಆಗಿರಬಹುದು, ಎಂಬ ಮಾತನ್ನು ಹನುಮಂತರಾಯರ ಅನುಭವಗಳಿಂದ, ಬರೆಹಗಳಿಂದ ತಿಳಿಯ ಬಹುದಾಗಿದೆ. ದೇಶಸೇವೆಯ ನಿಷ್ಠುರ ತನದಲ್ಲಿ ಯಾರಿಗೂ ಮಣಿಯದೆ ಬದುಕನ್ನು ನಡೆಯಿಸಿದ ಹಣಮಂತರಾಯರು ಆಗೀಗ ಸಾಹಿತ್ಯದ ರಸಾನುಭವಕ್ಕೆ ಮಣಿಯು ತ್ತಿದ್ದರು, ಎನ್ನುವ ಸಂಗತಿ ಅನಿರೀಕ್ಷಿತವಾದಷ್ಟೆ ಕೂತುಹಲ ಕಾರಿಯಾಗಿದೆ. ಕರ್ನಾಟಕದ ಹಿರಿಯ ದೇಶ ಸೇವಕರಲ್ಲೊಬ್ಬರು ಇವರು.

## ೨೨. ಶ್ರಿ. ದತ್ತಾತ್ರೇಯ ಕುಲಕರ್ಣಿ.

ವ್ಯಕ್ತಿಚಿತ್ರಗಳನ್ನು ಕನ್ನಡದಲ್ಲಿ ಬರೆಯುವ ಕೆಲವೇ ಲೇಖಕರಲ್ಲಿ ಶ್ರಿ. ದ. ಬಾ. ಕು. ಅವರು ಗಣ್ಯರಾಗಿದ್ದಾರೆ. ಧಾರವಾಡದಲ್ಲಿಯ ಮನೋಹರ ಗ್ರಂಥ ಭಾಂಡಾರದ ಒಡೆಯರೂ ಸಂಚಾಲಕರೂ ಆಗಿದ್ದು ಸಾಹಿತ್ಯದ ವಿವಿಧ ಕ್ಷೇತ್ರಗಳಲ್ಲಿ ದುಡಿಯುತ್ತಿದ್ದಾರೆ. 'ನಾನು ಕಂಡಗೌರಮ್ಮ' ಎಂಬ ಸುಂದರ ವ್ಯಕ್ತಿ ಚಿತ್ರದಿಂದ ಮೊದಲಿಗೆ ಬೆಳಕಿಗೆ ಬಂದ ಇವರ ಸಾಹಿತ್ಯ ಸ್ಫೂರ್ತಿ ಇತ್ತೀಚೆಗೆ "ಪರಿಹಾರ" ಎಂಬ ಕಾದಂಬರಿಯಲ್ಲಿ "ಹಾಸು ಹೊಕ್ಕು", 'ಹಕ್ಕಿ ನೋಟ' ಮುಂತಾದ ವ್ಯಕ್ತಿ ಚಿತ್ರಗಳಲ್ಲಿ ಮುಂದೆ ಹರಿಯುತ್ತಿದೆ.

### ೨೩. ಶ್ರೀ. ಬಲ್ಲಾಳ ಜೋಶಿ

ಇವರು ಧಾರವಾಡದವರು. ಬಣ್ಣಗಳ ಬಗೆಯಲ್ಲಿ ಸಂಶೋಧನ ನಡಿಸಿ ಮುಂಬಯಿ ವಿಶ್ವವಿದ್ಯಾಲಯದ ಪಿ ಎಚ್. ಡಿ. ಪದವಿಯನ್ನು ಪಡೆದು ರಸಾಯನ ಶಾಸ್ತ್ರದಲ್ಲಿ ಹೆಚ್ಚಿನ ಸಂಶೋಧನೆಯನ್ನು ನಡಸಲು ಕೆಂಬ್ರಿಜ್ ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದಾರೆ. ಶಾಸ್ತ್ರೀಯ ವಿಷಯಗಳ ಅಭ್ಯಾಸಿಗಳಾದರೂ ಸುತ್ತಲಿನ ಪ್ರಪಂಚವನ್ನು ಸಾಹಿತ್ಯಾಭ್ಯಾಸಿಯ ರೀತಿಯಲ್ಲಿ ಕಣ್ದೆರೆದು ನೋಡಿ, ನೋಡಿದ್ದನ್ನು ಯಥಾವತ್ತಾಗಿ ಕನ್ನಡದಲ್ಲಿ ಹೇಳಬಲ್ಲವರಾಗಿದ್ದಾರೆ. ಇಂಗ್ಲಂಡಿನಿಂದಲೇ ಅಲ್ಲಿಯ ಹಳ್ಳಿಯ ಬಗೆಗೆ ಬರೆದು ಕಳುಹಿಸಿದ ಪ್ರಬಂಧವು ಈ ಮಾತಿಗೆ ಸಾಕ್ಷಿಯಾಗಿದೆ.

### ೨೪. ಶ್ರೀ. ರಂಗರಾವ ದಿವಾಕರ.

ಮಹಾತ್ಮಾ ಗಾಂಧಿಯವರಿಗೆ ಬೇಕಾದವರಾಗಿ ದೇಶಸ್ವಾತಂತ್ರ್ಯಕ್ಕಾಗಿ ಎಲ್ಲವನ್ನೂ ಬಿಟ್ಟುಕೊಟ್ಟು ದುಡಿದ ಶ್ರೀ. ರಂಗನಾಥ ದಿವಾಕರರು ಈಗ ಬಿಹಾರದ ರಾಜ್ಯಪಾಲರಾಗಿದ್ದಾರೆ. ಸೆರೆಯ ಹೊರಗಾಗಲಿ, ಒಳಗಾಗಲಿ, ದಿವಾಕರರದು ಯಾವಾಗಲೂ ಅಭ್ಯಾಸಿಯ ಮನೋವೃತ್ತಿ. ಅನೇಕ ಆಧ್ಯಾತ್ಮಿಕ ಗ್ರಂಥಗಳನ್ನು ಬರೆದಿದ್ದಾರೆ. 'ವಚನಶಾಸ್ತ್ರರಹಸ್ಯ' 'ಹರಿಭಕ್ತಿಸುಧೆ' 'ಉಪನಿಷದ್ರಹಸ್ಯ' ಮುಂತಾದ ಪುಸ್ತಕಗಳ ಹೆಸರುಗಳೇ ಶ್ರೀ ದಿವಾಕರರ ಯೋಗ್ಯತೆ ಒಲವುಗಳನ್ನು ತೋರಿಸಿಕೊಡುತ್ತವೆ. "ಸೆರೆಯಮರೆಯಲ್ಲಿ"ಯಲ್ಲಿ ತಮ್ಮ ಕಾರಾಗೃಹದ ಅನುಭವಗಳನ್ನು "ಸತ್ಯಾಗ್ರಹ"ದಲ್ಲಿ ಅದರ ಸ್ವರೂಪ, ವಿಶೇಷ, ಮಹತ್ತ್ವಗಳನ್ನು ಕುರಿತು ವಿವೇಚಿಸಿದ್ದಾರೆ.

### ೨೫. ಶ್ರೀ. ರಾಮು ಹೇಜೀಬ.

ಶ್ರೀ ರಾಮು ಹೇಜೀಬ ಅವರಿಗೆ ಮೊದಲಿನಿಂದಲೂ ಆಧ್ಯಾತ್ಮ ಚಿಂತನೆಯಲ್ಲಿ ಆಸಕ್ತಿ ತತ್ತ್ವಜ್ಞಾನ ವಿಷಯವನ್ನು ಅಭ್ಯಸಿಸಿ ಬಿ. ಎ. ಡಿಗ್ರಿ ಪಡೆದ ನಂತರ ತಮ್ಮ ಅಂತಃಪ್ರವೃತ್ತಿಗೆ ಸರಿಯಾಗಿ ತತ್ತ್ವಾನ್ವೇಷಣೆಗೆಂದು ರಾಯಚೂರ ಜಿಲ್ಹೆಯಲ್ಲಿ ಕೃಷ್ಣಾತೀರದ ಕುರಗಡ್ಡಿ ಎಂಬಲ್ಲಿ ಈ ಹದಿನೈದು ಇಪ್ಪತ್ತು ವರ್ಷಗಳಿಂದಲೂ ಬ್ರಹ್ಮಚರ್ಯ ಜೀವನದಲ್ಲಿಯೆ ನೆಲಸಿದ್ದಾರೆ. ಮತ್ತು ತತ್ತ್ವಚಿಂತನೆಯನ್ನು ನಡೆಸಿದ್ದಾರೆ.

### ೨೬. ಶ್ರೀಧರ ಖಾನೋಳಕರ

ಹೊಸಗನ್ನಡದ ಮೊದಲ ಕವಿಗಳಲ್ಲೊಬ್ಬರಾದ ಶ್ರೀಧರ ಖಾನೋಳಕರರು ರಾಷ್ಟ್ರೀಯ ಆಂದೋಲನವನ್ನು ಕುರಿತು ಬರೆದ ಅನೇಕ ಲಾವಣಿಗಳು ಅವರ ಇತರ ಪ್ರಸಾದಯುಕ್ತ ಕವನಗಳಂತೆ ಲೋಕಪ್ರಿಯವಾಗಿವೆ. ಅವರ 'ನೌಕಾಕ್ರೀಡನ' ಒಂದು ಸುಂದರವಾದ ಶೃಂಗಾರ ಕಾವ. ಇವರ ಅನೇಕ ಕವನಗಳು ಸ್ವಧರ್ಮ,

ಜೀವನ, ಜಯಂತಿ ಮುಂತಾದ ಮಾಸಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಲಾವಣಿಗಳ ಮಟ್ಟು, ಸಹಜ ಸುಂದರವಾದ ಮಾತುಗಾರಿಕೆ ಇವರ ಕೃತಿಗಳ ವಿಶೇಷ.

## ೨೭. ಶ್ರೀ. ವ್ಹಿ. ಜಿ. ಭಟ್ಟ

ಕಾವ್ಯಕ್ಕೂ ವಿನೋದಕ್ಕೂ ಯಾವಾಗಲೂ ವಿರೋಧ, ಎಂದು ಭಾವಿಸುವವರು, ಶ್ರೀ. ವ್ಹಿ. ಜಿ. ಭಟ್ಟರು ಬರೆದ ಅನೇಕ ಪದ್ಯಗಳನ್ನು ಓದಬೇಕು. ವಿನೋದವೂ ಒಳ್ಳೆಯ ಕಾವ್ಯವಾಗಬಹುದು, ಎಂಬುದನ್ನು ಇವರ ಕೃತಿಗಳಲ್ಲಿ ಕಾಣಬಹುದು. ಇವರ ಬರವಣಿಗೆಯ ರೀತಿ—ಗದ್ಯವೇ ಆಗಲಿ, ಪದ್ಯವೇ ಆಗಲಿ—ಯಾವಾಗಲೂ ಚುಟುಕು ಪದ್ಯಗಳನ್ನಲ್ಲದೆ ಉತ್ತರ ಕನ್ನಡ ಜಿಲ್ಲೆಯವರಾದ ಇವರು ಅಲ್ಲಿಯ ಜೀವನಚಿತ್ರಗಳನ್ನು ಹಾಸ್ಯಯುತವಾಗಿ ಕೊಟ್ಟಿದ್ದಾರೆ. ಸದ್ಯಕ್ಕೆ ಧಾರವಾಡದಲ್ಲಿ ಗ್ರಾಮೋದ್ಯೋಗ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದಾರೆ. ಇವರ ಬರೆಹದ ರೀತಿ ಒಂದು ಹೊಸಬಗೆಯನ್ನೆ ಪ್ರಾರಂಭಿಸಿದೆ, ಎಂದು ಹೇಳಬಹುದು.

## ೨೮. ಹರಿಹರ.

ಕ್ರಿ. ಶ. ೧೨೦೦ ರ ಸುಮಾರಿಗೆ ಬದುಕಿದ ಹರಿಹರ ಕವಿ ಕನ್ನಡದ ಒಬ್ಬ ಶ್ರೇಷ್ಠ ಭಕ್ತ ಕವಿ. ಶಿವಭಕ್ತಿಯೆ ಈತನಿಗೆ ಕಾವ್ಯ ವಿಷಯ. ಹಂಪೆಯ ವಿರೂಪಾಕ್ಷನ ಸಾನ್ನಿಧ್ಯದಲ್ಲಿ ಬರೆದ ಈ ಕವಿಯ 'ಗಿರಿಜಾಕಲ್ಯಾಣ' 'ರಗಳೆಗಳು' ವಿಖ್ಯಾತ ಕೃತಿಗಳು. ಕನ್ನಡದಲ್ಲಿ 'ರಗಳೆ' ಎಂಬ ಕಾವ್ಯ ರೀತಿಯನ್ನು ಪ್ರಾರಂಭಿಸಿದ ಶ್ರೇಯಸ್ಸು ಹರಿಹರನದು. ಈತನ ಶಿಷ್ಯನಾದ ರಾಘವಾಂಕನು ಷಟ್ಪದಿಯನ್ನು ಪ್ರಾರಂಭಿಸಿದನು.

## ೨೯. ಶ್ರೀ. ದ. ರಾ. ಬೇಂದ್ರೆ: (ಅಂಬಿಕಾತನಯ ದತ್ತ)

ಹೊಸಗನ್ನಡ ಕವಿತೆಯ ಹೊಸ ಛಂದ ಬಂಧಗಳಿಗೊಂದು ಸ್ಥಿರ ಸ್ವರೂಪವನ್ನು ಕೊಟ್ಟು, ಹೊಸದಾದ ಒಂದು ಕಾವ್ಯ ಪರಂಪರೆಯನ್ನೇ ಬೆಳೆಯಿಸಿಕೊಂಡು ಬಂದು ಕನ್ನಡ ಕವಿ ಶ್ರೇಷ್ಠರೆನಿಸಿಕೊಂಡ ಅಂಬಿಕಾತನಯದತ್ತರ ನಿಜವಾದ ಹೆಸರು ದ. ರಾ. ಬೇಂದ್ರೆ. ಸದ್ಯಕ್ಕೆ ಸೊಲ್ಲಾಪುರದ ಡಿ. ಎ. ವಿ. ಕಾಲೇಜಿನಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿಯ ಕೆಲವು ಅತ್ಯುತ್ತಮ ಭಾವಗೀತೆಗಳನ್ನು ಒಳಗೊಂಡ ಇವರ 'ಗರಿ, ನಾದಲೀಲೆ, ಕಾಮಕಸ್ತೂರಿ'—ಮುಂತಾದವುಗಳು ಇವನ ಕವನ ಸಂಗ್ರಹಗಳಾಗಿವೆ. ಜಾನಪದ ಗೀತದ ಗತಿ–ಸ್ಫೂರ್ತಿ ಶ್ರುತಿ–ಸೌಂದರ್ಯಗಳನ್ನು ಇವರ ಗೀತಗಳಲ್ಲಿ ನಾವು ಕಾಣಬಹುದು.

## ೩೦. ಶ್ರೀ. ಸಾಲಿ ರಾಮಚಂದ್ರರಾಯರು

ಶ್ರೀ. ಸಾಲಿ ರಾಮಚಂದ್ರರಾಯರು ಶಿಕ್ಷಣ ಕ್ಷೇತ್ರದಲ್ಲಿ ಕೆಲಸಮಾಡಿ ನಿವೃತ್ತ ರಾಗಿದ್ದಾರೆ. ಕೋಮಲ ಹೃದಯವು ತೀವ್ರ ಭಾವನೆಗಳ ತವರು, ಇಂಥ ಹೃದಯವು ಇವರದು. ಇಂಥ ಹೃದಯದಿಂದ ಕವಿತೆ ಹೊಮ್ಮುವುದು ಸಹಜ. ನಿಸರ್ಗ, ದೇಶ, ದೈವತಗಳನ್ನು ಭಕ್ತಿಯಿಂದ ಕಂಡ ಇವರು ಆ ಬಗೆಗಳಲ್ಲಿ ಅನೇಕ ಕವನ ಗಳನ್ನು ಬರೆದಿದ್ದಾರೆ. 'ಅಭಿಸಾರ' 'ಚಿತ್ರಸೃಷ್ಟಿ' ರಾಮಾಯಣ, ಇವು ಇವರ ಕಾವ್ಯಕೃತಿಗಳು. ಜಯಗುರುದೇವ ಎಂಬ ಕಿರು ಕಾದಂಬರಿಯನ್ನು ಬರೆದಿದ್ದಾರೆ.

## ೩೧. ಶ್ರೀ. ರಾಮಚಂದ್ರ ಕೊಟ್ಟಲಗಿ.

ಮೊದಲಿನಿಂದಲೂ ಸಾಹಿತ್ಯದ ಬಗೆಯಲ್ಲಿ ಪ್ರೀತಿಯನ್ನು ಬೆಳೆಯಿಸಿಕೊಂಡು ಬಂದ ಈ ಉದಯೋನ್ಮುಖ ಲೇಖಕರು ಅನೇಕ ಕವನಗಳನ್ನೂ, ಇತ್ತೀಚೆಗೆ "ಗೀಚುಗೆರೆ" ಎಂಬ ಕಥಾ ಸಂಗ್ರಹವನ್ನೂ ಪ್ರಕಟಿಸಿದ್ದಾರೆ. ಇವರು ವಿಜಾಪುರ ದವರು. ಅಲ್ಲಿಯ 'ದೇಸಿ'ಯ ಛಾಯೆಯನ್ನು ಇವರ ಬರೆಹಗಳಲ್ಲಿ ಗುರುತಿಸ ಬಹುದು.

## ೩೨. ಶ್ರೀ. ಡಿ. ಎಸ್. ಕರ್ಕಿ.

ಹುಬ್ಬಳ್ಳಿಯ ಕಾಡಸಿದ್ಧೇಶ್ವರ ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಕರ್ಕಿ ಯವರು ಕವಿಗಳು, ಸಾಹಿತ್ಯಾಭ್ಯಾಸಿಗಳು. ಇವರ ಅನೇಕ ಲೋಕಪ್ರಿಯವಾದ ಕವನಗಳನ್ನೊಳಗೊಂಡ 'ಭಾವತೀರ್ಥ' 'ನಕ್ಷತ್ರಗಾನ' ಎಂಬ ಕವನ ಸಂಗ್ರಹ ಗಳು ಪ್ರಕಟವಾಗಿವೆ. ಛಂದಸ್ಸಿನ ವಿಚಾರವಾಗಿ ದೊಡ್ಡದಾದ ಒಂದು ಪ್ರಬಂಧ ವನ್ನು ಶ್ರೀ. ಕರ್ಕಿಯವರು ಬರೆದು ಡಿ. ಪದವಿಯನ್ನು ಪಡೆದಿದ್ದಾರೆ.

## ೩೩. ಶ್ರೀ. ಗಂಗಾಧರ ಚಿತ್ತಾಲ

ಹಳೆಯ ಕಾವ್ಯದ ವೃತ್ತಗಳಾಗಲಿ, ಹೊಸಕಾವ್ಯದ ಬಂಧಗಳಾಗಲಿ, ನಿಜ ವಾದ ಭಾವಾವೇಶಕ್ಕೆ ಯಾವಾಗಲೂ ಆತಂಕಗಳಾಗುತ್ತವೆ, ಎಂದು ನಂಬಿ ಮುಕ್ತ ಕಂಠದ ರೀತಿಯಲ್ಲಿ 'ನವ್ಯಕಾವ್ಯ'ವೆಂಬ ಹೊಸ ಕಾವ್ಯ ಪದ್ಧತಿಯನ್ನು ಪ್ರಚಾರದಲ್ಲಿ ತಂದ ತರುಣ ಕವಿಗಳಲ್ಲಿ ಗಂಗಾಧರ ಚಿತ್ತಾಲರು ಒಬ್ಬರು. ಕಾಲೇಜಿನ ವಿದ್ಯಾ ಭ್ಯಾಸವನ್ನು ಯಾವಾಗಲೂ ಉತ್ತಮ ತರಗತಿಯಲ್ಲಿಯೇ ಮುಗಿಯಿಸಿ ಕೇಂದ್ರ ಸರಕಾರದ ಆಡಳಿತ ವಿಭಾಗದ ಸ್ಪರ್ಧಾ ಪರೀಕ್ಷೆಯಲ್ಲಿಯೂ ತೇರ್ಗಡೆಯಾಗಿ ಸಧ್ಯಕ್ಕೆ ವಾಶಿಂಗ್ಟನ್‌ನಲ್ಲಿ (ಅಮೇರಿಕೆ) ಭಾರತ ಸರಕಾರದ ಕೆಲಸದಮೇಲಿದ್ದಾರೆ. ಭಾವದ ಉದ್ವೇಗದ ಜೊತೆಯಲ್ಲಿ ವಿಚಾರದ ತೀವ್ರತೆಯನ್ನು ಇವರ ಕವನದಲ್ಲಿ ಕಾಣಬಹುದು.

## ೩೪. ನಯಸೇನ

ಈ ಶ್ರೇಷ್ಠ ಜೈನ ಕವಿಯ ಕಾಲ ಸುಮಾರು ೧೧೦೦. ಈತ ನೆಲಸಿದ್ದು ಧಾರವಾಡ ಜಿಲ್ಲೆಯ ಮುಳಗುಂದದಲ್ಲಿ. ಕೇವಲ ಕವಿಯಾಗಲಿ, ಪಂಡಿತನಾಗಲಿ ಇರದೆ ಈತ ಧರ್ಮಚಿಂತನಕ್ಕಾಗಿ ಮತ್ತು ಮತಪ್ರಚಾರಕ್ಕಾಗಿ ತನ್ನ ಎಲ್ಲವನ್ನೂ ಮುಡುಪಾಗಿಸಿದ ಮುನಿಯಾಗಿದ್ದರು. ಈತನ ಅತ್ಯುತ್ತಮ ಕೃತಿಯೆಂದರೆ 'ಧರ್ಮಾಮೃತ' ಎಂಬ ಗ್ರಂಥ.

## ೩೫. ಶ್ರೀ. ಕುಲಕರ್ಣಿ ಶೇಷಗಿರಿರಾಯರು

ಇವರ ಕಾವ್ಯನಾಮ ಗೀತಾಪ್ರಿಯ. ರವೀಂದ್ರರ ಮತ್ತು ದೀನಬಂಧು ಆಂಡ್ರೂಜ ಅವರ ಸನ್ನಿಧಿಯಲ್ಲಿ ಶಿಕ್ಷಣ ಪಡೆದು ಬಂದವರು ಇವರು. ಕನ್ನಡ ಸಾಹಿತ್ಯ ಸಂಸ್ಕೃತಿಗಳಲ್ಲಿ ಆಸಕ್ತಿಯಿದ್ದವರು. ಅನೇಕ ಕವನಗಳನ್ನು ಬರೆದಿದ್ದಾರೆ. 'ಬೆಳವಲದ ಭಾಗ್ಯಲಕ್ಷ್ಮಿ' 'ಮಹಾಪೂರ' ಎಂಬ ಕಾದಂಬರಿಗಳನ್ನು ಬರೆದಿದ್ದಾರೆ.

## ೩೬. ವಿರೂಪಾಕ್ಷ ಪಂಡಿತ.

ಕನ್ನಡದಲ್ಲಿಯ ಶ್ರೇಷ್ಠ ಕವಿ ಕಾಲ ಸುಮಾರು ೧೫೮೫. ಚೆನ್ನಬಸವೇಶ್ವರನ ಚರಿತ್ರೆಯನ್ನು ವಿವರಿಸುವದಕ್ಕೆಯೇ ಮೀಸಲಾಗಿದ್ದ 'ಚೆನ್ನಬಸವ ಪುರಾಣ' ಈತನ ಮಹಾಕೃತಿ. ಚೆನ್ನಬಸವೇಶ್ವರನ ಚರಿತ್ರೆಯಲ್ಲದೆ, ಇದರಲ್ಲಿ ಶಿವಲೀಲೆ, ವೀರಶೈವ ಮತಾಚಾರಗಳ ಸಂಪ್ರದಾಯಗಳ ನಿರೂಪಣೆಯಿದೆ. "ಶಿವಕವಿ, ಸದಮಲ ಜ್ಞಾನಿ, ಸಕಲಾಗಮ ಕೋವಿದ" ಎಂದು ಮುಂತಾಗಿ ಈತನನ್ನು ಹೊಗಳಲಾಗಿದೆ.

## ೩೭. ಕುಮಾರ ವ್ಯಾಸ.

ಹೆಸರೇ ಸೂಚಿಸುವಂತೆ ಎರಡನೆಯ ವ್ಯಾಸರೇ ಎಂಬಂತೆ ಮಹಾಭಾರತವನ್ನು ಕನ್ನಡದಲ್ಲಿ ಹಾಡಿದ ಈ ಮಹಾಕವಿಯ ನಿಜವಾದ ಹೆಸರು ನಾರಾಯಣಪ್ಪ. ಗದುಗಿನ ಹತ್ತಿರದ ಕೋಳಿವಾಡದ ಶಾನಬೋವಮನೆತನಕ್ಕೆ ಸೇರಿದವನು. ಈತ ಬಾಳಿದ ಕಾಲ ವಿಜಯ ನಗರದ ಸಾಮ್ರಾಜ್ಯದ ಕಾಲವೆಂದು ಸ್ಥೂಲವಾಗಿ ಹೇಳಬಹುದಾಗಿದೆ. ಈತನ ಕಾವ್ಯದ ಪ್ರತಿಭೆಯ ಬಗ್ಗೆ ಇಂದಿನ ಕವಿಗಳೊಬ್ಬರು ಹೇಳಿದ "ಕುಮಾರ ವ್ಯಾಸನು ಹಾಡಿದನೆಂದರೆ ಕಲಿಯುಗ ದ್ವಾಪರವಾಗುವದು" ಎನ್ನುವ ಮಾತು ಸಮಂಜಸವಾಗಿದೆ.

# ಅರ್ಥಕೋಶ

## ಅ

ಅನಾಮಧೇಯ–ಅಪ್ರಸಿದ್ಧ
ಅಪರ ಪ್ರಯೋಗ–ಸತ್ತವರಿಗೆ ಮಾಡುವ ಕ್ರಿಯೆ
ಅವಿತು–ಅಡಗಿ
ಅಮೃತಾವಕಾಶ–ಒಳ್ಳೆಯ ಆತ್ಮಾನಂದ ಸಮಯ
ಅಸಗರ್–ಅಗಸರು
ಅಬ್ದಘಟೆ–ಮೋಡಗಳ ರಾಶಿ
ಅಡ್ಡೈಸು–ಅಡ್ಡಬರು
ಅನಿಬರು–ಅಷ್ಟುಜನರು
ಅರಚು–ಕರ್ಕಶ ರೀತಿಯಿಂದ ಒದರು
ಅರವರಿಸು–ಹಿಂದುಮುಂದೆ ನೋಡು
ಅರೆಯಟ್ಟಿ–ಒಂದೇಸವನೆ ಬೆನ್ನುಹತ್ತಿ
ಅಳ್ಕರು–ಪ್ರೀತಿ
ಅಲರ್+ಅಂಬು (ಅಲರಂಬು)–ಹೂಬಾಣ
ಅಟ್ಟಣಿಸು–ದಟ್ಟವಾಗು
ಅಂಬಕ–ಕಣ್ಣು
ಅಸಮಶರ–ಕಾಮ, ಬಹು ಶೂರ

## ಆ

ಆರ್ತಸ್ವರ–ಸಂಕಟದಲ್ಲಿ ತೊಳಲುವ ಪ್ರಾಣಿಯ ಧ್ವನಿ
ಆಯಸ್ಕಾಂತ–ಲೋಹಚುಂಬಕ
ಆಗಂತುಕ–ಆಯತ ವೇಳೆಗೆ ಬಂದವ, ಅಕಸ್ಮಾತ್ ಬಂದವ
ಆತ್ಮಾನಂದ–ಅಂತರಂಗದಲ್ಲಿ ಆಗುವ ವಿಶೇಷಾನಂದ

## ಇ

ಇನಿಯ–ಪ್ರಿಯ, ಗಂಡ
ಇನ್+ಕಡಲು; ಇಂಗಡಲು – ಸವಿಯಾದ ಸಮುದ್ರ, ಕ್ಷೀರ ಸಾಗರ
ಇಣಿಕು–ಹಣಿಕಿಹಾಕು
ಇಷ್ಟಕಾಮನಾ ಪೂರ್ತಿ–ಇಚ್ಛಿಸಿದನ್ನು ಹೊಂದುವುದು
ಇರದಾವರೆ–ಇರುವಂತಿಗೆ, ಸೇವಂತಿಕೆ ವಿಶೇಷ.

## ಉ

ಉಚ್ಚೈಃಶ್ರವ–ಇಂದ್ರನ ಬಿಳಿ ಕುದುರೆ
ಉಪೇಕ್ಷಿಸು–ಅಲಕ್ಷಿಸು

## ಋ

ಋಜುಮಾರ್ಗ–ಸತ್ಯಮಾರ್ಗ, ಸನ್ಮಾರ್ಗ

## ಎ

ಎರಳೆ–ಚಿಗರೆ

ಕಟ್ಟೇಕಾಂತ–ಅತಿಶಯದ ಏಕಾಂತ
ಕಣೆ–ಬಾಣ
ಕದಪು–ಗಲ್ಲ
ಕಯ್ತಿವ–ಮೋಸ
ಕಳ್ಳಸಿಗ ಗೇರಿ–ಸಿಂದಿಯ ಓಣಿ
ಕತ್ತು–ಕುತ್ತಿಗೆ
ಕಲ್ಸರಿ–ಕಲ್ಲಿನಿಂದಮಾಡಿದ ಪರಟಿ,
ಕಟ್ಟಾಣಿ–ಹಿರಿಯಮಣಿ
ಕಾತರ–ಆತುರ
ಕಾತರಭಾವ–ಆತುರಸ್ಥಿತಿ
ಕುಟಿಲತನ–ಮೋಸಗಾರಿಕೆ
ಕುಧರ–ಪರ್ವತ
ಕೂರ್+ಅಂಬು–ಹದನವಾದ ಬಾಣ

ಕೇಡಿ–ಕೆಡಕು ಸ್ವಭಾವದವ
ಕೆಮ್ಮನೆ–ಸುಮ್ಮನೆ
ಕೇತನ–ನಿವಾಸ, ಮನೆ
ಕೈಪೊಡೆ–ಬಾಣದ ಹಿಡಿಕೆ
ಕೈಪರೆ–ಕೈಯಲ್ಲಿ ಬಾರಿಸುವ ಸಣ್ಣ ಹಲಿಗೆ ( ಡುಮುಕಿ )
ಕೊರ್ವಿ–ಕೊಬ್ಬಿ
ಕೋವಿ–ಬಂದೂಕು
ಕೋಲುಕಾರ–ಕೋಲು ಹಿಡಿದು ಕಾಯುವವ
ಕಳತ್ರ–ಹೆಂಡತಿ
ಕ್ಲಪ್ತಕಳತ್ರ–ಏಕಪತ್ನೀವ್ರತಸ್ಥ

ಗತ್ಯಂತರ-ಬೇರೆಮಾರ್ಗ
ಗಸಗಸೆ–ಕಸಕಸೆ
ಗಳಗುದುರೆ–ಗಿಳಿ
ಗೌರವರ್ಣ–ಶುಭ್ರಕಾಂತಿ

ಚ
ಚರ-ನಡೆದಾಡುವ ಅನುಚರ–ಹಿಂಬಾಲಿಸುವವ, ಸೇವಕ
ಚಂಗಣಗಿಳಿ–ಹಾರಾಡುವಗಿಳಿ
ಚೂಣಿ–ಮೊದಲು
ಚೂಳಿ–ಮೊದಲು
ಚೋಪದಾರ–ಬೆತ್ತಹಿಡಿಯುವ ಆಳು

ಛ
ಛಾತ್ರ–ವಿದ್ಯಾರ್ಥಿ

ಜ
ಜವಾಹಿರ–ರತ್ನವಿಶೇಷ
ಜರಾ–ಮುಪ್ಪು

ಟ
ಟೆಕ್ಕೆ–ಧ್ವಜ

ಡ
ಡೊಂಬ–ಮೋಸ
ಡೊಂಬಿ–ಮೋಸಮಾಡುವವನು

ತ
ತರಿಜಮೀನು–ನೀರುಹಾಯುವ ಭೂಮಿ
ತರದೂದು–ವ್ಯವಸ್ಥೆ
ತವಕ–ಆತುರ
ತಂಗು–ವಸ್ತಿಮಾಡು, ಇರು,
ತನಿಖೆ–ವಿಚಾರಣೆ
ತನಿ–ಸವಿ
ತನಿರಸ–ಮಧುರ ರಸ
ತರಹರಿಸು–ಸಹಿಸಿಕೊಳ್ಳು
ತುಯ್ಯು–ಸಾಗಿಸು ಗಾಡಿಹೊಡೆ
ತೆಲ್ಲಿಗ–ಗಾಣಿಗ
ತೊಟ್ಟಿ–ನೀರು ತುಂಬುವ ಹಾದು.
ತೊಂಗಲು–ಗೊಂಚಲು

ದ
ದೂಸಿಗ–ನಿಂದಕ
ದೂರ್ತರ್–ಧೂರ್ತರು
ದೇಸಿಗ–ಪರದೇಶಿ, ಅನಾಥ

ನಚ್ಚು–ಪ್ರೀತಿ
ನಿಗಾ–ಎಚ್ಚರಿಕೆ
ನಿಡು–ಉದ್ದ
ನಿಡುಸರ–ದೀರ್ಘಸ್ವರ
ನಿರ್ವಾಹ–ಗತಿ

ನಿವಾಳಿವಟ್ಟ=ನಿವಾಳಿಸಿಚಲ್ಲುವ
ಸ್ಥಳ (ಭೂತವಿರುವಸ್ಥಳ, ಸ್ಮಶಾನ)
ನೀರವತೆ–ಶಾಂತತೆ, ಸ್ತಬ್ಧತೆ.
ನುಸುಳು–ಜಾರು, ತಪ್ಪಿಸಿಕೊಳ್ಳು
ನೆಗಚು–ಎತ್ತು, ಎತ್ತಿ ಹಾಕು
ನೆಲೆಗಾರ್ತಿ–ನೆಲಸಿದವಳು

ಪ

ಪದಿರುನುಡಿ–ಒಳಗೊಂದು ಹೊರ
ಗೊಂದು ಆಡುವ ಮಾತು
ಪರಿಸರ–ಸುತ್ತಮುತ್ತಲು
ಪಸದನ–ಪ್ರಸಾಧನ (ದ್ಭ)
ಅಲಂಕಾರ
ಪಸಲೆ–ಹಸಿರು ಬೆಳೆದ ಬೈಲು
ಪಂಗು–ಹೆಳವ
ಪಟುಭಟ–ಬಹುಶೂರ
ಪರಿಗ್ರಹಿಸು–ಸ್ವೀಕರಿಸು
ಪಳಿ–ನಿಂದೆ
ಪಕ್ಕರಕ್ಕೆ–ಕುದುರೆಯ ಥಡಿ
ಪಂಚಧಾರಾ–ಕುದುರೆಯ ನಡಿಗೆಯ
ಒಂದು ರೀತಿಯು
ಫಾಸ್ಟ (Fast)–ಉಪವಾಸ
ಪುಡಿಯಾಳು–ಸಣ್ಣ (ಗಿಡ್ಡ)
ಮನುಷ್ಯ
ಪುರೋವೃದ್ಧಿ–ಮುಂದಿನ ಏಳ್ಗೆ
ಪೆರಗನೆಣಿಸು–ಪರನೆಂದು ತಿಳಿ
ಪೊಳ್ತರೆ–ನಸುಕು, ಅರುಣೋದಯ
ಪೊಲ್ಲಮೆ–ಸಲ್ಲದ (ಹೊಲ್ಲ) ಕೆಲಸ

ಬ

ಬನ್ನ–ಬವಣೆ, ದುಃಖ
ಬರಗೂಳು–ಒಣಅನ್ನ
ಬಲ್ಲವ–ಅಡಿಗೆಯವ
ಬಳ್ಳ–ಬಿದಿರಿನ ಮಾಪು
ಬೀರು–ಕಪಾಟು
ಬೋನ–ಪಂಜರ
ಬೃಂಹಿತ–ಆನೆಯ ಧ್ವನಿ
ಬೂಟಾಟಿಕೆ–ಡಂಭಾಚಾರ

ಭ

ಭಂಗಿ–ರೀತಿ

ಮ

ಮಧುಪ–ಜೇನ್ನೊಣ, ತುಂಬಿ
ಮದರ್ಗಂತಿ–ಒಂದು ಬಗೆಯ ಮಲ್ಲಿಗೆ
ಮರಕತ–ಹಸಿರು ರತ್ನ, (ಪಚ್ಚ)
ಮಲ್ಲಗಾಸೆ–ಎದುರಾಟಕ್ಕೆ
ಹೋಗುವ ಮುನ್ನ
ಹಾಕುವ ಕಚ್ಚೆ
(ಗಂಡು ಕಚ್ಚೆ)
ಮಾಳ–ಗದ್ದೆಯ ಹಾಳಿ
ಮಾತವಸಿ–ಮಹಾತಪಸ್ವಿ
ಮುಡಿವಾಳ–ಬಾಳದಬೇರು
ಮೆರಗು–ಕಾಂತಿ
ಮೆಸ್ಸು(mess)–ಊಟ, ಊಟದ
ಮನೆ
ಮೇಧಾವಿ–ಬುದ್ಧಿವಂತ
ಮೊಗಸಾಲೆ–ಪಡಸಾಲೆ

ಯ

ಯೂಪಸ್ತಂಭ–ಯಜ್ಞದಲ್ಲಿ ಪಶು
ವನ್ನು ಕಟ್ಟುವ ಕಂಬ.

ರ

ರಸ–ಪಾದರಸ
ರೂಹು–ರೂಪ
ರೊಪ್ಪ–ದೊಡ್ಡಿ

ಲ

ಲಂಪಟ–ಆಸಕ್ತ, ತೊಡಗಿದ
ಲಾಗೋಡು–ಹತ್ತುವ ಬೆಲೆ
(ಲಾಗವಡ ಎಂದು ಮರಾಠಿ ಶಬ್ದ)
ಲೋಯಿಸರ–ಲವಳಸರ.

ವರಸೆ–ಸರತಿ, ಸಾರಿ
ವಡವಾಗ್ನಿ–ಸಮುದ್ರದಲ್ಲಿ ಅಡಗಿದ ಬೆಂಕಿ

ಶ

ಶಾಕಿನಿ–ರಾಕ್ಷಸಿ,

ಸಲಕರಣೆ–ಸಾಧನ, ಸಾಮಗ್ರಿ
ಸವೆ–ಸಿದ್ಧಮಾಡು
ಸವಿಸು–ಸೇವಿಸು; ರುಚಿನೋಡು
ಸಿಂಜಿನಿ–ಬಿಲ್ಲ ಹೆದೆ
ಸುಹೃದ–ಮಿತ್ರ

ಹ

ಹಂತ–ಮಟ್ಟ, ಆಳತೆ
ಹುಲ್ಲೆ–ಚಿಗರಿ
ಹೃತ್ತರಂಗಿಣಿ–ಹೃದಯದಲ್ಲೇಳುವ ತೆರೆ
ಹೃದಯದ್ರಾವಕ–ಮನಕರಗಿಸುವ

ಜ್ಞ

ಜ್ಞಾತಿಬಾಂಧವ–ಒಂದೇ ಬಗೆಯವನು–ಮನೆತನದವನು.